# ಆತಂಕವಾದದ ಸವಾಲು

ಭದ್ರತೆ, ಸುರಕ್ಷತೆ ಹಾಗೂ ಪೋಲೀಸ್ ವಿಷಯಗಳ
ಬಗ್ಗೆ ವೈಚಾರಿಕ ಲೇಖನಗಳು

ಡಾ. ಡಿ.ವಿ. ಗುರುಪ್ರಸಾದ್






# ಆತಂಕವಾದದ ಸವಾಲು

## ಭದ್ರತೆ, ಸುರಕ್ಷತೆ ಹಾಗೂ ಪೊಲೀಸ್ ವಿಷಯಗಳ ಬಗ್ಗೆ ವೈಚಾರಿಕ ಲೇಖನಗಳು


ಡಾ. ಡಿ.ವಿ. ಗುರುಪ್ರಸಾದ್

ಭಾರತೀಯ ಪೊಲೀಸ್ ಸೇವೆ

ಡೈರೆಕ್ಟರ್ ಜನರಲ್ ಆಫ್ ಪೊಲೀಸ್






ಸಪ್ನ ಬುಕ್ ಹೌಸ್®

3ನೇ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು - 560 009

ದೂರವಾಣಿ : 40114455

**AATHANKAVADADA SAVALU** : - by **Dr. D.V. Guruprasad** and Published by **Sapna Book House (P) Ltd.**, R.O. #11, 3rd Main Road, Gandhinagar, Bangalore- 560 009 Ph: 080-40114455

[KB : 1429]

**ISBN : 978-81-280-1078-1**



**ಪ್ರಥಮ ಮುದ್ರಣ : ಸೆಪ್ಟೆಂಬರ್, 2009**

| | |
|---|---|
| **Pages : vi + 217 = 223** | **Number of Copies : 1000** |
| **Price : 110/-** | **Paper Used : 18.6 Kg (70 gsm) N.S. Maplitho** |
| | **Book Size : 1/8th Demi** |

ಹಂಚಿಕೆದಾರರು : ***ಕರ್ನಾಟಕ ಬುಕ್ ಏಜೆನ್ಸಿ,***
ನಂ. 11, 2ನೇ ಮಹಡಿ, 3ನೇ ಮುಖ್ಯ ರಸ್ತೆ,
ಗಾಂಧಿನಗರ, ಬೆಂಗಳೂರು - 560 009

ಅಕ್ಷರ ಜೋಡಣೆ : DATA LINK, ಬೆಂಗಳೂರು.

ಮುಖಪುಟ ವಿನ್ಯಾಸ : **ಮೋನಪ್ಪ**

ಮುದ್ರಕರು : **ರವಿ ಗ್ರಾಫಿಕ್ಸ್, ಬೆಂಗಳೂರು**

# ಮುನ್ನುಡಿ

ಕಳೆದ ಹಲವಾರು ವರ್ಷಗಳಿಂದ ಕಾನೂನು ಭದ್ರತೆ, ಸುರಕ್ಷತೆ ಹಾಗೂ ಪೊಲೀಸ್ ವ್ಯವಸ್ಥೆಯ ಬಗ್ಗೆ ಲೇಖನಗಳನ್ನು ನಾನು ಬರೆಯುತ್ತಿದ್ದೇನೆ. ''ಪ್ರಜಾವಾಣಿ'' ಹಾಗೂ ''ಸಂಯುಕ್ತ ಕರ್ನಾಟಕ'' ಪತ್ರಿಕೆಗಳಲ್ಲಿ ಇದೇ ವಿಷಯಗಳ ಮೇಲೆ ಸುದೀರ್ಘ ಅಂಕಣಗಳನ್ನು ಬರೆದಿದ್ದೇನೆ. ಪ್ರಜಾವಾಣಿಯಲ್ಲಿ 'ಖಾಕಿ ನೋಟ' ಎಂಬ ಹೆಸರಿನಿಂದಲೂ, ಸಂಯುಕ್ತ ಕರ್ನಾಟಕದಲ್ಲಿ 'ಖಡಕ್ ದೃಷ್ಟಿ ಕೋನ' ಎನ್ನುವ ಹೆಸರಿನಿಂದಲೂ ಮೂಡಿ ಬಂದ ಈ ಅಂಕಣಗಳು ಸಾಕಷ್ಟು ಜನಪ್ರಿಯತೆ ಗಳಿಸಿದವು. ಸಾಮಾನ್ಯ ನಾಗರೀಕರಲ್ಲದೇ ಕಾರ್ಯನಿರತ ಹಾಗೂ ನಿವೃತ್ತ ಪೊಲೀಸ್ ಅಧಿಕಾರಿಗಳು, ನ್ಯಾಯವಾದಿಗಳು ಮತ್ತು ನ್ಯಾಯಾಧೀಶರು ಈ ಲೇಖನಗಳನ್ನು ಮೆಚ್ಚಿಕೊಂಡು ಇವೆಲ್ಲವನ್ನೂ ಸಂಗ್ರಹಿಸಿ ಪುಸ್ತಕ ರೂಪದಲ್ಲಿ ಪ್ರಕಟಿಸಿದರೆ ಹೆಚ್ಚಿನ ಅನುಕೂಲವಾಗುತ್ತದೆ ಎನ್ನುವ ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ. ಇದರ ಫಲವೇ ನಿಮ್ಮ ಕೈಯಲ್ಲಿರುವ ಈ ಹೊತ್ತಿಗೆ.

ಸ್ವಾತಂತ್ರ್ಯ ಬಂದು 60 ವರ್ಷಗಳಾದರೂ ಸಾರ್ವಜನಿಕರಿಗೆ ಪೊಲೀಸರೆಂದರೆ ಏನೋ ಒಂದು ಅವ್ಯಕ್ತ ಭಯ. ತಾವೇ ಅಪರಾಧಕ್ಕೆ ತುತ್ತಾದರೂ ಪೊಲೀಸ್ ಠಾಣೆಗೆ ಹೋಗಿ ಅಪರಾಧದ ಬಗ್ಗೆ ಮಾಹಿತಿ ಕೊಡಲು ಜನರಿಗೆ ಹೆದರಿಕೆ ಇದೆ. ಇದಕ್ಕೆ ಕಾರಣವೂ ಇಲ್ಲದಿಲ್ಲ. ಪೊಲೀಸರು ಸಾರ್ವಜನಿಕರ ಜೊತೆ ನಯವಿನಯದಿಂದ ವರ್ತಿಸದೆ ದಬ್ಬಾಳಿಕೆಯನ್ನು ಮಾಡುತ್ತಾರೆ ಎನ್ನುವ ದೂರುಗಳು ಆಗಿಂದ್ದಾಗ್ಗೆ ಕೇಳಿ ಬರುತ್ತಲೇ ಇವೆ. ಸಾರ್ವಜನಿಕ ಸೇವೆಗಾಗಿಯೇ ನೇಮಕಗೊಂಡಿರುವ ಪೊಲೀಸರು ಸಾರ್ವಜನಿಕರಿಂದ ದೂರ ಹೋದಲ್ಲಿ ಅಪರಾಧ ತಡೆ ಹಾಗೂ ಅಪರಾಧ ಪತ್ತೆ ಸಾಧ್ಯವೇ ಇಲ್ಲ. ಎಲ್ಲಿಯವರೆಗೆ ಪೊಲೀಸರು ಹಾಗೂ ಸಾರ್ವಜನಿಕರಲ್ಲಿ ಸೌಹಾರ್ದತೆ ಹಾಗೂ ಸಮನ್ವಯತೆ ಮೂಡುವುದಿಲ್ಲವೋ ಅಲ್ಲಿಯವರೆಗೆ ಅಪರಾಧಗಳ ಕಡಿವಾಣ ಕಷ್ಟಸಾಧ್ಯ.

ವಿಶ್ವದಾದ್ಯಂತ ಆತಂಕವಾದವು ತೀವ್ರಗೊಳ್ಳುತ್ತಿರುವ ಇತ್ತೀಚಿನ ದಿನಗಳಲ್ಲಿ ಪೊಲೀಸರು ಹಾಗೂ ಸಾರ್ವಜನಿಕರ ಸಹಕಾರ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಆತಂಕವಾದವು ಕ್ಯಾನ್ಸರ್‌ನಂತೆ ಹರಡುವ ಒಂದು ಪಿಡುಗಾಗಿದ್ದು, ಕಳೆದ ಎರಡು ದಶಕಗಳಲ್ಲಿ ಪೆಡಂಭೂತವಾಗಿ ಬೆಳೆದಿದೆ. ಆತಂಕವಾದವನ್ನು ಬಗ್ಗು ಬಡಿಯುವುದರಲ್ಲಿ ಪೊಲೀಸರು ಮತ್ತು ರಕ್ಷಣಾ ಪಡೆಗಳಿಂದ ಮಾತ್ರ ಸಾಧ್ಯವಿಲ್ಲ. ಸಾರ್ವಜನಿಕರ ಸಂಪೂರ್ಣ ಸಹಕಾರವಿಲ್ಲದೆ ಹೋದಲ್ಲಿ ಆತಂಕವಾದವನ್ನು ಎದುರಿಸುವುದು ತೀರ ಕಷ್ಟಸಾಧ್ಯ.

ಈ ಹಿನ್ನೆಲೆಯಲ್ಲಿ ಈ ಪುಸ್ತಕದಲ್ಲಿರುವ ಲೇಖನಗಳು ಸಾರ್ವಜನಿಕರಿಗೆ ಪೊಲೀಸರ ಬಗ್ಗೆ, ಭದ್ರತೆ ಹಾಗೂ ಸುರಕ್ಷತೆ ಬಗ್ಗೆ ಹೆಚ್ಚಿನ ಅರಿವು ಮೂಡಿಸಲು ನೆರವಾಗುತ್ತದೆ ಎನ್ನುವುದು ನನ್ನ ಭಾವನೆ. ಹೀಗಾಗಿ ನನ್ನ ಬಿಡಿ ಲೇಖಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಬೇಕು ಎಂಬ ಬೇಡಿಕೆ ಬಂದಾಗ ನನ್ನ ಹಲವಾರು ಕೃತಿಗಳನ್ನು ಪ್ರಕಟಿಸಿರುವ ಸಪ್ನ ಬುಕ್ ಹೌಸ್ ಸಂಸ್ಥೆಯನ್ನು ನಾನು ಸ್ವಾಭಾವಿಕವಾಗಿಯೇ ಸಂಪರ್ಕಿಸಿದೆ. ಸಂತೋಷದಿಂದಲೇ ಸಪ್ನ ಬುಕ್‌ಹೌಸ್ ಈ ಪುಸ್ತಕದ ಪ್ರಕಟಣೆಗೆ ಮುಂದಾಗಿದೆ.

ಸಪ್ನ ಬುಕ್ ಹೌಸ್‌ನ ಶ್ರೀ. ನಿತಿನ್ ಶಾ ಇವರಿಗೂ, ಶ್ರೀ. ದೊಡ್ಡೇಗೌಡ ಇವರಿಗೂ ನಾನು ಆಭಾರಿಯಾಗಿದ್ದೇನೆ. ನನ್ನ ಎಲ್ಲಾ ಬರವಣಿಗೆಗೂ ಸ್ಫೂರ್ತಿ ನೀಡಿ ಪ್ರಕಟವಾದ ಬರಹಗಳ ಬಗ್ಗೆ ಗುಣಾತ್ಮಕ ಟೀಕೆ ಮಾಡುವ ನನ್ನ ಕುಟುಂಬದ ಸದಸ್ಯರನ್ನು ನಾನು ಹೇಗೆ ಮರೆಯಲಿ? ಈ ಎಲ್ಲಾ ಲೇಖಗಳ ವರ್ಡ್ ಪ್ರೊಸೆಸಿಂಗ್ ಮಾಡಿದ ಶ್ರೀಮತಿ. ರಮ್ಯಲತ ಇವರಿಗೆ ನಾನು ಆಭಾರಿ. ಅಂತೆಯೇ ಉತ್ತಮವಾಗಿ ಈ ಪುಸ್ತಕವನ್ನು ಮುದ್ರಿಸಿದ ರವಿ ಗ್ರಾಫಿಕ್ಸ್‌ನ ಶ್ರೀ.ವಿ.ಆರ್.ನಾಥ್ ಇವರಿಗೂ, ಅಕ್ಷರ ಜೋಡಣೆ ಮಾಡಿದ ಡೇಟಾ ಲಿಂಕ್ ಅವರಿಗೂ ನನ್ನ ವಂದನೆಗಳು.

ನನ್ನ ಬರವಣಿಗೆಯನ್ನು ಮೆಚ್ಚಿ ಆಗ್ಗಿಂದಾಗ್ಗೆ ನನ್ನ ಬೆನ್ನು ತಟ್ಟಿ ನಿರಂತರವಾಗಿ ಬರೆಯಲು ಪ್ರೋತ್ಸಾಹಿಸುತ್ತಿರುವ ಕನ್ನಡದ ಓದುಗರಿಗೆ ನಾನು ಋಣಿ.

ಬೆಂಗಳೂರು ಡಾ. ಡಿ.ವಿ. ಗುರುಪ್ರಸಾದ್

ದಿನಾಂಕ : 10.07.2009

## ಪರಿವಿಡಿ

# 1

# ಮುಂಬೈನ ಆತಂಕವಾದಿ ದಾಳಿ - ಕಲಿಯಬೇಕಾದ ಪಾಠಗಳು

ಆತಂಕವಾದದ ವಿಷಯಕ್ಕೇ ಕೇಂದ್ರೀಕೃತವಾಗಿ ರಾಷ್ಟ್ರ ಮಟ್ಟದಲ್ಲಿ ರಾಜ್ಯ ಪೊಲೀಸ್ ಮುಖ್ಯಸ್ಥರ ಸಮ್ಮೇಳನ ನಡೆದ ಒಂದು ವಾರದ ಅಂತರದಲ್ಲೇ ಎಲ್ಲಾ ವಿಧಗಳಲ್ಲೂ ಸಜ್ಜಾದ ಆತಂಕವಾದಿಗಳು ಮುಂಬೈ ನಗರಕ್ಕೆ ನುಗ್ಗಿ ಅಪಾರ ಪ್ರಮಾಣದ ಸಾವು ನೋವುಗಳನ್ನು ಉಂಟು ಮಾಡಿ ಕೋಟ್ಯಾಂತರ ರೂಪಾಯಿ ಮೌಲ್ಯದ ಆಸ್ತಿ-ಪಾಸ್ತಿಗಳನ್ನು ನಾಶ ಪಡಿಸಿದ್ದಾರೆ. ಈ ಘಟನೆ ಹೇಗೆ ಆಯಿತು? ಯಾವುದರಿಂದ ಆಯಿತು? ಏತಕ್ಕೆ ಆಯಿತು? ಇತ್ಯಾದಿ ವಿಷಯಗಳು ಸುಧೀರ್ಘವಾದ ತನಿಖೆಯ ನಂತರವೇ ಬಹಿರಂಗಗೊಳ್ಳುತ್ತವೆ. ಆದರೆ ಲಭ್ಯ ಇರುವ ಮಾಹಿತಿಗಳಿಂದ ನಾವು ಕೆಲವು ಪಾಠಗಳನ್ನು ಕಲಿಯಬೇಕಾಗಿದೆ.

ಭಯೋತ್ಪಾದಕರು ಸಮುದ್ರದ ಮಾರ್ಗವಾಗಿ ಮುಂಬೈ ಪ್ರವೇಶಿಸಿದ್ದು ಆಶ್ಚರ್ಯಕರ. ಸಮುದ್ರಮಾರ್ಗದಿಂದ ಭಯೋತ್ಪಾದಕರು ದೇಶದೊಳಗೆ ನುಸುಳುವ ಸಾಧ್ಯತೆ ಬಗ್ಗೆ 1993ರ ಮುಂಬೈ ಸ್ಫೋಟದ ನಂತರ ಎಲ್ಲರಿಗೂ ತಿಳಿದಿತ್ತು. ಆಗ ಭಯೋತ್ಪಾದಕರು ಅರಬ್ಬೀ ಸಮುದ್ರದ ಮೂಲಕ ನುಸುಳಿ ಅಪಾರ ಪ್ರಮಾಣದ ಶಸ್ತ್ರಾಸ್ತ್ರಗಳನ್ನು ದೇಶದ ಒಳಗೆ ತಂದಿದ್ದರು.

ಸಮುದ್ರದ ಮೂಲಕ ಮುಂಬೈ ನಗರದ ಮೇಲೂ ಭಯೋತ್ಪಾದಕರು ದಾಳಿ ಮಾಡಬಹುದು ಎಂಬ ಸಂಶಯ ಇದ್ದಾಗಲೂ ಸ್ಥಳೀಯ ಪೊಲೀಸರಾಗಲೀ, ತಟರಕ್ಷಕ ದಳದವರಾಗಲೀ, ನೌಕಾಪಡೆಯವರಾಗಲೀ ಉಗ್ರರ ನುಸುಳುವಿಕೆಯನ್ನು ತಡೆಯುವಲ್ಲಿ ವಿಫಲರಾದದ್ದು ಅಚ್ಚರಿ ಮೂಡಿಸಿದೆ. ಕೋಸ್ಟಲ್ ಸೆಕ್ಯೂರಿಟಿ ಪೊಲೀಸ್ ಎಂಬ ವಿಶೇಷ

ದಳವನ್ನೇ ನಾವು ರಚಿಸಿರುವಾಗ (ನಮ್ಮ ರಾಜ್ಯದಲ್ಲೂ ಈ ದಳ ಕಾರ್ಯಪ್ರವೃತ್ತವಾಗಿದೆ) ಆತಂಕವಾದಿಗಳು ರಾಜಾರೋಷವಾಗಿ ಗೇಟ್ ವೇ ಆಫ್ ಇಂಡಿಯಾಗೆ ಹೇಗೆ ಬಂದು ಇಳಿದರು ಎನ್ನುವ ಪ್ರಶ್ನೆ ಉದ್ಭವವಾಗಿದೆ.

"ಗೇಟ್ ವೇ ಆಫ್ ಇಂಡಿಯಾ ಬಳಿ ದೋಣಿಯಿಂದ ಹತ್ತು ಹನ್ನೆರಡು ಯುವಕರು ಬಂದು ಇಳಿದಿದ್ದನ್ನು ನಾನು ನೋಡಿದೆ. ಅವರಲ್ಲಿ ಒಬ್ಬನನ್ನು ನಾನು ನಿಲ್ಲಿಸಿ ನೀವು ಎಲ್ಲಿಗೆ ಹೋಗುತ್ತಿದ್ದೀರಿ ಎಂದು ಕೇಳಿದಾಗ ಆ ಹದಿಹರೆಯದ ಯುವಕ ನಾವು ಎಲ್ಲಿಗೆ ಹೋದರೆ ನಿನಗೇನು? ನಿನ್ನ ದಾರಿ ನೀನು ನೋಡಿಕೋ" ಎಂದು ಉತ್ತರಿಸಿದ ಎಂದು ಮಹಿಳೆಯೊಬ್ಬಳು ಪತ್ರಿಕೆಯೊಂದಕ್ಕೆ ತಿಳಿಸಿದ್ದಾರೆ. ಆ ಗುಂಪಿನ ಬಗ್ಗೆ ಸಹಜವಾದ ಸಂದೇಹ ಆ ಮಹಿಳೆಗೆ ಬಂದರೂ ಆಕೆ ಕೂಡಲೇ ಪೊಲೀಸ್ ಕಂಟ್ರೋಲ್ ರೂಂಗೆ ತಿಳಿಸದಿದ್ದುದು ದುರದೃಷ್ಟಕರ. ಒಂದು ವೇಳೆ ಆಕೆ ಕೂಡಲೇ ಮಾಹಿತಿ ನೀಡಿದ್ದರೆ ಈ ಅನಾಹುತವನ್ನು ತಪ್ಪಿಸಬಹುದಾಗಿತ್ತೇನೋ! ಸಾರ್ವಜನಿಕರು ಪೊಲೀಸರಿಂದ ದೂರವಾಗಿಯೇ ಉಳಿದಿರುವ ಅಂಶವನ್ನು ಈ ಘಟನೆ ಎತ್ತಿ ತೋರಿಸುತ್ತದೆ. ಇದಲ್ಲದೆ ಪೊಲೀಸರಿಗೆ ಮಾಹಿತಿದಾರರು ಸಾಕಷ್ಟು ಸಂಖ್ಯೆಯಲ್ಲಿ ಇಲ್ಲದಿರುವ ಅಂಶವೂ ವಿಧಿತವಾಗುತ್ತದೆ.

ರಾತ್ರಿ 9.30 ರ ವೇಳೆಗೆ ಸಿಎಸ್‌ಟಿ ರೈಲು ನಿಲ್ದಾಣದಲ್ಲಿ ಹಾಗೂ ತದನಂತರ ಲಿಯೋಪೋಲ್ಡ್ ಬಾರ್‌ನಲ್ಲಿ ಗುಂಡು ಹಾರಿಸಿದ ಘಟನೆ ಬಗ್ಗೆ ಪೊಲೀಸರಿಗೆ ಮಾಹಿತಿ ಮುಟ್ಟಿದಾಗ ಸ್ಥಳೀಯ ಪೊಲೀಸರು ಈ ಘಟನೆಗಳು ಭೂಗತ ಸಾಮ್ರಾಜ್ಯದ ಎರಡು ಗುಂಪುಗಳ ನಡುವೆ ಆದ ಗುಂಡಿನ ಚಕಮಕಿ ಎಂದೇ ಭಾವಿಸಿದರು ಎಂದು ಮೂಲಗಳು ತಿಳಿಸಿವೆ. ಇದೇ ಕಾರಣಕ್ಕಾಗಿಯೋ ಏನೋ ಸರಿಯಾಗಿ ಸಜ್ಜಾಗದೆ ಪೊಲೀಸ್ ತಂಡಗಳು ಸ್ಥಳಕ್ಕೆ ಧಾವಿಸಿ ಭತ್ಸಾಯೋದಕರ ದಾಳಿಗೆ ತುತ್ತಾಗಿವೆ. ಆತಂಕವಾದಿಗಳು ಜನನಿಬಿಡ ಸ್ಥಳಗಳಲ್ಲಿ ಬಾಂಬ್ ಇಟ್ಟು ಪರಾರಿಯಾಗುತ್ತಾರೆ ಎಂದೇ ಭಾವಿಸಿದ್ದವರಿಗೆ ಉತ್ತಮವಾಗಿ ಸಜ್ಜಾದ ಆತ್ಮಹತ್ಯಾ ತಂಡಗಳು ಕಂಡ ಕಂಡಲ್ಲಿ ಗುಂಡು ಹಾಗೂ ಗ್ರೆನೇಡ್‌ಗಳನ್ನು ಹಾರಿಸಬಹುದು ಎನ್ನುವ ಅಂಶ ಇನ್ನೂ ತಿಳಿದಿಲ್ಲ. ಬೆಂಗಳೂರಿನ ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಸೈನ್ಸ್ ಆವರಣದಲ್ಲಿ ಇಬ್ಬರು ಉಗ್ರರು ಗ್ರೆನೇಡ್‌ಗಳನ್ನು ಎಸೆದು ಗುಂಡಿನ ಮಳೆ ಕರೆದಿದ್ದುದನ್ನು ಇಲ್ಲಿ ಸ್ಮರಿಸಬಹುದು. ಆತಂಕವಾದಿಗಳ ದಾಳಿ ಆದಾಗ ಪ್ರತಿದಾಳಿ ನಡೆಸಲು ಸಜ್ಜಾದ ಕಮ್ಯಾಂಡೋಗಳು ಹೋಗಬೇಕಾದ ಅವಶ್ಯಕತೆ ಹೆಚ್ಚಾಗಿದೆ.

ಭಯೋತ್ಪಾದಕರ ದಾಳಿ ನಡೆದ ಸುದ್ದಿ ತಿಳಿದ ಕೂಡಲೇ ಮಹಾರಾಷ್ಟ್ರ ರಾಜ್ಯದ ಭಯೋತ್ಪಾದನಾ ನಿಗ್ರಹ ದಳದ ಮುಖ್ಯಸ್ಥ ಹೇಮಂತ್ ತಮ್ಮ ಸಹೋದ್ಯೋಗಿಗಳಾದ ಅಶೋಕ ಕಾಮ್ಟೆ ಹಾಗೂ ಕಲಾಸ್ಕರ್ ಜತೆ ಒಂದೇ ವಾಹನದಲ್ಲಿ ಸ್ಥಳಕ್ಕೆ ಧಾವಿಸಿದರು. ಅವರು ಕಾಮಾ ಆಸ್ಪತ್ರೆಯ ಬಳಿ ಬಂದಾಗ ಆತಂಕವಾದಿಗಳು ಆಸ್ಪತ್ರೆಯ ಮೇಲೆ ದಾಳಿ ನಡೆಸಿ ಸುಮ್ಮನಾಗಿದ್ದರು. ಪೊಲೀಸ್ ತಂಡ ಕೆಳಗಡೆ ಇಳಿದು ಪಕ್ಕದ ರಸ್ತೆಯೊಂದರಲ್ಲಿ ಹೊರಟಾಗ ಉಗ್ರರು ದಾಳಿ ನಡೆಸಿ ಮೂವರನ್ನೂ ಹತ್ಯೆಮಾಡಿದರು.

ಸಾಮಾನ್ಯವಾಗಿ ಹಿರಿಯ ಪೊಲೀಸ್ ಅಧಿಕಾರಿಗಳ ತಂಡ ಭದ್ರತಾ ಕಾರಣಗಳಿಗಾಗಿ ಒಂದೇ ವಾಹನದಲ್ಲಿ ಪ್ರಯಾಣ ಮಾಡುವುದಿಲ್ಲ. ಅದೇ ರೀತಿ ತೀರಾ ಹಿರಿಯ ಅಧಿಕಾರಿಗಳು ಭಯೋತ್ಪಾದನೆ–ನಕ್ಸಲೀಯ ಘಟನೆಗಳ ಬಗ್ಗೆ ಪ್ರಥಮ ಮಾಹಿತಿ ಬಂದಾಗ ಕೂಡಲೇ ಸ್ಥಳಕ್ಕೆ ಧಾವಿಸುವುದಿಲ್ಲ. ಹಿರಿಯ ಪೊಲೀಸ್ ಅಧಿಕಾರಿಗಳ ಹತ್ಯೆ ಮಾಡುವ ಉದ್ದೇಶದಿಂದಲೇ ನಕ್ಸಲೀಯರು– ಆತಂಕವಾದಿಗಳು ಒಂದು ಕಡೆ ದಾಳಿ ನಡೆಸಿ ಆ ನಂತರ ಅದೇ ಜಾಗದಲ್ಲಿ ಅಡಗಿ ಕುಳಿತು ಪೊಲೀಸ್ ವಾಹನಗಳ ಮೇಲೆ ದಾಳಿ ಮಾಡುತ್ತಾರೆ. ದುರದೃಷ್ಟವಶಾತ್ ಮಹಾರಾಷ್ಟ್ರದ ಹಿರಿಯ ಅಧಿಕಾರಿಗಳು ಕೂಡಲೇ ಸ್ಥಳಕ್ಕೆ ಧಾವಿಸಿ ತಮ್ಮ ಪ್ರಾಣವನ್ನೇ ತ್ಯಾಗ ಮಾಡಿದರು. ಪ್ರಾಯಶಃ ತಾವು ನಾಯಕರಾಗಿ ತಮ್ಮ ಅಧೀನ ಸಿಬ್ಬಂದಿಗೆ ಹುರುಪು ಹಾಗೂ ಧೈರ್ಯ ಕೊಡಲು ತಾವೇ ಮೊದಲು ಸ್ಥಳಕ್ಕೆ ಹೋಗಿ ಕಾದಾಡಬೇಕು ಎನ್ನುವ ಉದಾತ್ತ ಧ್ಯೇಯದಿಂದ ಈ ರೀತಿ ಅವರುಗಳು ಧಾವಿಸಿರಬಹುದು. ಈ ಬಗ್ಗೆ ಇನ್ನು ಮುಂದೆ ಪೊಲೀಸ್ ಹಿರಿಯ ಅಧಿಕಾರಿಗಳು ಸಾಕಷ್ಟು ಎಚ್ಚರ ವಹಿಸಬೇಕಾಗಿದೆ.

ಮುಂಬೈನ ಎರಡು ಹೋಟೆಲ್ ಹಾಗೂ ನಾರಿಮನ್ ಹೌಸ್‌ನಿಂದ ಭಯೋತ್ಪಾದಕರನ್ನು ಹುಡುಕಿ ಹೊರ ತೆಗೆಯಲು ರಕ್ಷಣಾ ಪಡೆಗಳಿಗೆ ಸುಮಾರು 60 ಗಂಟೆಗಳ ಕಾಲ ಬೇಕಾಯಿತು. ಇದಕ್ಕೆ ಮುಖ್ಯ ಕಾರಣ ಹೋಟೆಲ್‌ನಲ್ಲಿ ಅಡಗಿ ಕುಳಿತ ಉಗ್ರರಿಗೆ ತಾವಿದ್ದ ಪ್ರದೇಶದ ಮೂಲೆ ಮೂಲೆಗಳ ಬಗ್ಗೆ ಅರಿವಿತ್ತು ಎನ್ನುವುದು. ದೆಹಲಿ–ಮುಂಬೈನಿಂದ ಬಂದಂತಹ ಕಮಾಂಡೋಗಳಿಗೆ ತಾಜ್ ಹಾಗೂ ಓಬೆರಾಯ್ ಹೋಟೆಲ್‌ಗಳ ಒಳಗಡೆಯ ವಿನ್ಯಾಸ ಹೇಗಿದೆ ಎನ್ನುವ ಅರಿವು ಇರದಿದ್ದುದರಿಂದ ತೊಂದರೆಯಾಯಿತು ಎಂದು ಎನ್‌ಎಸ್‌ಜಿ ಯೋಧರು ಹೇಳಿದ್ದಾರೆ. ಉಗ್ರರು ಈ ಹೋಟೆಲ್‌ಗಳಲ್ಲಿ ಯಾತ್ರಿಕರಂತೆ ಬಂದು ಎರಡು ಮೂರು ದಿನಗಳು ತಂಗಿ ಹೋಟೆಲ್‌ಗಳಲ್ಲಿ ಒಳ ವಿನ್ಯಾಸದ ಬಗ್ಗೆ ಸಂಪೂರ್ಣವಾಗಿ ಅರಿತಿರುವಂತೆ ಕಂಡುಬಂದಿದೆ. ಇಲ್ಲವೇ ಮೊದಲೇ ಅಲ್ಲಿಗೆ ಸಂದರ್ಶಕರಂತೆ ಬಂದು ಒಂದು ಬಾರಿ ಆ ಪ್ರದೇಶಗಳ ಎಲ್ಲಾ ರೀತಿಯ ವ್ಯವಸ್ಥೆ (ಭದ್ರತಾ ವ್ಯವಸ್ಥೆಯನ್ನೂ ಸೇರಿಸಿ) ಗಳ ಬಗ್ಗೆ ಮಾಹಿತಿ ಪಡೆದಿದ್ದಾರೆ ಎಂದು ತೋರುತ್ತದೆ. ಬೇರೆ ದೇಶಗಳ ನಾಗರಿಕರು ಹೋಟೆಲ್‌ಗಳಲ್ಲಿ ತಂಗಬೇಕಾದರೆ ಅವರ ಪಾಸ್‌ಪೋರ್ಟ್ ಇತ್ಯಾದಿ ವಿವರಗಳನ್ನು ಹೋಟೆಲ್‌ಗಳಿಗೆ ನೀಡಬೇಕಾದ್ದು ಅನಿವಾರ್ಯ. ಒಂದು ವೇಳೆ ಇದೇ ಉಗ್ರರು ಈ ಹಿಂದೆ ಓಬೆರಾಯ್/ ತಾಜ್ ಹೋಟೆಲ್‌ನಲ್ಲಿ ತಂಗಿದ್ದರೆ ಈ ಬಗ್ಗೆ ಏಕೆ ಯಾವ ಸಂಶಯವೂ ಯಾರಿಗೂ ಬರಲಿಲ್ಲ ಎನ್ನುವ ಪ್ರಶ್ನೆ ಉದ್ಭವಿಸುತ್ತದೆ. ಅಲ್ಲದೆ ನಮ್ಮ ಪಂಚತಾರಾ ಹೋಟೆಲ್‌ಗಳ ಭದ್ರತಾ ವ್ಯವಸ್ಥೆ ಸರಿ ಇಲ್ಲ ಎನ್ನುವ ಅಂಶವೂ ವೇದ್ಯವಾಗುತ್ತದೆ.

ಮುಂದೆ ಹೀಗಾಗದಿರಬೇಕಾದರೆ ಹೋಟೆಲ್‌ಗಳ ಆಂತರಿಕ ಭದ್ರತಾ ವ್ಯವಸ್ಥೆ ಇನ್ನಷ್ಟು ಉತ್ತಮಗೊಳ್ಳಬೇಕು. ಪ್ರತಿಯೊಂದು ಹೋಟೆಲ್‌ನ ಒಳಗಡೆಯ ಪ್ಲಾನ್‌ನ ಬ್ಲೂ ಪ್ರಿಂಟ್‌ಗಳು, ಸ್ಥಳೀಯ ಪೊಲೀಸರ ಬಳಿ ಇರಲೇಬೇಕು. ಕಮಾಂಡೋಗಳು ಒಂದು ಪ್ರದೇಶಕ್ಕೆ ನುಗ್ಗುವ ಮುನ್ನ ಆ ಜಾಗದ ಒಳಗಡೆಯ ವಿನ್ಯಾಸವನ್ನು ಈ ಬ್ಲೂ ಪ್ರಿಂಟ್ ಅನ್ವಯ ಅಧ್ಯಯನ

ಮಾಡಿ ಯಾವ ರೀತಿ ಅಟ್ಯಾಕ್ ಮಾಡಿದರೆ ಆತಂಕವಾದಿಗಳನ್ನು ಸಮರ್ಥವಾಗಿ ಬಗ್ಗು ಬಡಿಯಬಹುದು ಎನ್ನುವ ಬಗ್ಗೆ ಯೋಜನೆ ರೂಪಿಸಬಹುದಾಗಿದೆ. ಒಂದು ನಗರದ ಪ್ರಮುಖ ಕಟ್ಟಡಗಳ ಒಳ ವಿನ್ಯಾಸಗಳ ಬ್ಲೂ ಪ್ರಿಂಟ್ ಸ್ಥಳೀಯ ಪೊಲೀಸ್ ಠಾಣೆಯಲ್ಲಿ ಇರಲೇಬೇಕು ಎನ್ನುವ ವ್ಯವಸ್ಥೆ ಜಾರಿಗೆ ತರಬೇಕಾಗಿದೆ. ಪೊಲೀಸರು ಕಾರ್ಯಪ್ರವೃತ್ತರಾಗಿರುವ ಸಂದರ್ಭದಲ್ಲೇ ಅದೇ ಸ್ಥಳಗಳಲ್ಲಿ ಸಾರ್ವಜನಿಕರು ಓಡಾಡುತ್ತಿದ್ದುದನ್ನು ನಾವು ಟಿವಿಯಲ್ಲಿ ನೋಡಿದ್ದೇವೆ. ಕಾರ್ಯಾಚರಣೆಯ ಸಂದರ್ಭದಲ್ಲಿ ಸ್ಥಳೀಯ ಪೊಲೀಸರು ಕರ್ಫ್ಯೂ ಜಾರಿ ಮಾಡಿ ಮಾಧ್ಯಮದವರಿಂದ ಹಿಡಿದು ಯಾವ ವ್ಯಕ್ತಿಯೂ ಕಾರ್ಯಾಚರಣೆ ನಡೆಸುವ ಸ್ಥಳದಲ್ಲಿ ಇರದಂತೆ ನೋಡಿಕೊಳ್ಳಬೇಕಾಗಿತ್ತು. ಇದು ಆದಂತೆ ತೋರಿಲ್ಲ.

ಸಿನಿಮಾ ಶೂಟಿಂಗ್‌ನಂತೆ ಪೊಲೀಸರ ಪ್ರತಿಯೊಂದು ಚಲನವಲನವನ್ನೂ ಟಿವಿಗಳಲ್ಲಿ ಲೈವ್ ರಿಲೇ ಮಾಡಲು ಅನುಕೂಲ ಮಾಡಿಕೊಟ್ಟದ್ದು ಸರಿಯಲ್ಲ. ಟಿವಿಯಲ್ಲಿ ಪೊಲೀಸರ ಮುಂದಿನ ಹೆಜ್ಜೆ ಏನು ಎಂದು ಪ್ರಸಾರ ಮಾಡಿದರೆ ಅಡಗಿರುವ ಆತಂಕವಾದಿಗಳು ತಮ್ಮ ರಕ್ಷಣೆ ಇನ್ನೂ ಉತ್ತಮವಾಗಿ ಮಾಡಿಕೊಳ್ಳಲು ಸಾಧ್ಯ. ಆತಂಕವಾದಿಗಳ ವಿರುದ್ಧದ ಕಾರ್ಯಾಚರಣೆಯಲ್ಲಿ ಗುಟ್ಟು ಬಹು ಮುಖ್ಯ ಎಂದು ದೃಶ್ಯ ಮಾಧ್ಯಮ ಮಿತ್ರರು ಅರಿಯಬೇಕಾಗಿದೆ. ಅಲ್ಲದೆ ಕಾರ್ಯಾಚರಣೆಯ ಅತಿ ಸಮೀಪದಲ್ಲೇ ಮಾಧ್ಯಮ ಪ್ರತಿನಿಧಿಗಳು ಇದ್ದದ್ದರಿಂದ ಉಗ್ರರ ಹಾಗೂ ಪೊಲೀಸರ ಮಧ್ಯೆ ನಡೆದ ಗುಂಡಿನ ಚಕಮಕಿಯಲ್ಲಿ ಹಲವಾರು ಮಾಧ್ಯಮ ಪ್ರತಿನಿಧಿಗಳಿಗೆ ಗಾಯಗಳಾಗಿವೆ. ಇನ್ನು ಮುಂದೆ ಹೀಗಾಗಬಾರದು.

# 2

## ಮುಂಬೈ ದಾಳಿ - ಪೊಲೀಸ್ ಲೋಪದೋಷಗಳು

26.11.2008 ರ ಆತಂಕವಾದಿ ಘಟನೆಯನ್ನು ಪೊಲೀಸರು ಮತ್ತಿತರ ಸರ್ಕಾರಿ ಇಲಾಖೆಗಳು ಸಮರ್ಥವಾಗಿ ಎದುರಿಸಿದರೋ ಹೇಗೆ ಎನ್ನುವ ಬಗ್ಗೆ ಪ್ರಧಾನ್ ಸಮಿತಿ ತನ್ನ ವರದಿಯನ್ನು ಈಗಾಗಲೇ ಮಹಾರಾಷ್ಟ್ರ ಸರ್ಕಾರಕ್ಕೆ ನೀಡಿದೆ. ವರದಿಯಲ್ಲಿ ಏನಿದೆ ಎನ್ನುವ ಅಂಶಗಳು ಬಹಿರಂಗವಾಗಿಲ್ಲ. ಆದರೆ ಮುಂಬೈನ ಕೆಲವು ವೃತ್ತ ಪತ್ರಿಕೆಗಳು ಘಟನೆಯ ಕೆಲವು ವಿವರಗಳನ್ನು ಈಗಾಗಲೇ ಪ್ರಕಟಿಸಿವೆ. ಈ ವಿವರಗಳಿಂದ ಮುಂಬೈ ಪೊಲೀಸರು ಆತಂಕವಾದಿ ಘಟನೆಯನ್ನು ಎದುರಿಸಲು ಸರಿಯಾಗಿ ಸಜ್ಜಾಗಿರದಿದ್ದುದು ವ್ಯಕ್ತವಾಗುತ್ತವೆ.

ಮುಂಬೈ ಪೊಲೀಸರಿಗೆ ಆತಂಕವಾದಿ ಘಟನೆಗಳು ಹೊಸತೇನಲ್ಲ. 1992 ಡಿಸೆಂಬರ್ ನಂತರ ಅವರು ಸುಮಾರು 14 ಆತಂಕವಾದಿ ಘಟನೆಗಳನ್ನು ಎದುರಿಸಿದ್ದಾರೆ. ಈ ಘಟನೆಗಳಲ್ಲಿ 250 ಕ್ಕೂ ಹೆಚ್ಚು ನಾಗರೀಕರು ಸಾವನ್ನಪ್ಪಿದ್ದಾರೆ.

ನವೆಂಬರ್ 26, 2008ರಂದು ಸಮುದ್ರ ತೀರದಿಂದ ಮುಂಬೈಗೆ ಬಂದಿಳಿದ ಆತಂಕವಾದಿಗಳು ಮೊಟ್ಟಮೊದಲಿಗೆ ಹೋದದ್ದು ಕೊಲಾಬಾದ ಲಿಯೋಪಾಲ್ಡ್ ರೆಸ್ಟೋರಂಟ್‌ಗೆ. ರಾತ್ರಿ 9-30 ಸುಮಾರು ಅಲ್ಲಿಗೆ ನುಗ್ಗಿದ ಆತಂಕವಾದಿಗಳು ಯದ್ವಾತದ್ವಾ ಗುಂಡು ಹಾರಿಸಿ 2-3 ಗ್ರೇನೇಡ್‌ಗಳನ್ನು ಬಳಸಿದರು. ಲಿಯೋಪಾಲ್ಡ್ ಕೆಫೆ ಎದುರು ಸಾಲಿನಲ್ಲಿಯೇ ಕೊಲಾಬಾ ಪೊಲೀಸ್ ಠಾಣೆ ಇದೆ. ಪೊಲೀಸ್ ಠಾಣೆಯಲ್ಲಿ ಇದ್ದ ಮೂರು ಜನ ಸಿಬ್ಬಂದಿ ಗುಂಡಿನ ಶಬ್ದ ಕೇಳಿದ ತಕ್ಷಣ ಏನಾಗುತ್ತಿದೆ ಎಂದು ನೋಡಲು ಹೊರಗೆ ಬಂದಿದ್ದು, ಯಾವುದೇ

ಆಯುಧವನ್ನು ತರದೇ ಇದ್ದುದರಿಂದ ಪೊಲೀಸ್ ಠಾಣೆಗೆ ವಾಪಸ್ಸಾಗಿದ್ದಾರೆ. ಅವರು ತಮ್ಮ ಆಯುಧಗಳ ಜೊತೆ ಬರುವಷ್ಟರಲ್ಲಿ ಆತಂಕವಾದಿಗಳು ತಮ್ಮ ಕೆಲಸ ಮುಗಿಸಿ ತಾಜ್ ಮಹಲ್ ಹೋಟೆಲ್‌ಗೆ ಹೊರಟು ಹೋಗಿದ್ದಾರೆ. ಇಷ್ಟರಲ್ಲಿ ಕೊಲಾಬಾ ಪೊಲೀಸರು ಲಿಯೋಪಾಲ್ಡ್ ಕೆಫೆಯಲ್ಲಿ ಸತ್ತು ಬಿದ್ದ ಹಾಗೂ ಗಾಯಗೊಂಡಿದ್ದ ವ್ಯಕ್ತಿಗಳ ಬಗ್ಗೆ ಪೊಲೀಸ್ ಕಂಟ್ರೋಲ್ ರೂಂಗೆ ಸುದ್ದಿ ಮುಟ್ಟಿಸಿದ್ದಾರೆ.

ಮುಂಬೈ ಪೊಲೀಸ್ ಕಂಟ್ರೋಲ್ ರೂಂ ಕೊಲಾಬಾದ ಘಟನೆ ಬಗ್ಗೆ ಮೊಟ್ಟಮೊದಲಿಗೆ ಮುಂಬೈ ಪೊಲೀಸ್ ಕಮೀಷನರ್‌ಗೆ ಸುದ್ದಿ ಮುಟ್ಟಿಸಿ ಇತರ ಅಧಿಕಾರಿಗಳಿಗೂ ಹಾಗೂ ಪೊಲೀಸ್ ಠಾಣೆಗಳಿಗೂ ವಿಷಯ ತಿಳಿಸಿದೆ. ಘಟನೆ ಬಗ್ಗೆ ಅರಿತ ಮುಂಬೈ ಪೊಲೀಸ್ ಕಮೀಷನರ್ ಓಬೆರಾಯ್ ಹೋಟೆಲ್‌ಗೆ ಧಾವಿಸಿದ್ದಾರೆ [ಈ ವೇಳೆಗೆ ಓಬೆರಾಯ್ ಹೋಟೆಲ್‌ನಲ್ಲೂ ಆತಂಕವಾದಿಗಳು ನುಗ್ಗಿದ ಸುದ್ದಿ ಪೊಲೀಸರಿಗೆ ಬಂದಿದೆ] ಮುಂಬೈ ಪೊಲೀಸರ ನಿಯಮದಂತೆ ಇಂತಹ ಘಟನೆ ಆದನಂತರ ಕಾನೂನು ಸುವ್ಯವಸ್ಥೆ ಜಂಟಿ ಪೊಲೀಸ್ ಕಮೀಷನರ್ ಪೊಲೀಸ್ ನಿಯಂತ್ರಣ ಕೊಠಡಿಗೆ ಹೋಗಿ ಪರಿಸ್ಥಿತಿ ಎದುರಿಸಲು ಪೋಲಿಸರನ್ನು ನಿಯೋಜನೆ ಮಾಡುವ ಕಾರ್ಯವನ್ನು ನೋಡಿಕೊಳ್ಳಬೇಕಾಗಿತ್ತು. ಆದರೆ ಅವರು ಕಂಟ್ರೋಲ್ ರೂಂಗೆ ಹೋಗದೇ ಓಬೆರಾಯ್ ಹೋಟೆಲ್ ಬಳಿ ಹೋಗಿ ಕಮಿಷನರ್‌ರನ್ನು ಕಂಡರು ಎಂದು ತಿಳಿದುಬಂದಿದೆ. ಅಪರಾಧ ವಿಭಾಗದ ಜಂಟಿ ಕಮೀಷನರ್‌ರವರು ಕಂಟ್ರೋಲ್ ರೂಂಗೆ ಹೋದರು ಎನ್ನಲಾಗಿದೆ.

ಇಷ್ಟರಲ್ಲಿ ತಮ್ಮ ಮನೆಗೆ ಹೋಗಿದ್ದ ಭಯೋತ್ಪಾದನೆ ನಿಗ್ರಹ ದಳದ ಮುಖ್ಯಸ್ಥ ಹೇಮಂತ್ ಕರ್ಕರೆ ಹಲ್ಲೆಯ ಬಗ್ಗೆ ತಿಳಿದು ಛತ್ರಪತಿ ಶಿವಾಜಿ ರೈಲ್ವೇ ನಿಲ್ದಾಣಕ್ಕೆ ಧಾವಿಸಿದ್ದಾರೆ. ರೈಲ್ವೆ ನಿಲ್ದಾಣಕ್ಕೆ ಅವರು ಬಂದಾಗ ಅಲ್ಲಿಗೆ ಆಗಲೇ ಬಂದಿದ್ದ ರೈಲ್ವೇ ವಿಭಾಗದ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ರೈಲ್ವೇ ನಿಲ್ದಾಣದಲ್ಲಿ ದಾಳಿ ನಡೆಸಿದ ಆತಂಕವಾದಿಗಳು ಕಾಮಾ ಆಸ್ಪತ್ರೆ ಬಳಿ ಹೋದರು ಎಂದು ಅವರಿಗೆ ತಿಳಿಸಿದರು ಎನ್ನಲಾಗಿದೆ. ಕರ್ಕರೆ ತಮ್ಮ ಸಿಬ್ಬಂದಿಯೊಡನೆ ಹತ್ತಿರದಲ್ಲೇ ಇದ್ದ ಕಾಮಾ ಆಸ್ಪತ್ರೆಗೆ ಕಾಲ್ನಡಿಗೆಯಲ್ಲಿ ಹೋಗಿದ್ದಾರೆ.

ಇಷ್ಟರಲ್ಲಿ ಸುದ್ದಿ ತಿಳಿದ ಅಡಿಷನಲ್ ಕಮೀಷನರ್ ಅಶೋಕ್ ಕಾಮ್ಟೆ ಆಜಾದ್ ಮೈದಾನ ಪೊಲೀಸ್ ಠಾಣೆಗೆ ಧಾವಿಸಿದ್ದಾರೆ. ಠಾಣೆಯ ಸಮೀಪದಲ್ಲೇ ಇರುವ ಕಾಮಾ ಆಸ್ಪತ್ರೆ ಬಳಿ ಆತಂಕವಾದಿಗಳು ಇದ್ದಾರೆ ಎಂಬ ಸುದ್ದಿ ತಿಳಿದು, ಕಾರಿನಲ್ಲಿ ಆಸ್ಪತ್ರೆ ಬಳಿ ಹೋಗಲು ಹೆಚ್ಚು ಸಮಯ ಬೇಕಾಗುವುದೆಂದು ಭಾವಿಸಿ ಅವರೂ ತಮ್ಮ ಸಿಬ್ಬಂದಿಯೊಡನೆ ಕಾಲ್ನಡಿಗೆಯಲ್ಲಿ ಕಾಮಾ ಆಸ್ಪತ್ರೆ ಬಳಿ ಬಂದಿದ್ದಾರೆ. ಇಷ್ಟೆಲ್ಲಾ ನಡೆಯುತ್ತಿರುವಾಗ ಪೊಲೀಸ್ ಇನ್ಸ್‌ಪೆಕ್ಟರ್ ಸಲಸ್ಕರ್ ಇವರಿಗೆ ಕಂಟ್ರೋಲ್ ರೂಂ ನಲ್ಲಿದ್ದ ಅಪರಾಧ ವಿಭಾಗದ ಜಂಟಿ ಕಮೀಷನರ್ ಕಾಮಾ ಆಸ್ಪತ್ರೆಯ ಬಳಿ ಗುಂಡಿನ ದಾಳಿ ನಡೆಯುತ್ತಿದೆ ಎಂದು ತಿಳಿಸಿದ್ದಾರೆ. ಸಲಸ್ಕರ್ ನೇರವಾಗಿ ಕಾಮಾ ಆಸ್ಪತ್ರೆಯ ಹಿಂಬಾಗಿಲ ಕಡೆ ತಮ್ಮ ವಾಹನದಲ್ಲಿ ಧಾವಿಸಿದ್ದಾರೆ. ಸಲಸ್ಕರ್ ಇವರ ವಾಹನವನ್ನು ನೋಡಿದ ಹೇಮಂತ್ ಕರ್ಕರೆ ಮತ್ತು ಅಶೋಕ್ ಕಾಮ್ಟೆ ತಮ್ಮ

ಸಿಬ್ಬಂದಿಯೊಂದಿಗೆ ಅದೇ ವಾಹನವನ್ನು ಹತ್ತಿ ಆತಂಕವಾದಿಗಳನ್ನು ಹಿಮ್ಮೆಟ್ಟಿಸಲು ಮುನ್ನುಗ್ಗಿದ್ದಾರೆ. ಈ ವಾಹನದ ಮೇಲೆ ಆತಂಕವಾದಿಗಳು ಹಲ್ಲೆ ನಡೆಸಿ ಅವರನ್ನು ಗುಂಡಿಟ್ಟು ಕೊಂದ ಬಗ್ಗೆ ನಮಗೆಲ್ಲ ಅರಿವಿದೆ.

ಏತನ್ಮಧ್ಯೆ ಕೊಲಾಬಾ ಡಿಸಿಪಿ ವಿಶ್ವಾಸ ನಂಗ್ರೆ ಪಾಟೀಲ್ 5 ಜನ ಪೊಲೀಸರ ಜೊತೆ ತಾಜ್‌ಮಹಲ್ ಹೋಟೆಲಿಗೆ ಹಿಂಬಾಗದಿಂದ ತಲುಪಿದ್ದಾರೆ. ಈ ತಂಡ ಅಲ್ಲಿಗೆ ಬರುವಷ್ಟರಲ್ಲಿ ಹೋಟೆಲ್ ಲಿಯೋಪಾಲ್ಡ್ ಕೆಫೆಯಲ್ಲಿ ಧಾಳಿ ನಡೆಸಿದ್ದ ಇಬ್ಬರು ಆತಂಕವಾದಿಗಳಲ್ಲದೆ ಇನ್ನೂ ಇಬ್ಬರು ಆತಂಕವಾದಿಗಳು ನುಸುಳಿದ್ದಾರೆ. ನಂಗ್ರೆ ಪಾಟೀಲ್ ತಂಡದಲ್ಲಿ ಪಿಸ್ತೂಲು ಹೊರತು ಬೇರೆ ಆಯುಧಗಳು ಇರಲಿಲ್ಲ ಎನ್ನಲಾಗಿದೆ. ಈ ತಂಡ ಹೋಟೆಲ್ ಪ್ರವೇಶಿಸಿದಾಗ ಹೋಟೆಲ್‌ನ ಸಿಬ್ಬಂದಿ ತಮ್ಮ ಸಿಸಿಟಿವಿ ಕ್ಯಾಮರಾ ಚಿತ್ರಗಳನ್ನು ನೋಡುವಂತೆ ತಂಡವನ್ನು ಹೋಟೆಲ್ ಭದ್ರತಾ ಕಂಟ್ರೋಲ್ ರೂಂಗೆ ಕರೆದೊಯ್ದರು ಎನ್ನಲಾಗಿದೆ. ತಾಜ್‌ಮಹಲ್ ಹೋಟೆಲ್ ಸಿಸಿಟಿವಿ ಕ್ಯಾಮೆರಾ ಚಿತ್ರಗಳನ್ನು ಅವಲೋಕಿಸಿದರೆ, 4 ಜನ ಆತಂಕವಾದಿಗಳು ಮೊದಲು 551 ನಂಬರ್ ಕೊಠಡಿಯೊಳಗೆ ನುಗ್ಗಿ ಅಲ್ಲಿ 12 ನಿಮಿಷಗಳ ಕಾಲ ತಂಗಿದ್ದರೆಂದೂ, ಅನಂತರ ಅಲ್ಲಿಂದ ಕೊಠಡಿ ಸಂ.632ಕ್ಕೆ ಹೋದರು ಎಂದೂ ಗೊತ್ತಾಗುತ್ತದೆ. ರಾತ್ರಿ 10-27ರಿಂದ ರಾತ್ರಿ 10-39 ನಿಮಿಷದವರೆಗೆ ಆತಂಕವಾದಿಗಳು ರೂಮ್ ನಂ.551 ರಲ್ಲಿ ಇದ್ದು, ಅನಂತರ ಪಕ್ಕದ ಕೊಠಡಿಗೆ ಹೋಗಿ, ಅಲ್ಲಿದ್ದ ಅತಿಥಿಯೊಬ್ಬನನ್ನು ಎಳೆದುಕೊಂಡು ಬಂದು 551ನೇ ಕೊಠಡಿಯಲ್ಲಿ ದೂಡಿದ ಚಿತ್ರಗಳು ಲಭ್ಯವಾಗಿದೆ. ರಾತ್ರಿ 10-54ನಿಮಿಷಕ್ಕೆ 551 ನೇ ಕೊಠಡಿಯಿಂದ ಒಬ್ಬ ಆತಂಕವಾದಿ ಹೊರಗಡೆ ಬಂದು ಅಕ್ಕಪಕ್ಕದಲ್ಲಿ ಯಾರಾದರೂ ಇದ್ದಾರೆಯೇ ಎಂದು ಗಮನಿಸಿ ಮತ್ತೆ ರೂಮಿನ ಒಳಗೆ ಹೋಗುತ್ತಾನೆ. ಅನಂತರ ರಾತ್ರಿ 11-13ನಿಮಿಷಕ್ಕೆ 4 ಜನ ಆತಂಕವಾದಿಗಳು ಕೊಠಡಿಯಿಂದ ಹೊರ ಬಂದು ಅಲ್ಲಿ ಇಲ್ಲಿ ಓಡಾಡಿ ಮಧ್ಯ ರಾತ್ರಿ 12-38 ನಿಮಿಷಕ್ಕೆ ಕೊಠಡಿ ಸಂ.632ಗೆ ಹೋದಂತೆ ಚಿತ್ರಗಳು ತೋರಿಸುತ್ತದೆ. ಬೆಳಗಿನ ಜಾವ 2-34 ನಿಮಿಷಕ್ಕೆ 4 ಜನ ಆತಂಕವಾದಿಗಳೂ ರೂಮಿನ ಹೊರಗಡೆ ಬಂದು ಅದೇ ಮಹಡಿಯಲ್ಲಿ ಬೆಂಕಿ ಹಚ್ಚಿದ ದೃಶ್ಯಗಳು ಸಿಸಿಟಿವಿ ಕ್ಯಾಮರಾದಲ್ಲಿ ಬಂಧಿತವಾಗಿವೆ ಎಂದು ತಿಳಿದು ಬಂದಿದೆ. ಹನ್ನೆರಡು ನಿಮಿಷ ಆತಂಕವಾದಿಗಳು 551ನೇ ಕೊಠಡಿಯಲ್ಲಿ ಇದ್ದಾಗ ಅವರ ಮೇಲೆ ಪೊಲೀಸರು ಏಕೆ ಧಾಳಿ ನಡೆಸಲಿಲ್ಲ ಎಂದು ಗೊತ್ತಾಗಿಲ್ಲ.

ಆತಂಕವಾದಿಗಳು ರೂಂ ಸಂ.632 ರ ಒಳಗಡೆ ಹೋದಾಗ ಹೋಟೆಲ್‌ನ ಭದ್ರತಾ ಸಿಬ್ಬಂದಿ ಡಿಸಿಪಿ ಪಾಟೀಲ್‌ಗೆ 632 ಕೊಠಡಿಗೆ ದಾಳಿ ಮಾಡಿ ಆತಂಕವಾದಿಗಳನ್ನು ಹಿಡಿಯಲು ತಾಕೀತು ಮಾಡಿದರೆಂದೂ ಡಿಸಿಪಿ ಪಾಟೀಲ್‌ರವರು ಮುಂಬೈ ಪೋಲೀಸ್ ಕಮೀಷನರ್ ರವರನ್ನು ಈ ಬಗ್ಗೆ ಸಂಪರ್ಕಿಸಿದರೆಂದೂ ಪೊಲೀಸ್ ಕಮೀಷನರ್ ಹೆಚ್ಚಿನ ಪೊಲೀಸ್ ಬಲ ಸ್ಥಳಕ್ಕೆ ಬರುವವರೆಗೆ ಕಾಯಲು ಸೂಚಿಸಿದರೆಂದು ತಿಳಿದುಬಂದಿದೆ. ಆದರೆ ಸುಮಾರು 120 ಮಂದಿ ಸಶಸ್ತ್ರ ಪೊಲೀಸ್ ಅಧಿಕಾರಿಗಳು ತಾಜ್‌ಮಹಲ್ ಹೋಟೆಲ್‌ಗೆ ಮಧ್ಯರಾತ್ರಿ

ವೇಳೆಗೇ ಬಂದರೂ ಬೆಳಗಿನ ಜಾವ 8 ಗಂಟೆಗೆ ಎನ್‌ಎಸ್‌ಜಿ ಅಧಿಕಾರಿಗಳು ಬರುವವರೆಗೆ ಆತಂಕವಾದಿಗಳ ವಿರುದ್ಧ ಅಲ್ಲಿದ್ದ ಪೊಲೀಸರು ಯಾವುದೇ ಕ್ರಮ ತೆಗೆದುಕೊಳ್ಳಲಿಲ್ಲವೆಂದು ಹೇಳಲಾಗುತ್ತಿದೆ. ಇದು ಸತ್ಯವೇ ಆಗಿದ್ದಲ್ಲಿ ಇಲ್ಲೂ ಪೊಲೀಸರು ಎಡವಿದ್ದಾರೆ.

ಆತಂಕವಾದಿಗಳ ಹಲ್ಲೆ ನಡೆದ ರಾತ್ರಿ ಪೊಲೀಸ್ ಅಧಿಕಾರಿಗಳು ಕೆಲ ಪತ್ರಿಕೆಗಳು ವರದಿ ಮಾಡಿದಂತೆ ನಡೆದುಕೊಂಡಿದ್ದೇ ನಿಜವಾದರೆ ಹಲವಾರು ಪೊಲೀಸ್ ಲೋಪಗಳನ್ನು ಗುರುತಿಸಬಹುದಾಗಿದೆ. ಮೊದಲಿಗೆ ಕೊಲಾಬಾ ಪೊಲೀಸ್ ಠಾಣೆಯ ಸಿಬ್ಬಂದಿ ಲಿಯೋಪಾಲ್ಡ್ ಕೆಫೆಗೆ ಆಯುಧಗಳಿಲ್ಲದೇ ಹೋದದ್ದು ಸರಿಯಲ್ಲ. ಗುಂಡಿನ ಶಬ್ದ ಕೇಳಿದ ಮೇಲೆ ಅವರು ಸಶಸ್ತ್ರರಾಗಿ ಹೆಚ್ಚಿನ ಸಂಖ್ಯೆಯಲ್ಲಿ ಹೋಗಬೇಕಾಗಿತ್ತು. ಆಗ ಅವರು ಇಬ್ಬರು ಆತಂಕವಾದಿಗಳನ್ನು ಸಮರ್ಥವಾಗಿ ಎದುರಿಸಬಹುದಾಗಿತ್ತು.

ಮುಂಬೈ ಕಮೀಷನರ್ ಪೊಲೀಸ್ ನಿಯಂತ್ರಣ ಕೊಠಡಿಗೆ ಹೋಗದೇ ಒಬೆರಾಯ್ ಹೋಟೆಲ್ ಒಳ ಹೋಗಿದ್ದು ಸರಿಯಾದ ಕ್ರಮವಲ್ಲ. ಪೊಲೀಸ್ ಮುಖ್ಯಸ್ಥರು ಘಟನೆ ನಡೆಯುವ ಜಾಗಗಳಿಗೆ ಹೋಗಲೇ ಬಾರದು. ಹೇಗೆ ಸೇನಾ ಮುಖ್ಯಸ್ಥರು ಖುದ್ದಾಗಿ ಯುದ್ಧದಲ್ಲಿ ಭಾಗವಹಿಸುವುದಿಲ್ಲವೋ ಹಾಗೆ ಪೊಲೀಸ್ ಮೇಲಾಧಿಕಾರಿಗಳು ಖುದ್ದಾಗಿ ಘಟನೆ ನಡೆಯುತ್ತಿರುವ ಸ್ಥಳಕ್ಕೆ ಧಾವಿಸಬಾರದು. ಹಿರಿಯ ಅಧಿಕಾರಿಗಳ ಕರ್ತವ್ಯ, ಅಂತಹ ಘಟನೆ ನಡೆದಾಗ ಪೊಲೀಸ್ ನಿಯಂತ್ರಣ ಕೋಣೆಗೆ ಧಾವಿಸಿ ಸಂಬಂಧಪಟ್ಟ ಅಧಿಕಾರಿಗಳನ್ನು ಸಂಪರ್ಕಿಸಿ ಯಾವ ಯಾವ ಅಧಿಕಾರಿಗಳು ಯಾವ ಯಾವ ಜಾಗಕ್ಕೆ ಹೋಗಬೇಕು, ಹೇಗೆ ಕರ್ತವ್ಯ ನಿರ್ವಹಿಸಬೇಕು ಎನ್ನುವುದನ್ನು ನಿಯಂತ್ರಿಸಬೇಕು. ಸ್ಥಳದಲ್ಲಿರುವ ಅಧಿಕಾರಿಗಳ ಜೊತೆ ಸಂಪರ್ಕ ಗಳಿಸಿ ಅವರು ಹೇಗೆ ಮುಂದೆ ಸಾಗಬೇಕು ಎಂದು ನಿರ್ದೇಶನ ನೀಡಬೇಕು. ಸರಿಯಾದ ನಿರ್ದೇಶನ ಇಲ್ಲದ ಕಾರಣದಿಂದಲೇ ಒಬ್ಬೊಬ್ಬ ಅಧಿಕಾರಿ ಒಂದೊಂದು ಜಾಗಕ್ಕೆ ಧಾವಿಸಿದ್ದಾರೆ.

ಕಾಮಾ ಆಸ್ಪತ್ರೆ ಒಳ ಆತಂಕವಾದಿಗಳು ನುಸುಳಿದ್ದಾರೆ ಎಂಬ ಸುದ್ದಿ ತಿಳಿದ ಕೂಡಲೇ ಇಬ್ಬರು ಹಿರಿಯ ಅಧಿಕಾರಿಗಳು ಕೆಲವೇ ಸಿಬ್ಬಂದಿಯನ್ನು ಜೊತೆ ಮಾಡಿಕೊಂಡು ಆಸ್ಪತ್ರೆಗೆ ಧಾವಿಸಿದ್ದಾರೆ. ಈ ಇಬ್ಬರೂ ಹೆಚ್ಚಿನ ಕರ್ತವ್ಯ ಪ್ರಜ್ಞೆಯನ್ನು ಮೆರೆದು ಮಡಿದರಾದರೂ ಇಬ್ಬರೂ ಒಟ್ಟಾಗಿ ಒಂದೇ ಜಾಗಕ್ಕೆ ಹೋದದ್ದು ಸರಿಯಲ್ಲ.

ಯಾವುದೇ ಆತಂಕವಾದಿ ಘಟನೆ ನಡೆದರೆ, ಅದನ್ನು ಯಾವ ರೀತಿ ಎದುರಿಸಬೇಕು ಎನ್ನುವ ಬಗ್ಗೆ ಪೂರ್ವ ಯೋಜನೆ ತಯಾರಿಸಿ ಯಾರು ಯಾರು ಯಾವ ಕರ್ತವ್ಯ ನಿರ್ವಹಿಸಬೇಕು ಎನ್ನುವ ಪಟ್ಟಿ ಮಾಡಿಕೊಂಡಿರಬೇಕು. ಇದಕ್ಕೆ Standard Operating Procedure ಎನ್ನುತ್ತಾರೆ ಮುಂಬೈನಲ್ಲಿಯೂ ಈ ರೀತಿಯ ಎಸ್‌ಒಪಿ 2004 ರಲ್ಲೇ ತಯಾರು ಮಾಡಿ 2007ರಲ್ಲಿ ಅವನ್ನು ಪರಿಷ್ಕರಿಸಲಾಗಿತ್ತು ಎಂದು ಮುಂಬೈನ ಮಾಜಿ ಪೊಲೀಸ್ ಕಮೀಷನರ್ ಅನಾಮಿ ರಾಯ್ ಹೇಳುತ್ತಾರೆ. ಅವರ ಆ ನಿಯಮಗಳನ್ನು 2008 ರಲ್ಲಿ ಏಕೆ ಪಾಲಿಸಲಿಲ್ಲ ಎನ್ನುವುದೇ ಆಶ್ಚರ್ಯಕರ.

ಎನ್‌ಎಸ್‌ಜಿ ಪಡೆ ದೆಹಲಿಯಿಂದ ಮುಂಬೈಗೆ ಬರಲು ವಿಳಂಬವಾದ ಬಗ್ಗೆ ಈಗಾಗಲೇ ಎಲ್ಲರಿಗೂ ತಿಳಿದಿದೆ. ಕೇಂದ್ರ ಸರ್ಕಾರವನ್ನು ರಾಜ್ಯ ಸರ್ಕಾರದ ಅಧಿಕಾರಿಗಳು ಸಂಪರ್ಕ ಮಾಡುವುದರಲ್ಲಿ ವಿಳಂಬವಾಯಿತು. ಘಟನೆಯ ಬಗ್ಗೆ ಅಧಿಕೃತವಾಗಿ ರಾಜ್ಯದ ಮುಖ್ಯ ಕಾರ್ಯದರ್ಶಿಯವರಿಗೇ ತಡವಾಗಿ ತಿಳಿಯಿತು ಎಂದು ಪತ್ರಿಕೆಯೊಂದು ಬರೆದಿದೆ. ಇದು ನಿಜವಾಗಿದ್ದಲ್ಲಿ ಅಚಾತುರ್ಯವೇ.

ಪ್ರಧಾನ್ ಸಮಿತಿ ವರದಿ ಪ್ರಕಟವಾದಾಗ ಮುಂಬೈ ಪೊಲೀಸರು ಈ ಘಟನೆಯ ಬಗ್ಗೆ ಏನು ಕ್ರಮ ಕೈಗೊಂಡರು ಎಂಬ ಹೆಚ್ಚಿನ ಮಾಹಿತಿ ದೊರೆಯುತ್ತದೆ.

ಈ ಘಟನೆಯಿಂದ ದೇಶದ ಇತರ ಪೊಲೀಸರು ಸಾಕಷ್ಟು ಪಾತ ಕಲಿಯಬೇಕಾಗಿದೆ.

# 3

## ಆತಂಕವಾದಿಯ ‘ಚಹರೆ’

ಇಂಗ್ಲೆಂಡ್‌ನಲ್ಲಿ ಗ್ಲಾಸ್ಗೋ ವಿಮಾನ ನಿಲ್ದಾಣಕ್ಕೆ ಸ್ಫೋಟಕಗಳನ್ನು ತುಂಬಿದ ಜೀಪೊಂದನ್ನು ಡಿಕ್ಕಿ ಹೊಡೆಸಿದ ವ್ಯಕ್ತಿ ನಮ್ಮ ರಾಜ್ಯದಿಂದ ಇಂಜಿನಿಯರಿಂಗ್ ಪದವಿ ಗಳಿಸಿ, ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಇಂಗ್ಲೆಂಡಿಗೆ ಹೋಗಿದ್ದಂತಹವ ಎಂಬ ಸುದ್ದಿ ಎಲ್ಲರಲ್ಲೂ ಗಾಬರಿ ಮೂಡಿಸಿದೆ. ಇದೇ ಘಟನೆಗೆ ಸಂಬಂಧಪಟ್ಟಂತೆ ಇಬ್ಬರು ವೈದ್ಯರನ್ನು ದಸ್ತಗಿರಿ ಮಾಡಿದ ನಂತರ, ವಿದ್ಯಾವಂತರಾದ ಜನ ಅದು ಹೇಗೆ ಆತಂಕವಾದಿಗಳಾದರು ಎಂಬ ಅಚ್ಚರಿ ಜನಮನದಲ್ಲಿ ಉಂಟಾಗಿದೆ. ಸುಶಿಕ್ಷಿತರು ಕಟ್ಟುಪಾಡುಗಳಿಗೆ ಬದ್ಧರಾಗಿರುತ್ತಾರೆ, ಭಯೋತ್ಪಾದಕತೆಯಿಂದ ದೂರ ಇರುತ್ತಾರೆ ಎಂದು ನಂಬಿದವರಿಗೆ ಆಘಾತವೇ ಆಗಿದೆ.

ಆತಂಕವಾದಿ ಎಂದರೆ ಭಯವನ್ನು ಹುಟ್ಟಿಸುವ ಕೃತ್ಯಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಂಡವನು ಎಂದು ಅರ್ಥ. ಆತ ಸಾಮಾನ್ಯ ನಾಗರೀಕರಲ್ಲಿ ಭಯವನ್ನು ಹುಟ್ಟಿಸುವ ಕೃತ್ಯ ಎಸಗುತ್ತಾನೆ. ಆತನೇನು ಎರಡು ದೇಶಗಳ ಮಧ್ಯ ನಡೆಯುವ ಯುದ್ಧದಲ್ಲಿ ಭಾಗವಹಿಸುವವನಲ್ಲ. ಕೆಲವೊಂದು ರಾಜಕೀಯ, ಧಾರ್ಮಿಕ, ಮತೀಯ, ಪ್ರಾಂತೀಯ ಮತ್ತು ಸಾಮಾಜಿಕ ಉದ್ದೇಶಗಳ ಈಡೇರಿಕೆಗಾಗಿ ಆತ ಭಯೋತ್ಪಾದಕ ಕೃತ್ಯ ನಡೆಸುತ್ತಾನೆ. ತನ್ನ ಶತ್ರುವನ್ನು ಹೇಗಾದರೂ ಮಾಡಿ ಮಣಿಸಲೇ ಬೇಕು ಎನ್ನುವುದು ಆತಂಕವಾದಿಯ ಉದ್ದೇಶ. ಆತ ಎಸಗುವ ಕೃತ್ಯಗಳು ಪೂರ್ವಯೋಜಿತವಾಗಿದ್ದು ಅವನ್ನು ನಡೆಸಲು ಪೂರಕವಾದ

ತರಬೇತಿ. ಹಣ. ಮಾಹಿತಿ. ಹಾಗೂ ಇತರ ಸಹಚರರ ಸಹಕಾರ ಅಗತ್ಯವಾಗಿರುತ್ತದೆ. ಹುಟ್ಟಿನಿಂದಲೇ ಯಾರೂ ಉಗ್ರನಾಗುವುದಿಲ್ಲ. ತರಬೇತಿಯಿಂದ ಆಗುತ್ತಾನೆ!

ಆತಂಕವಾದಿಗಳಿಗೂ ಸೈನಿಕರಿಗೂ ಒಂದು ರೀತಿಯ ಹೋಲಿಕೆ ಇದೆ. ಇಬ್ಬರೂ ಯುದ್ಧ ಮಾಡುವವರು. ಎದುರಾಳಿಯ ಹತ್ಯೆ ಮಾಡುವುದಕ್ಕೆ ಹಿಂಜರಿಯದವರು. ಇಬ್ಬರೂ ತಾವು ಬಲವಾಗಿ ನಂಬಿದಂತಹ ತತ್ವಗಳಿಗೆ ಪ್ರಾಣವನ್ನು ಕೊಡಲೂ ಹಿಂದೆ ಮುಂದೆ ನೋಡದವರು. ಆದರೆ ಇವರಿಬ್ಬರಲ್ಲಿರುವ ಮುಖ್ಯ ವ್ಯತ್ಯಾಸವೆಂದರೆ ಆತಂಕವಾದಿ ನಿರಾಯುಧರಾದ ಅಮಾಯಕರನ್ನು ಕೊಲ್ಲಲೂ ಹೇಸುವುದಿಲ್ಲ. ಆದರೆ ಸೈನಿಕ ಆಯುಧಧಾರಿ ಎದುರಾಳಿಯನ್ನು ಮಾತ್ರ ಕೊಲ್ಲಲು ಬಯಸುವವನು.

ಆತಂಕವಾದಿಗಳ ಮನಸ್ಸು ಹೇಗೆ ಕೆಲಸ ಮಾಡುತ್ತದೆ? ಎಲ್ಲಾ ಆತಂಕವಾದಿಗಳೂ ಒಂದೇ ರೀತಿಯ ಮನೋಪ್ರವೃತ್ತಿಯನ್ನು ಹೊಂದಿರುವವರೇ? ಅವರು ಮನೋವಿಕಲ್ಪಕ್ಕೆ ಗುರಿಯಾಗಿರಬಹುದೇ ಎಂಬ ವಿಷಯದ ಬಗ್ಗೆ ಹಲವಾರು ದಶಕಗಳಿಂದ ಮನೋವಿಜ್ಞಾನಿಗಳು ಜಗತ್ತಿನಾದ್ಯಂತ ಸಂಶೋಧನೆ ಮಾಡಿದ್ದಾರೆ. ಮಾಡುತ್ತಲೂ ಇದ್ದಾರೆ.

## ಅಪರಾಧದ ಆನಂದ!

ಅವರ ಒಮ್ಮತದ ಅಭಿಪ್ರಾಯವೆಂದರೆ ಆತಂಕವಾದಿಗಳೆಲ್ಲರೂ ಮನೋರೋಗದಿಂದ ಬಳಲುವವರಲ್ಲ ಎನ್ನುವುದು. ಮನೋರೋಗ ಹೊಂದಿರುವ ಅಪರಾಧಿಗಳಿಗೇ ಅಪರಾಧ ಶಾಸ್ತ್ರದಲ್ಲಿ psychopath – ಸೈಕೋಪಾತ್ – ಒಂದು ಸ್ಥಾನ ಇದೆ. ಸರಣಿ ಕೊಲೆಗಡುಕರು– ತಮಾಷೆಗಾಗಿ ಕೊಲೆ ಮಾಡುವವರು, ಅಮಾಯಕರನ್ನು ಕೊಂದು ತೀಟೆ ತೀರಿಸಿಕೊಳ್ಳುವಂತಹ ವ್ಯಕ್ತಿಗಳು–ಜ್ಯಾಕ್ ದಿ ರಿಪ್ಪರ್, ರಾಮನ್ ರಾಘವ ಮುಂತಾದವರು– ಸಮಾಜದಲ್ಲಿ ಸಾಕಷ್ಟು ಕಂಡುಬಂದಿದ್ದಾರೆ. ಇವರುಗಳಿಗೆ ಅಪರಾಧ ಮಾಡುವುದರಿಂದ ಒಂದು ರೀತಿಯ ಸಂತೃಪ್ತಿ, ಇಲ್ಲವೇ ಆನಂದದ ಭಾವನೆ ಬರುತ್ತದೆ.

ಆದರೆ ಆತ್ಮಾಹುತಿ ಮಾಡಿಕೊಳ್ಳುವ ಆತಂಕವಾದಿಗಳಾಗಲೀ, ಸ್ಫೋಟಕಗಳನ್ನು ಸಿಡಿಸಿ ಅಮಾಯಕರ ಹತ್ಯೆ ಮಾಡುವ ಭಯೋತ್ಪಾದಕರಾಗಲೀ ಸೈಕೋಪಾತ್‌ಗಳು ಅಲ್ಲ ಎಂದು ಮನೋವಿಜ್ಞಾನಿಗಳು ಅಭಿಪ್ರಾಯ ಪಡುತ್ತಾರೆ. ಇದಕ್ಕೆ ಕಾರಣ ಇಲ್ಲದಿಲ್ಲ. ಆತಂಕವಾದೀ ಸಂಘಟನೆಗಳಲ್ಲಿ ಸೈಕೋಪಾತ್‌ಗಳಿಗೆ ಸ್ಥಾನವೇ ಇಲ್ಲ ಎನ್ನುವುದನ್ನು ನಾವು ಅರಿಯಬೇಕು. ಏಕೆಂದರೆ ಆತಂಕವಾದಿಯಾಗಿ ಕೆಲಸ ಮಾಡಬೇಕಾದವರು ಒಂದು ರೀತಿಯ ಶಿಸ್ತನ್ನು ರೂಢಿಸಿಕೊಳ್ಳಬೇಕು ಮೇಲಿನವರ ಆದೇಶ ಪಾಲಿಸಬೇಕು. ಸೈಕೋಪಾತ್‌ಗಳು ಈ ರೀತಿಯ ವಾತಾವರಣಕ್ಕೆ ಒಗ್ಗುವಂತಹ ವ್ಯಕ್ತಿಗಳು ಆಗದ್ದರಿಂದ ಆತಂಕವಾದೀ ಚಟುವಟಿಕೆಗಳಲ್ಲಿ ತೊಡಗುವ ಬಹುತೇಕ ಜನ ಸೈಕೋಪಾತ್‌ಗಳಲ್ಲ ಎನ್ನಬಹುದಾಗಿದೆ.

ಮನೋರೋಗವಿಲ್ಲದಿದ್ದಲ್ಲಿ ಇವರು ಏಕೆ ಬಾಂಬ್‌ಗಳನ್ನು ಬಳಸಿ ಮುಗ್ಧರ ಹತ್ಯೆ ಮಾಡುತ್ತಾರೆ? ತಮ್ಮ ಜೀವವನ್ನೇ ಪಣಕ್ಕೆ ಇಟ್ಟು ಭಯೋತ್ಪಾದಕ ಕೃತ್ಯಗಳನ್ನು ಏಕೆ ಮಾಡುತ್ತಾರೆ ಎನ್ನುವ ಪ್ರಶ್ನೆ ಸಾಮಾನ್ಯವಾಗಿ ನಮ್ಮ ಮುಂದೆ ಬರುತ್ತದೆ.

ಹಲವಾರು ಆತಂಕವಾದಿಗಳು ಜಗತ್ತಿನಾದ್ಯಂತ ಪೋಲೀಸರ ಕೈಗೆ ಸಿಕ್ಕಿ ಬಿದ್ದಿರುವುದರಿಂದ ಅವರುಗಳು ಮಾಡಲು ಹೊರಟಿದ್ದ ಆತಂಕವಾದೀ ಕೃತ್ಯಗಳಿಗೆ ಪ್ರೇರೇಪಣೆ ಏನು. ಆತಂಕವಾದಿಗಳು ಎಂತಹ ಸಾಮಾಜಿಕ ವರ್ಗದಿಂದ ಬಂದವರು ಇತ್ಯಾದಿ ವಿಷಯ ಅರಿತುಕೊಳ್ಳಲು ಸ್ವಲ್ಪಮಟ್ಟಿಗೆ ಸಾಧ್ಯವಾಗಿದೆ.

## ಪಾಪಪ್ರಜ್ಞೆಯ ಕೊರತೆ

ಆತಂಕವಾದಿಗಳಿಗೆ ಪಾಪಪ್ರಜ್ಞೆ ಇರುವುದಿಲ್ಲ. ತಾವು ಉದ್ದೇಶಿಸಿರುವ ಗುರಿಗಾಗಿ ನಿರಾಯುಧರನ್ನು, ಅಮಾಯಕರನ್ನು ಹತ್ಯೆ ಮಾಡುವುದು ಪಾಪವಲ್ಲ ಎಂದು ಅವರು ತಿಳಿಯುತ್ತಾರೆ. ಪಾಪ-ಪುಣ್ಯಗಳ ಪರಿವೆಯಲ್ಲಿ ಅವರುಗಳು ಇತರರಿಗಿಂತ ಭಿನ್ನರು. ತಮ್ಮ ಕೃತ್ಯ ಕೆಟ್ಟದ್ದಲ್ಲ, ಈ ಕೃತ್ಯ ಮಾಡುವುದರಿಂದ ತಮ್ಮ ಕಲ್ಪನೆಯ ಸಮಾಜಕ್ಕೆ ಒಳಿತಾಗುತ್ತದೆ ಎಂದು ಎಲ್ಲ ಆತಂಕವಾದಿಗಳೂ ಭಾವಿಸುತ್ತಾರೆ.

ಇಂತಹ ಭಾವನೆಗಳು ಅವರ ಮನದಲ್ಲಿ ಅಚ್ಚಳಿಯದೆ ಮೂಡಲು ಸೈದ್ಧಾಂತಿಕ ಮನಪರಿವರ್ತನೆ ತೀರಾ ಅವಶ್ಯ. ಸಾಮಾನ್ಯವಾಗಿ ಆತಂಕವಾದೀ ಸಂಘಟನೆಗಳು ತೀರಾ ಸಣ್ಣ ವಯಸ್ಸಿನಿಂದಲೇ ಅಂದರೆ 10 ರಿಂದ 16 ವರ್ಷಗಳ ಒಳಗೆ, ತಮ್ಮ ಸದಸ್ಯರಾಗಬಲ್ಲಂತಹ ವ್ಯಕ್ತಿಗಳ ಮನಪರಿವರ್ತನೆಯಲ್ಲಿ ತೊಡಗುತ್ತವೆ. ಆತಂಕವಾದೀ ಸಂಘಟನೆ ಧಾರ್ಮಿಕ ತಳಹದಿಯದಾದರೆ ಅಲ್-ಕೈದಾ, ಲಷ್ಕರ್-ಎ-ತೊಯ್ಬಾ ಇತ್ಯಾದಿ. 'ತಾವು ಅನುಸರಿಸುವ ಧರ್ಮವು ಯಾವ ರೀತಿ ಇತರ ಧರ್ಮಗಳಿಂದ ತುಳಿತಕ್ಕೆ ಒಳಗಾಗಿದೆ. ತಮ್ಮ ಧರ್ಮವೇ ಜಗತ್ತಿನ ಅತಿ ಶ್ರೇಷ್ಠ ಧರ್ಮ, ಧರ್ಮದ ರಕ್ಷಣೆಯನ್ನು ಕೂಡಲೇ ಮಾಡದಿದ್ದರೆ ತಮ್ಮ ಧರ್ಮವೇ ನಾಶವಾಗುತ್ತದೆ. ತಾವು ನಡೆಸುವ ಯುದ್ಧ-ಧರ್ಮ ಯುದ್ಧ- ಈ ಯುದ್ಧದಲ್ಲಿ ಯಾರು ಸಾವನ್ನಪ್ಪುತ್ತಾರೋ ಅವರಿಗೆ ಸದ್ಗತಿ ದೊರೆಯುತ್ತದೆ ಎನ್ನುವ ಮಾತುಗಳನ್ನು ಪದೇ ಪದೇ ಹೇಳಿ ಒಂದು ರೀತಿ ಬ್ರೈನ್‌ವಾಷ್ ಮಾಡಲಾಗುತ್ತದೆ. ಧರ್ಮಕ್ಕಾಗಿ ಹೋರಾಡುವವನಿಗೆ ಸಮಾಜದಲ್ಲಿ ಉನ್ನತ ಸ್ಥಾನ ಸಿಗುತ್ತದೆ ಎಂದೂ ಹೇಳಲಾಗುತ್ತದೆ.

ಧಾರ್ಮಿಕ ತಳಹದಿಯಂತೆಯೇ ರಾಜಕೀಯ ತಳಹದಿಯ ಮೇಲೆಯೂ ಆತಂಕವಾದೀ ಸಂಘಟನೆಗಳು ಕಾರ್ಯಪ್ರವೃತ್ತವಾಗಿದೆ. ಉದಾಹರಣೆಗೆ ಎಲ್‌ಟಿಟಿಇ, ಇಲ್ಲವೇ ಸ್ಪೇನ್ ದೇಶದ ಬಾಸ್ಕ್ ಸಂಘಟನೆಗಳು ಇತ್ಯಾದಿ. ಇವುಗಳ ಸದಸ್ಯರ ಉದ್ದೇಶ ರಾಜಕೀಯ ಲಾಭ ಹಾಗೂ ತಮ್ಮದೇ ಆದ ದೇಶವೊಂದರ ಸ್ಥಾಪನೆ. ರಾಷ್ಟ್ರೀಯ ಚಳುವಳಿಗಾಗಿ ಮಡಿಯುವುದು ಒಳ್ಳೆಯದು ಎಂದು ಇಲ್ಲಿ ಬೋಧಿಸಲಾಗುತ್ತದೆ.

## ವೇಗ ಸ್ಪಂದನೆ

ಯುವಜನಾಂಗ ಈ ರೀತಿಯ ಪ್ರೇರೇಪಣೆಗಳಿಗೆ ವೇಗನೇ ಸ್ಪಂದಿಸುತ್ತದೆ. ಬಿಸಿ ರಕ್ತ ಇರುವುದರಿಂದ ತನ್ನ ಧರ್ಮಕ್ಕಾಗಿ ಅಥವಾ ತನ್ನ ರಾಷ್ಟ್ರಕ್ಕೆ ಸೇವೆ ಮಾಡಬೇಕೆಂಬ ಕನಸುಗಳಿಗಾಗಿ ಪ್ರಾಣ ತೆರಲು ಯುವಕರು ಹಿಂದೇಟು ಹಾಕುವುದಿಲ್ಲ. ಆತಂಕವಾದೀ ಸಂಘಟನೆಗಳ ಬೆನ್ನೆಲುಬೇ ಯುವಕರು. ರಾಜೀವ್ ಗಾಂಧಿ ಹತ್ಯೆಗೆ ಕಾರಣಳಾದ ಆತ್ಮಹತ್ಯಾ ಬಾಂಬರ್ ಧನು ಸೇರಿ ಆತ್ಮಾಹುತಿ ಮಾಡಿಕೊಂಡ ಹಲವಾರು ಆತಂಕವಾದಿಗಳು 30–35 ವರ್ಷಗಳಿಗಿಂತ ಕಿರಿಯರು ಎನ್ನುವುದು ಗಮನಾರ್ಹ. ಈಗಂತೂ ಆತಂಕವಾದೀ ಸಂಘಟನೆಗಳು ಹದಿಮೂರರಿಂದ ಹದಿನೈದು ವರ್ಷ ವಯಸ್ಸಿನ ಬಾಲಕ ಬಾಲಕಿಯರನ್ನೂ ತಮ್ಮ ದುರುದ್ದೇಶಗಳಿಗೆ ಬಳಸಿಕೊಳ್ಳುವುದು ಸಾಮಾನ್ಯವಾಗಿಬಿಟ್ಟಿದೆ.

ಆತಂಕವಾದೀ ಸಂಘಟನೆಯ ಉದ್ದೇಶಗಳು ಏನೇ ಆಗಿರಲೀ ಪ್ರತಿಯೊಬ್ಬ ಆತಂಕವಾದಿಯೂ ಗುಂಪಿನ ಸದಸ್ಯನಾಗಿಯೇ ಕಾರ್ಯನಿರ್ವಹಿಸಬೇಕಾಗುವ ಅನಿವಾರ್ಯತೆ ಇದೆ. ಮನೋವಿಜ್ಞಾನೀ ಪ್ರೊ. ಜ್ಯೂಸೀರ ಪ್ರಕಾರ ಪ್ರತಿಯೊಬ್ಬ ವ್ಯಕ್ತಿಗೆ ತಾನು ಇನ್ನೊಬ್ಬರಿಂದ ಪ್ರೀತಿಸಲ್ಪಡುವುದಿಲ್ಲ ಎನ್ನುವ ಭಯ ಇದ್ದೇ ಇರುತ್ತದೆ. ಯಾವುದಾದರೊಂದು ಗುಂಪಿನ ಸದಸ್ಯನಾದಾಗ ಈ ಭಯ ಸ್ವಲ್ಪ ಮಟ್ಟಿಗೆ ನಿವಾರಣೆಯಾಗುತ್ತದೆ.

ತಾನು ಸಾಗುತ್ತಿರುವ ಹಾದಿ ಸರಿ ಅಲ್ಲ ಎಂದು ಯಾವನಾದರೂ ಆತಂಕವಾದಿಗೆ ಅನಿಸಿದಲ್ಲಿ. ಅಥವಾ ಆತನ ಮನದಲ್ಲಿ ಶಂಕೆ ಮೂಡಿದಲ್ಲಿ ಆತ ಇರುವ ಗುಂಪು ಅವನನ್ನು ಮತ್ತೆ ಸಂಘಟನೆಯ ಗುರಿ ಮುಟ್ಟುವ ಪ್ರಚೋದನಾ ಕಾರ್ಯವನ್ನು ಮಾಡುತ್ತದೆ ಹಾಗೂ ತನ್ನ ಹಾದಿಗೆ ಮತ್ತೆ ತರುತ್ತದೆ. ಎಷ್ಟೋ ಬಾರಿ ಆತಂಕವಾದಿಗಳ ಮನದಲ್ಲಿ ಮೂಡುವ ಶಂಕೆ, ತಾನು ನ್ಯಾಯಕ್ಕಾಗಿ ಹೋರಾಡುವಾಗ ಅಮಾಯಕರನ್ನು ಕೊಲ್ಲುವುದು ಅನ್ಯಾಯವಲ್ಲವೇ ಎನ್ನುವುದು. ಇಂತಹ ಶಂಕೆಗಳನ್ನು ಗುಂಪಿನ ಇತರ ಸದಸ್ಯರು ದೂರಮಾಡಿ ಅಮಾಯಕರ ಹತ್ಯೆ ಧ್ಯೇಯಸಾಧನೆಗೆ ಅವಶ್ಯ ಎಂದು ತಿಳಿಸುತ್ತಾರೆ.

## ಗುಂಪಿನ ಮನಃಸ್ಥಿತಿ

ಆತಂಕವಾದಿಯ ಮನದಾಳವನ್ನು ಅರಿಯಬೇಕಾದರೆ ಆತ ಕಾರ್ಯನಿರ್ವಹಿಸುವ ಆತಂಕವಾದೀ ಗುಂಪಿನ ಮನೋಸ್ಥಿತಿಯನ್ನು ಮೊದಲಿಗೆ ಅರಿಯಬೇಕಾಗುತ್ತದೆ. ಮೊಟ್ಟಮೊದಲಿಗೆ ಆತಂಕವಾದೀ ಸಂಘಟನೆ ತಾನು ಮಾಡುತ್ತಿರುವ ಕೃತ್ಯದಿಂದ ಉತ್ತಮ ಜಗತ್ತನ್ನು ನಿರ್ಮಾಣ ಮಾಡಬಹುದು. ಇದರಿಂದ ಭಗವಂತನ ಕೃಪೆಗೆ ಪಾತ್ರರಾಗಬಹುದು. ಹಾಗೂ ಸಮುದಾಯದ ಅಭಿವೃದ್ಧಿಗೆ ಕಾರಣರಾಗಬಹುದು ಎಂದು ಸಂಘಟನೆ ನಂಬಿರುತ್ತದೆ.

ತಾನು ಚರಿತ್ರಾರ್ಹ ಘಟನೆಯೊಂದರಲ್ಲಿ ಪಾಲ್ಗೊಳ್ಳುತ್ತಿದ್ದೇನೆ ಸೆಪ್ಟೆಂಬರ್ 9 ರಂದು ನ್ಯೂಯಾರ್ಕ್ ನಗರದಲ್ಲಿ ನಡೆದ ಘಟನೆ ಚರಿತ್ರಾರ್ಹವೇ ಎಂದು ಆತಂಕವಾದಿಗೆ ಒಂದು ರೀತಿಯ ಅಮಲು ಬರಿಸಲಾಗುತ್ತದೆ. ಆತ ಒಬ್ಬ ಹೀರೋ, ಸಮುದಾಯದ ಇತರರಿಗೆ

ಅವನು ಮಾದರಿ ಎಂದು ತಿಳಿಸಲಾಗುತ್ತದೆ. ಹೀಗಾಗಿ ಆತಂಕವಾದಿಯು ಸ್ವಂತ ಮನಸ್ಸಿನಿಂದ ಯೋಚಿಸುವುದನ್ನು ಬಿಟ್ಟು ತನ್ನ ಗುಂಪಿನ ಒಟ್ಟಾರೆ ಮನಸ್ಸಿನಿಂದ ಯೋಚಿಸಲು ಆರಂಭಿಸುತ್ತಾನೆ. ತಾನು ಮಾಡುವ ಕೃತ್ಯ ಗುಂಪಿನ ಇಲ್ಲವೇ ಸಮುದಾಯದ ಒಳಿತಿಗಾಗಿ ಮಾಡುವ ಕೃತ್ಯ ಎಂದು ಆತ ಭಾವಿಸಲಾರಂಭಿಸುತ್ತಾನೆ. ಹೀಗಾಗಿ ಆತಂಕವಾದಿ ಶೀಘ್ರ ಪರಿವರ್ತನೆ ಆಗುವಂತಹ ಮನವನ್ನು ಹೊಂದಿರುತ್ತಾನೆ ಎಂದು ಹೇಳಬಹುದು.

ಆತಂಕವಾದೀ ಕೃತ್ಯಗಳನ್ನು ಗುಟ್ಟಾಗಿಯೇ ಮಾಡಬೇಕಾಗಿರುವುದರಿಂದ ಆತಂಕವಾದಿಯು ಸಮಾಜದಿಂದ ದೂರ ಇರಲು ಬಯಸುತ್ತಾನೆ. ತನ್ನ ಗುಂಪಿನ ಇತರ ಸದಸ್ಯರ ಜತೆ ಮಾತ್ರ ಆತ ಬೆರೆಯಲು ಇಚ್ಛಿಸುತ್ತಾನೆ. ತನ್ನ ಕುಟುಂಬದ ಸದಸ್ಯರ ಜತೆಯೂ ಆತ ಮಾತನಾಡಲು ಇಷ್ಟಪಡುವುದಿಲ್ಲ. ತಾನೊಂದು ಮಹತ್ಕಾರ್ಯವನ್ನು ಮಾಡುತ್ತಿದ್ದೇನೆ ಎನ್ನುವ ಭಾವನೆ ಅವನಲ್ಲಿರುತ್ತದೆ. ಬೆಂಗಳೂರಿನ ತಂದೆ ತಾಯಿಯೊಂದಿಗೆ ಗ್ಲಾಸ್ಗೋ ದಾಳಿಯ ಆರೋಪಿ ಕಫೀಲ್ ಅಹ್ಮದ್ ಮಾತನಾಡಿದಾಗ ತಾನೊಂದು ದೊಡ್ಡ ಪ್ರಾಜೆಕ್ಟ್ ಮಾಡಲು ಹೊರಟಿದ್ದೇನೆ ಇದರ ಸಫಲತೆಗಾಗಿ ಭಗವಂತನಲ್ಲಿ ಪ್ರಾರ್ಥಿಸಿ ಎಂದು ಹೇಳಿರುವ ವರದಿ ಸ್ಮರಿಸಬಹುದು.

ಅಪಾಯವನ್ನು ಎದುರಿಸಲು ಖುಷಿ ಆಗುತ್ತದೆ. ಆದರೆ ತಾನು ಅಪಾಯವನ್ನು ಎದುರಿಸಬೇಕಾಗುತ್ತದೆ ಎನ್ನುವ ಆತಂಕ ಅವನ ಮನದಲ್ಲಿ ಮೂಡಿದಾಗ ಅದನ್ನು ಹೋಗಲಾಡಿಸಲು ಆತ ತನ್ನ ಸಹ ಆತಂಕವಾದಿಗಳ ಜತೆ ಬೆರೆತು ಭಯವನ್ನು ಮರೆಯುತ್ತಾನೆ. "ದಿ ತಾಲಿಬಾನ್" ಎಂಬ ಕೃತಿಯನ್ನು ಬರೆದ ಅಹ್ಮದ್ ರಷೀದ್‌ರ ಪ್ರಕಾರ ಆತಂಕವಾದೀ ಸಂಘಟನೆಗಳಿಗೆ ಹೊಸದಾಗಿ ಸೇರುವವರು ತಮ್ಮ ಪೂರ್ವಕಾಲವನ್ನು ಮರೆತಿರುತ್ತಾರೆ; ಅವರಿಗೆ ಭವಿಷ್ಯದ ಬಗ್ಗೆ ಚಿಂತೆಯಿರುವುದಿಲ್ಲ. ವರ್ತಮಾನವೇ ಎಲ್ಲವೂ ಎಂದು ಅವರು ತಿಳಿಯುತ್ತಾರೆ. ಪಂಜಾಬಿನಲ್ಲಿ ಆತಂಕವಾದ ತಾರಕಕ್ಕೇರಿದಾಗ ಹಲವಾರು ಯುವಕರು ಕೇವಲ ಮೋಜಿಗಾಗಿ ಆತಂಕವಾದೀ ಸಂಘಟನೆಗಳನ್ನು ಸೇರಿದ್ದರು ಎಂಬ ಆಘಾತಕಾರೀ ವಿಷಯವೂ ಹೊರಬಂದಿತ್ತು.

ಎಲ್ಲ ಆತಂಕವಾದಿಗಳೂ ಒಂದೇ ಬಗೆಯ ಮಾನಸಿಕ ರೂಪ ಹೊಂದಿರುವುದಿಲ್ಲ. ಆದ್ದರಿಂದ ಆತಂಕವಾದಿಯ ಮಾನಸಿಕ ಸ್ಥಿತಿಗತಿಯ ಬಗ್ಗೆ, ಆತನ ಚಹರೆಯ ಬಗ್ಗೆ, ಆತನ ನಡವಳಿಕೆಯ ಬಗ್ಗೆ ಕರಾರುವಾಕ್ಕಾದ ಚಿತ್ರಣ ನೀಡಲು ಅಸಾಧ್ಯ. ಎಲ್ಲ ಆತಂಕವಾದಿಗಳೂ ಒಂದೇ ರೀತಿಯ ಹಿನ್ನೆಲೆಯಿಂದ ಬರುವಂತಹವರಲ್ಲ. ಏನೂ ಕಲಿಯದ ಹಳ್ಳಿ ಮುಕ್ಕರೂ, ಪಿ.ಎಚ್.ಡಿ. ಪಡೆದ ಅತಿ ಬುದ್ಧಿವಂತರೂ, ಕಡು ಬಡವರೂ, ಅಗರ್ಭ ಶ್ರೀಮಂತರೂ ಆತಂಕವಾದಿಗಳಾಗಿದ್ದಾರೆ; ಆಗುತ್ತಿದ್ದಾರೆ. ಇವರಲ್ಲಿ ಇರುವ ಕಾಮನ್ ಫ್ಯಾಕ್ಟರ್ "ತಮ್ಮ ಕೃತ್ಯ ಸರಿ. ಅದು ಭಗವಂತನನ್ನು ತೃಪ್ತಿ ಪಡಿಸುತ್ತದೆ" ಎನ್ನುವ ನಂಬಿಕೆಯೊಂದೇ.

# 4

# ಭಯೋತ್ಪಾದನೆ ತಡೆಗೆ ನಾಗರಿಕರ ಎಚ್ಚರಿಕೆ ಅಗತ್ಯ

ಜಗತ್ತಿನ ಯಾವುದೇ ಭಾಗದಲ್ಲಿ ಭಯೋತ್ಪಾದಕ ಘಟನೆಗಳು ಸಂಭವಿಸಿದಾಗ ಮಾಧ್ಯಮಗಳು ಎತ್ತುವ ಮೊಟ್ಟಮೊದಲ ಪ್ರಶ್ನೆ ಈ ಘಟನೆಯನ್ನು ತಡೆಯಬಹುದಾಗಿತ್ತೇ ಹಾಗೆ ತಡೆಗಟ್ಟುವಲ್ಲಿ ಗುಪ್ತದಳ ವಿಫಲವಾಯಿತೇ ಎನ್ನುವುದು. ನ್ಯೂಯಾರ್ಕ್ ನಗರದಲ್ಲಿ ಏಕಕಾಲದಲ್ಲಿ World Trade Centre ನಿಂದ ಹಿಡಿದು ಪೆಂಟಗಾನ್ ಕಟ್ಟಡದವರೆಗೆ ಉಗ್ರರ ದಾಳಿ ನಡೆದಾಗ ಅತ್ಯಂತ ಉನ್ನತ ತಾಂತ್ರಿಕ ಸಾಧನಗಳನ್ನು ಹೊಂದಿರುವ ಅಮೆರಿಕದ ಗೂಢಚಾರ ದಳ ಈ ಘಟನೆಯ ಬಗ್ಗೆ ಏಕೆ ಮುನ್ನೆಚ್ಚರಿಕೆ ನೀಡಲಿಲ್ಲ ಎನ್ನುವುದು ಎಲ್ಲರನ್ನೂ ವಿಸ್ಮಯಗೊಳಿಸಿದೆ. ಜುಲೈ ೭ರಂದು ಲಂಡನ್‌ನ ಅಂಡರ್‌ಗ್ರೌಂಡ್ ರೈಲು ನಿಲ್ದಾಣದಲ್ಲಿ ಆತಂಕವಾದಿಗಳು ದಾಳಿ ಮಾಡಿದಾಗಲೂ ಇದೇ ಭಾವನೆ ಮೂಡಿತ್ತು. ಶ್ರೀಲಂಕಾ ಸಚಿವರೊಬ್ಬರು ತಮ್ಮ ಮನೆಯ ಈಜುಕೊಳದಲ್ಲಿಯೇ ಉಗ್ರವಾದಿಗಳ ಗುಂಡೇಟಿಗೆ ಬಲಿಯಾದಾಗಲೂ ಇದೇ ಪ್ರಶ್ನೆ ಉದ್ಭವಿಸಿತ್ತು.

ನ್ಯೂಯಾರ್ಕ್‌ನಲ್ಲಾಗಲೀ, ಲಂಡನ್‌ನಲ್ಲಾಗಲೀ, ಕೊಲಂಬೋದಲ್ಲಾಗಲೀ ಇರುವ ಗುಪ್ತದಳಗಳಿಗೆ ಹಾಗೂ ಪೋಲೀಸ್ ಸಿಬ್ಬಂದಿಗಳಿಗೆ ಕೊಡಮಾಡಲಾಗಿರುವ ತಾಂತ್ರಿಕ ಸೌಲಭ್ಯಗಳು ಅತ್ಯುನ್ನತ ದರ್ಜೆಯದ್ದಾಗಿದ್ದರೂ ಅಲ್ಲಿಯ ಪೋಲೀಸರು ಆತಂಕವಾದಿಗಳ ದಾಳಿಯನ್ನು ತಡೆಗಟ್ಟಲು ಏಕೆ ವಿಫಲರಾದರು ಎನ್ನುವ ಬಗ್ಗೆ ವಿಶ್ಲೇಷಣೆ ಮಾಡಿದರೆ ಸಿಗುವ ಉತ್ತರ ನಾಗರಿಕರು ಹಾಗೂ ರಕ್ಷಣಾದಳಗಳ ನಡುವೆ ಉಂಟಾಗಿರುವ ಅಂತರ.

## ಮಾಹಿತಿದಾರರು

ಸಾಮಾನ್ಯವಾಗಿ ಯಾವುದೇ ಗುಪ್ತ ಮಾಹಿತಿಯನ್ನು ಸಂಗ್ರಹಿಸಬೇಕಾದಲ್ಲಿ ಮಾನವ ಸಂಪನ್ಮೂಲಗಳ ಬಳಕೆ ತೀರಾ ಅನಿವಾರ್ಯ. ಎಲ್ಲಾ ಗುಪ್ತದಳಗಳೂ ಗುಪ್ತ ಮಾಹಿತಿ ಸಂಗ್ರಹಿಸಲು ಮಾಹಿತಿದಾರರನ್ನು ನೇಮಕ ಮಾಡಿಕೊಳ್ಳುತ್ತವೆ. ಆದರೆ ಮಾಹಿತಿ ಪ್ರತ್ಯಕ್ಷವಾಗಿ ಲಭ್ಯವಾಗುವುದಿಲ್ಲ. ಆದ್ದರಿಂದ ಮಾಹಿತಿಯನ್ನು ಲಭಿಸಿಕೊಳ್ಳಲು ಹಲವಾರು ಆಮಿಷಗಳಲ್ಲದೆ ಭಯ ಹಾಗೂ ದ್ವೇಷಗಳಂತಹ ಭಾವನೆಗಳನ್ನೂ ಸಲೀಸಾಗಿ ಉಪಯೋಗ ಮಾಡಿಕೊಳ್ಳಲಾಗುತ್ತದೆ.

ಮಾಹಿತಿದಾರರುಗಳನ್ನು (ಕೆಲವೊಮ್ಮೆ ಬೇರೊಂದು ಗುಪ್ತಚರ ದಳಕ್ಕೆ ಕೆಲಸ ಮಾಡುವ ಮಾಹಿತಿದಾರರನ್ನೂ ಬಳಸಿಕೊಳ್ಳಲಾಗುತ್ತದೆ - ಡಬಲ್ ಏಜೆಂಟ್ ಎಂದು ಇವರನ್ನು ಕರೆಯುತ್ತಾರೆ) ಪಡೆದುಕೊಂಡರೂ ಅವರಿಂದ ಕರಾರುವಾಕ್ಕಾದ ಮಾಹಿತಿ ಪಡೆಯುವುದು ಸುಲಭಸಾಧ್ಯವಿಲ್ಲ. ಮಾಹಿತಿದಾರ ಹಾಗೂ ಗೂಢಚಾರನ ಮಧ್ಯೆ ಗಹನವಾದ ಸಂಬಂಧ ಇರಬೇಕು. ಒಬ್ಬರ ಮೇಲೊಬ್ಬರಿಗೆ ನಂಬಿಕೆ ಮೂಡಿರಬೇಕು. ಅರಿಯದ ವ್ಯಕ್ತಿ ಏಕಾಏಕಿ ಇನ್ನೊಬ್ಬ ವ್ಯಕ್ತಿಯು ಎಷ್ಟೇ ಆಮಿಷ ಒಡ್ಡಿದರೂ ಮಾಹಿತಿ ನೀಡಲು ಒಪ್ಪುವುದಿಲ್ಲ. ಈ ಕಾರಣಕ್ಕಾಗಿ ನಂಬಲರ್ಹ ಮಾಹಿತಿದಾರರನ್ನು ಲಭಿಸಿಕೊಳ್ಳಲು ಹಲವಾರು ವರ್ಷಗಳು ಹೆಣಗಬೇಕಾಗುತ್ತದೆ.

ವಿವಿಧ ರಾಷ್ಟ್ರಗಳ ಗುಪ್ತಚರ ದಳಗಳು ಮಾಹಿತಿ ಲಭಿಸಿಕೊಳ್ಳಲು ತಾಂತ್ರಿಕ ಸಂಪನ್ಮೂಲಗಳನ್ನು ವ್ಯಾಪಕವಾಗಿ ಬಳಸುತ್ತವೆ. ಪೃಥ್ವಿಯ ಬಾಹ್ಯಾಕಾಶದಲ್ಲಿ ಸುತ್ತುತ್ತಿರುವ ಹಲವಾರು ಉಪಗ್ರಹಗಳಲ್ಲಿ ಅಳವಡಿಸಲಾಗಿರುವ ತಾಂತ್ರಿಕ ಉಪಕರಣಗಳಿಂದ ಎಲ್ಲೆಲ್ಲಿ ಏನು ನಡೆಯುತ್ತಿವೆ ಎನ್ನುವ ವಿಷಯಗಳನ್ನು ನೋಡಬಹುದು ಹಾಗೂ ಕೇಳಬಹುದು. ದೂರವಾಣಿಗಳು ಹಾಗೂ ಮೊಬೈಲ್ ಫೋನುಗಳ ಸಂಭಾಷಣೆಗಳನ್ನು ಆಲಿಸಿ, ಈ ಸಂಭಾಷಣೆಗಳಿಂದ ಮುಂದೆ ಆಗುವ ಘಟನೆಗಳ ಬಗ್ಗೆ ಮಾಹಿತಿ ಪಡೆಯಬಹುದು. ಕಂಪ್ಯೂಟರ್‌ಗಳ ಮೂಲಕ ರವಾನೆಯಾಗುವ ಇ-ಮೇಲ್ ಸಂದೇಶಗಳನ್ನು ಓದಬಹುದು. ಅಡಗಿಸಿಟ್ಟಿರುವ ಕ್ಯಾಮರಾಗಳು ಹಾಗೂ ಮೈಕ್ರೋಫೋನ್‌ಗಳ ಉಪಯೋಗವನ್ನು ಮಾಡಲಾಗುತ್ತದೆ. ಜೇಮ್ಸ್‌ಬಾಂಡ್ ಚಿತ್ರಗಳಲ್ಲಿ ಈ ರೀತಿಯ ಉಪಕರಣಗಳನ್ನು ನಾವು ನೋಡಿದ್ದೇವೆ.

ಮೂರನೆಯದಾಗಿ ನಡೆಯುತ್ತಿರುವ ಘಟನಾವಳಿಗಳ ಬಗ್ಗೆ ಕೂಲಂಕಷವಾಗಿ ಅಧ್ಯಯನ ಹಾಗೂ ಸಂಶೋಧನೆ ಮಾಡಿದರೆ ಮುಂದಾಗುವ ಘಟನೆಗಳ ಬಗ್ಗೆ ಊಹೆ ಮಾಡಬಹುದು. ಉದಾಹರಣೆಗೆ ವೃತ್ತಪತ್ರಿಕೆಯಲ್ಲಿ 'ಅ' ಎನ್ನುವ ವ್ಯಕ್ತಿ 'ಬ' ದೇಶದ ಪ್ರಧಾನಿಯಾಗಬಹುದು ಎನ್ನುವ ಸುದ್ದಿ ಬಂದಾಗ 'ಅ'ನ ಪೂರ್ವಾಪರವನ್ನು ಕೂಲಂಕುಷವಾಗಿ ಅಭ್ಯಸಿಸಿ ಅವನು ಯಾವ ರೀತಿಯ ಕಾರ್ಯಕ್ರಮಗಳನ್ನು ಹಾಕಿಕೊಳ್ಳುತ್ತಾನೆ ಎಂದು ನಿಖರವಾಗಿ ಹೇಳಬಹುದು. ಹೀಗಾಗಿ ಹಲವಾರು ದೇಶಗಳ ಗೂಢಚಾರ ದಳಗಳಲ್ಲಿ ಸಂಶೋಧನಾ ಮತ್ತು ವಿಶ್ಲೇಷಣಾ

ಘಟಕಗಳು ಇರುತ್ತವೆ. ಇವುಗಳಲ್ಲಿ ಭಾಷಾ ತಜ್ಞರು, ಮಿಲಿಟರಿ ಅಧಿಕಾರಿಗಳು, ಮನೋವಿಜ್ಞಾನಿಗಳು, ಗಣಿತ ತಜ್ಞರು ಇರುತ್ತಾರೆ.

## ಅನಾಹುತ ತಪ್ಪಿಸಬಹುದು

ನನ್ನ ಅಭಿಪ್ರಾಯದಂತೆ ಮೇಲೆ ಹೇಳಿದಂತಹ ಈ ಮೂರು ವಿಧಗಳಿಗಿಂತ ಹೆಚ್ಚು ಪರಿಣಾಮಕಾರಿಯಾಗಿ ಮಾಹಿತಿ ಸಂಗ್ರಹಿಸುವ ಕೆಲಸವನ್ನು ಪೊಲೀಸ್ ಠಾಣೆಗಳೇ ಮಾಡಬಹುದು. ಹಳ್ಳಿಹಳ್ಳಿಗಳಲ್ಲಿ, ನಗರಗಳಲ್ಲಿ ಹಾಗೂ ಪಟ್ಟಣಗಳಲ್ಲಿ ಪೊಲೀಸ್ ಠಾಣೆಗಳು ಸ್ಥಾಪಿತವಾಗಿವೆ. ಪೊಲೀಸ್ ಠಾಣೆಗಳ ವ್ಯಾಪ್ತಿಗೆ ಬರುವಂತಹ ಹಳ್ಳಿಗಳು ಹಾಗೂ ನಗರ ಬಡಾವಣೆಗಳಿಗೆ ಪೊಲೀಸ್ ಕಾನ್ಸ್‌ಟೇಬಲ್‌ಗಳು ಹಾಗೂ ಅಧಿಕಾರಿಗಳು ಬೀಟ್ ಮಾಡಲು ಹೋಗಬೇಕಾದ ವ್ಯವಸ್ಥೆ ಇದೆ. ಈ ರೀತಿ ಬೀಟ್ ಮಾಡುವ ಪೊಲೀಸರು ತಾವು ಸಂದರ್ಶಿಸಿದ ಜಾಗಗಳ ನಿವಾಸಿಗಳಿಂದ ಎಲ್ಲೆಲ್ಲಿ ಏನೇನು ನಡೆಯುತ್ತಿದೆ ಎನ್ನುವ ಮಾಹಿತಿಯನ್ನು ಲಭಿಸಿಕೊಳ್ಳಬಹುದು. ಉದಾಹರಣೆಗೆ ಹಳ್ಳಿಗಳಲ್ಲಿ ನಡೆಯುವ ಜಾತ್ರೆಗಳು, ಹಳ್ಳಿಗೆ ಬಂದಂತಹ ಅಪರಿಚಿತರು, ಹೊಸದಾಗಿ ಬಂದಂತಹ ನಿವಾಸಿಗಳು, ಇದ್ದಕ್ಕಿದ್ದಂತೆ ಆಸ್ತಿ ಗಳಿಸಿದವರ ವಿವರ, ದುಬಾರಿ ವಸ್ತುಗಳಿಗೆ ಹಣವನ್ನು ನೀರಿನಂತೆ ಖರ್ಚು ಮಾಡುತ್ತಿರುವವರ ವಿವರ, ಆ ಪ್ರದೇಶದಲ್ಲಿ ಇರುವ ವೇಶ್ಯೆಯರು, ಕಳ್ಳಕಾಕರು, ಅಪರಾಧಗಳಿಗೆ ಸಜಾ ಹೊಂದಿರುವ ವ್ಯಕ್ತಿಗಳ ಚಲನವಲನಗಳು ಈ ಎಲ್ಲಾ ಮಾಹಿತಿಯನ್ನು ಬೀಟ್ ಕಾನ್ಸ್‌ಟೇಬಲ್‌ಗಳು ಸಂಗ್ರಹಿಸಿದ ನಂತರ ಪೊಲೀಸ್ ಠಾಣೆಗಳಲ್ಲಿ ಅದನ್ನು ಕೂಲಂಕಷವಾಗಿ ಪರಿಶೀಲನೆ ಮಾಡಿದರೆ ಠಾಣಾಧಿಕಾರಿಗಳಿಗೆ ಅತ್ಯಂತ ಉಪಯುಕ್ತ ವಿವರಗಳು ಲಭ್ಯವಾಗುತ್ತವೆ. ಉದಾಹರಣೆಗೆ 'ಅ' ಎನ್ನುವ ಹಳ್ಳಿಗೆ ಪರಸ್ಥಳೀಯನೊಬ್ಬ ಕಳೆದ ೧೫ ದಿನಗಳಿಂದ ಬಂದಿದ್ದು ಆ ವ್ಯಕ್ತಿಯು ಕೆಲವು ವ್ಯಕ್ತಿಗಳ ಸಖ್ಯ ಬೆಳೆಸಿ ಅವರಿಗೆ ಹೋರಾಟದ ಬಗ್ಗೆ ಬೋಧಿಸುತ್ತಿದ್ದಾನೆಂಬ ಮಾಹಿತಿ ಬಂದರೆ ಅಂತಹ ವ್ಯಕ್ತಿಯನ್ನು ತಕ್ಷಣವೇ ಠಾಣೆಗೆ ಕರೆಸಿಕೊಂಡು ಮುಂದಾಗುವ ಅನಾಹುತವನ್ನು ತಪ್ಪಿಸಬಹುದು. ಗುಲ್ಬರ್ಗಾ ನಗರದಲ್ಲಿ ಇತ್ತೀಚೆಗೆ ಲಷ್ಕರ್ - ಎ - ತೊಯ್ಬಾದಿಂದ ಹಣವನ್ನು ಪಡೆಯುತ್ತಿದ್ದ ಉಗ್ರವಾದಿ ವ್ಯಕ್ತಿಯನ್ನು ಬಂಧಿಸಲು ಈ ರೀತಿಯ ಮಾಹಿತಿಯಿಂದ ಸಾಧ್ಯವಾಯಿತು ಎನ್ನುವುದು ಇಲ್ಲಿ ಗಮನಾರ್ಹ.

## ಉಪಯುಕ್ತ ವಿಷಯ

ಪ್ರತಿಯೊಂದು ಪೊಲೀಸ್ ಠಾಣೆಗೂ ಪ್ರತಿ ದಿನವೂ ನೂರಾರು ಜನರು ಬರುತ್ತಿರುತ್ತಾರೆ. ಅವರಲ್ಲಿ ಫಿರ್ಯಾದು ನೀಡುವವರು ಹೆಚ್ಚಿನ ಸಂಖ್ಯೆಯಲ್ಲಿ ಇದ್ದರೆ, ಕಳ್ಳಕಾಕರು ಅವರ ಕುಟುಂಬವರ್ಗ, ನ್ಯಾಯವಾದಿಗಳು, ಸ್ಥಳೀಯ ಸಂಘಟನೆಗಳ ಮುಖಂಡರು ಮುಂತಾದ ಹಲವಾರು ವಿವಿಧ ಸ್ತರಗಳ ವ್ಯಕ್ತಿಗಳು ಬರುತ್ತಾರೆ. ಠಾಣೆಗೆ ಬಂದಂತಹ ಪ್ರತಿಯೊಬ್ಬ ವ್ಯಕ್ತಿಯ ಬಳಿಯೂ ಏನಾದರೂ ಒಂದು ಮಾಹಿತಿ ಇದ್ದೇ ಇರುತ್ತದೆ. ಇಂತಹ ವ್ಯಕ್ತಿಗಳನ್ನು ಸಮರ್ಪಕವಾಗಿ ಪ್ರಶ್ನೆ ಮಾಡಿದರೆ ಅವರಿಂದ ಹಲವಾರು ಉಪಯುಕ್ತ ವಿಷಯಗಳನ್ನು ತಿಳಿಯಬಹುದಾಗಿದೆ.

ಹೀಗಾಗಿ ಮಾಹಿತಿ ಕಲೆಹಾಕುವುದರಲ್ಲಿ ಗುಪ್ತಚರ ದಳಗಳಿಗಿಂತ ಪೊಲೀಸ್ ಠಾಣೆಗಳಿಗೆ ಹೆಚ್ಚಿನ ಅನುಕೂಲವಿದೆ. ಆದರೆ ಎಷ್ಟೋ ಬಾರಿ ತಾವು ಕಲೆಹಾಕಿರುವ ಮಾಹಿತಿ ಉಪಯುಕ್ತವೋ ಇಲ್ಲವೋ ಎನ್ನುವುದನ್ನು ಅಳೆದು ನೋಡುವ ಸಾಮರ್ಥ್ಯ ಸ್ಥಳೀಯ ಪೊಲೀಸರಿಗೆ ಇರುವುದಿಲ್ಲ. ಈ ಕಾರಣಕ್ಕಾಗಿ ಪ್ರತಿಯೊಂದು ಪೊಲೀಸ್ ಠಾಣೆಯೂ ತಾನು ಕಲೆಹಾಕಿದ ಎಲ್ಲಾ ಮಾಹಿತಿಗಳನ್ನು ಬೇರಿತರ ಠಾಣಾಧಿಕಾರಿಗಳೂ, ತನ್ನ ಮೇಲಾಧಿಕಾರಿಗಳು ಹಾಗೂ ಗುಪ್ತದಳಗಳ ಜತೆ ಹಂಚಿಕೊಂಡರೆ ಪರಿಣಾಮಕಾರಿಯಾಗಿ ಆತಂಕವಾದಿ ಘಟನೆಗಳನ್ನು ತಡೆಯಬಹುದು.

ಆತಂಕವಾದವನ್ನು ತಡೆಯಲು ಹೆಚ್ಚಿನ ಸಹಕಾರ ನೀಡಬೇಕಾದವರು ಸಾರ್ವಜನಿಕರು. ಹಿಂದಿನ ಕಾಲದಲ್ಲಿ ತಮ್ಮ ಸುತ್ತ ಮುತ್ತಲೂ ಏನಾಗುತ್ತಿದೆ ಎನ್ನುವ ಅರಿವು ಸಾರ್ವಜನಿಕರಿಗೆ ಇರುತ್ತಿತ್ತು. ನಗರಗಳು ಬೆಳೆದಂತೆಲ್ಲಾ ನಾವು ನೆರೆಹೊರೆಯುವರ ಬಗ್ಗೆ ತಲೆಕೆಡಿಸಿಕೊಳ್ಳುವುದನ್ನು ಬಿಟ್ಟುಬಿಟ್ಟಿದ್ದೇವೆ. ಮೈಸೂರಿನಲ್ಲಿ ಇತ್ತೀಚೆಗೆ ಬಂಧಿತರಾದ ಉಗ್ರರು ಹಲವಾರು ತಿಂಗಳುಗಳಿಂದ ಬಾಡಿಗೆ ಮನೆಯೊಂದರಲ್ಲಿ ಇದ್ದರು. ಆ ಮನೆಯ ಅಕ್ಕಪಕ್ಕದವರಿಗೆ ತಮ್ಮ ಸುತ್ತಮುತ್ತಲೂ ಏನಾಗುತ್ತಿದೆ ಎನ್ನುವ ಅರಿವೇ ಇರಲಿಲ್ಲ ಎನ್ನಲಾಗಿದೆ. ಇದಕ್ಕೆ ಮುಖ್ಯ ಕಾರಣ ನಾವು ನೆರೆಹೊರೆಯವರು ಏನು ಮಾಡುತ್ತಿದ್ದಾರೆ, ಅವರು ಎಲ್ಲಿಂದ ಬಂದಿದ್ದಾರೆ, ಅವರ ಮನೆಗೆ ಯಾರ್ಯಾರು ಬರುತ್ತಾರೆ ಇತ್ಯಾದಿ ವಿಷಯಗಳನ್ನು ತಿಳಿದುಕೊಳ್ಳುವ ಗೋಜಿಗೇ ಹೋಗುವುದಿಲ್ಲ. ಹೀಗಾಗಿ ನಮ್ಮ ಪಕ್ಕದ ಮನೆಯಲ್ಲಿ ಕೊಲೆ ನಡೆದರೂ ನಮಗೆ ಗೊತ್ತಾಗುವುದಿಲ್ಲ. ಆದುದರಿಂದ ನಮ್ಮ ಅಕ್ಕಪಕ್ಕದಲ್ಲಿ ಏನಾಗುತ್ತಿದೆ ಎನ್ನುವ ಬಗ್ಗೆ ನಾವು ಕುತೂಹಲವನ್ನು ಬೆಳೆಸಿಕೊಳ್ಳಬೇಕು.

## ಸಂಪರ್ಕ ಸೇತುವೆ

ಅಪರಾಧವನ್ನು ತಡೆಗಟ್ಟುವ ನಿಟ್ಟಿನಲ್ಲಿ ನೆರೆಹೊರೆ ಪಹರೆ ಯೋಜನೆ ಎನ್ನುವ ವ್ಯವಸ್ಥೆಯನ್ನು ಹಲವಾರು ಪ್ರದೇಶಗಳಲ್ಲಿ ಮಾಡಲಾಗಿದೆ. ಈ ಯೋಜನೆಯನ್ವಯ ಪ್ರತಿಯೊಂದು ಬಡಾವಣೆಯಲ್ಲಿನ ನಾಗರಿಕರು ತಮ್ಮ ಸಮಸ್ಯೆಗಳ ನಿವಾರಣೆಗೆ ಪಹರೆ ಗುಂಪುಗಳನ್ನು ಹುಟ್ಟುಹಾಕಿಕೊಂಡಿದ್ದು, ಪ್ರತಿ ವಾರವೂ ಸದಸ್ಯರು ಸಂಧಿಸಿ ತಮ್ಮ ಸಮಸ್ಯೆಗಳ ಬಗ್ಗೆ ಚರ್ಚಿಸುತ್ತಾರೆ. ಸದಸ್ಯರುಗಳು ತಮ್ಮ ತಮ್ಮ ಸಮಸ್ಯೆಗಳ ಬಗ್ಗೆ ಚರ್ಚಿಸಿದಾಗ ಒಬ್ಬರಿಗೊಬ್ಬರ ಪರಿಚಯವಾಗಿ ಒಬ್ಬರ ನೆರವಿಗೆ ಇನ್ನೊಬ್ಬರು ಬರುವ ವ್ಯವಸ್ಥೆ ಮೂಡುತ್ತದೆ.

ತಮ್ಮ ಬಡಾವಣೆಯಲ್ಲಿ ಯಾರಾದರೂ ಅಹಿತಕರ ಕೃತ್ಯ ನಡೆಸುತ್ತಿದ್ದಾರೆಯೇ ಎನ್ನುವ ಅರಿವು ಅವರಿಗುಂಟಾದಾಗ ಅವರು ಆ ಬಗ್ಗೆ ಪೋಲೀಸರಿಗೆ ಕೂಡಲೇ ಎಚ್ಚರಿಸಬಹುದು. ಈ ಗುಂಪು ಪೋಲೀಸ್ ಇಲಾಖೆಗೂ - ಸಾರ್ವಜನಿಕರಿಗೂ ಸಂಪರ್ಕ ಸೇತುವೆಯಾಗುತ್ತದೆ.

ಎಷ್ಟೋ ಬಾರಿ ನಾಗರಿಕರು ಪೋಲೀಸರ ಸಹವಾಸ ನಮಗೇಕೆ ಎನ್ನುವ ಭಾವನೆಯಿಂದ ತಮಗೆ ಏನಾದರೂ ಮಾಹಿತಿ ಲಭ್ಯವಿದ್ದರೂ ಅದನ್ನು ಪೋಲೀಸರೊಡನೆ ಹಂಚಿಕೊಳ್ಳುವುದಿಲ್ಲ. ಈ ಕಾರಣದಿಂದ ಪಾಕಿಸ್ತಾನ, ಬಾಂಗ್ಲಾದೇಶಗಳಂತಹ ದೇಶದಿಂದ ಬಂದ ಆತಂಕವಾದಿಗಳು

ನಮ್ಮ ನಿಮ್ಮ ಮಧ್ಯದ ಸಾಮಾನ್ಯ ಜನರಂತೆ ವಾಸಿಸುತ್ತಾ ಆತಂಕವಾದದ ಬೇರುಗಳನ್ನು ಬಲಪಡಿಸುತ್ತಾರೆ. ಈ ಕಾರಣದಿಂದ ಸಾರ್ವಜನಿಕರ ಎಚ್ಚರಿಕೆಯೇ ಆತಂಕವಾದದ ವಿಸ್ತರಣೆಗೆ ಅತಿ ದೊಡ್ಡದಾದ ತಡೆಗೋಡೆ ಎನ್ನಬಹುದಾಗಿದೆ. ಈ ತಡೆಗೋಡೆ ಸುಭದ್ರವಾಗಿ ನಿರ್ಮಿಸಲ್ಪಟ್ಟಾಗ ಪೋಲೀಸರ ಕೆಲಸ ಸುಲಭವಾಗಿ ಯಾವುದೇ ರೀತಿಯ ಉಗ್ರವಾದಿ ಕೃತ್ಯಗಳನ್ನು ತಡೆಗಟ್ಟಲು ಅನುಕೂಲವಾಗುತ್ತದೆ.

# 5

## ಆತಂಕವಾದದ ವಿರುದ್ಧ ಸಮರ : ಸಾರ್ವಜನಿಕರದ್ದೇ ಮುಖ್ಯ ಪಾತ್ರ

ಮುಂಬೈ ನಗರಕ್ಕೆ ಕಳೆದ ನವೆಂಬರ್ 26 ರಂದು ಸಮುದ್ರದ ಮೂಲಕ ಆತಂಕವಾದಿಗಳು ಬಂದು ಇಳಿದಾಗ, ಅವರನ್ನು ಮೊದಲು ನೋಡಿದ್ದು ಕಡಲ ತೀರದಲ್ಲಿ ವಾಸಿಸುವ ಕೆಲವು ಬೆಸ್ತ ಕುಟುಂಬದವರು. ದೋಣಿಯಿಂದ ಇಳಿದು ಬಂದು ರಸ್ತೆಯಲ್ಲಿ ಸಾಲಾಗಿ ಹತ್ತು ಆತಂಕವಾದಿಗಳು ನಡೆದುಕೊಂಡು ಹೋಗುತ್ತಿದ್ದುದನ್ನು ಕಂಡ ಮಹಿಳೆಯೊಬ್ಬರು ಅವರನ್ನು ತಡೆದು ನಿಲ್ಲಿಸಿ, ನೀವು ಯಾರು, ಎಲ್ಲಿಗೆ ಹೋಗುತ್ತಿದ್ದೀರೆಂದು ವಿಚಾರಿಸಿದಾಗ ಆತಂಕವಾದಿಗಳಲ್ಲಿ ಒಬ್ಬ ವ್ಯಕ್ತಿ ಆ ಮಹಿಳೆಗೆ ನಿನ್ನ ಹಾದಿ ನೀನು ನೋಡಿಕೋ ನಮ್ಮ ಬಗ್ಗೆ ಕಾಳಜಿ ಮಾಡಬೇಡ ಎಂದು ತಿಳಿಸಿದ ಎನ್ನಲಾಗಿದೆ. ಆ ಮಹಿಳೆ ಈ ವಿಷಯವನ್ನು ಇತರರ ಜತೆ ಹಂಚಿಕೊಂಡಿದ್ದು ಆತಂಕವಾದಿಗಳಿಂದ ಮುಂಬೈನ ನಾನಾ ಪ್ರದೇಶಗಳಲ್ಲಿ ಹಲ್ಲೆ ನಡೆದ ಬಳಿಕವೇ.

ಒಂದು ವೇಳೆ ಆಕೆ ಕೂಡಲೇ ಸಂಬಂಧಪಟ್ಟ ಪೊಲೀಸರಿಗೆ ಸಂಶಯಾಸ್ಪದ ವ್ಯಕ್ತಿಗಳ ಕಂಡ ವಿಷಯ ತಿಳಿಸಿದಿದ್ದರೆ ಆತಂಕವಾದಿಗಳು ಬೇರೆ ಬೇರೆ ಜಾಗಗಳಿಗೆ ಸುಲಭವಾಗಿ ನುಸುಳಲು ಅವಕಾಶ ಆಗುತ್ತಿರಲಿಲ್ಲವೇನೋ! ಸಂಶಯಾಸ್ಪದ ವ್ಯಕ್ತಿಗಳ ಚಟುವಟಿಕೆಗಳು ಗಮನಕ್ಕೆ ಬಂದ ನಂತರವೂ ನಾಗರಿಕರು ಪೊಲೀಸ್ ಕಂಟ್ರೋಲ್ ರೂಂಗೆ ಒಂದು ಫೋನ್ ಮಾಡುವುದಿಲ್ಲ ಎನ್ನುವ ಸಮಸ್ಯೆಯ ಬಗ್ಗೆ ನಾವೆಲ್ಲಾ ಚಿಂತಿಸಬೇಕಾಗಿದೆ.

ಸಾಮಾನ್ಯವಾಗಿ ನಮ್ಮ ದೇಶದಲ್ಲಿ ಸಾರ್ವಜನಿಕರು ಪೊಲೀಸರಿಗೆ ಯಾವುದೇ ಮಾಹಿತಿ ನೀಡಲು ಬಯಸುವುದಿಲ್ಲ. ಪೊಲೀಸರಿಗೆ ಏನಾದರೂ ಹೇಳಿದರೆ ತಮಗೇ ತೊಂದರೆ [illegible]

ಇಲ್ಲವೆ ತಾವು ನ್ಯಾಯಾಲಯಕ್ಕೆ ಹೋಗಿ ಸಾಕ್ಷಿ ನುಡಿಯಬೇಕಾಗಬಹುದು ಇದರಿಂದ ತಮಗೆ ಸಾಕಷ್ಟು ಕಿರಿಕಿರಿಯಾಗಬಹುದು ಎನ್ನುವ ಭಾವನೆಯಿಂದ ಸಾಕಷ್ಟು ಜನ ಪೊಲೀಸರಿಗೆ ಯಾವುದೇ ರೀತಿಯ ಮಾಹಿತಿ ನೀಡುವುದಿಲ್ಲ. ಕೆಲವೊಂದು ಬಾರಿ ತಾವು ಮಾಹಿತಿ ಕೊಟ್ಟರೆ ಅಪರಾಧಿಗಳೇ ತಮಗೆ ತೊಂದರೆ ಕೊಡಬಹುದು ಎನ್ನುವ ಭಾವನೆಯಿಂದ ಸಾಕಷ್ಟು ಜನ ಪೊಲೀಸರಿಗೆ ಯಾವುದೇ ಮಾಹಿತಿ ನೀಡುವುದಿಲ್ಲ.

ನಮ್ಮ ದೇಶದಲ್ಲಿ ಸುಮಾರು ಒಂದು ಲಕ್ಷ ಜನಸಂಖ್ಯೆಗೆ 92 ಪೊಲೀಸರು ಇದ್ದಾರೆ. ಇಷ್ಟು ಕಡಿಮೆ ಸಂಖ್ಯೆಯ ಪೊಲೀಸರು ಇದ್ದಾಗಲೂ ಗಸ್ತು ತಿರುಗುವ ಇಲ್ಲವೇ ಗುಪ್ತ ಮಾಹಿತಿ ಸಂಗ್ರಹದ ಕರ್ತವ್ಯಗಳಿಗೆ ನೇಮಕಗೊಳ್ಳುವ ಪೊಲೀಸರ ಸಂಖ್ಯೆ ತೀರಾ ಕಡಿಮೆ. ಹೀಗಾಗಿ ಪೊಲೀಸರಿಗೆ ಎಲ್ಲಿ ಏನು ಆಗುತ್ತಿದೆ ಎನ್ನುವ ವಿಷಯ ತಿಳಿಯಬೇಕಾದರೆ ಸಾರ್ವಜನಿಕರ ಸಹಾಯ ಅತಿ ಮುಖ್ಯ. ಸಾರ್ವಜನಿಕರು ಪೊಲೀಸರಿಗೆ ಸುದ್ದಿ ಮುಟ್ಟಿಸದಿದ್ದರೆ ಅಪರಾಧಗಳನ್ನು ತಪ್ಪಿಸಲು ಪೊಲೀಸರಿಗೆ ತೀರಾ ಕಷ್ಟ ಸಾಧ್ಯ.

ಪೊಲೀಸ್ ಇಲಾಖೆಯಲ್ಲಿ ಗುಪ್ತಚರ ದಳ ಇದೆ. ಈ ದಳಕ್ಕೆ ತನ್ನದೇ ಆದ ಮಾಹಿತಿದಾರರೂ ಇದ್ದಾರೆ. ಆದರೆ ಗುಪ್ತಚರ ದಳಕ್ಕೆ ನೇಮಕಗೊಳ್ಳುವ ಹಲವಾರು ಅಧಿಕಾರಿಗಳು ಹಾಗೂ ಸಿಬ್ಬಂದಿ ಅಲ್ಲಿ ಕೆಲಸ ಮಾಡಲು ಬಯಸುವುದಿಲ್ಲ. ಏಕೆಂದರೆ ಈ ದಳದಲ್ಲಿ ಕೆಲಸ ಮಾಡಲು ಬೇರೆ ರೀತಿಯ ಮನೋಭಾವ ಬೇಕು. ಬೇರೆ ರೀತಿಯ ತರಬೇತಿ ಬೇಕು. ಎಲೆ ಮರೆಯ ಕಾಯಿಯಂತೆ ಕಾರ್ಯನಿರ್ವಹಿಸಬೇಕು. ಪೊಲೀಸ್ ಠಾಣೆಯಲ್ಲಿ ಕೆಲಸ ಮಾಡುವವರಿಗೆ ಸಿಗುವಂತಹ ಸವಲತ್ತು, ಅಧಿಕಾರ ಇತ್ಯಾದಿ ಅಲ್ಲಿ ದೊರೆಯುವುದಿಲ್ಲ. ಈ ಕೆಲ ಕಾರಣಗಳಿಗಾಗಿ ಗುಪ್ತಚರ ಇಲಾಖೆಯಲ್ಲಿ ಮಾನವ ಸಂಪನ್ಮೂಲದ ಕೊರತೆ ಯಾವಾಗಲೂ ಕಾಡುತ್ತಿರುತ್ತದೆ. ಸ್ವಇಚ್ಛೆಯಿಂದ ಕೆಲಸ ಮಾಡಲು ಬಾರದಿರುವ ಸಿಬ್ಬಂದಿಯಿಂದ ಗುಪ್ತಚರ ದಳ ಉತ್ತಮ ಕೆಲಸ ನಿರೀಕ್ಷಿಸುವುದು ಹೇಗೆ ಸಾಧ್ಯ?

ಯಾವುದೇ ಒಬ್ಬ ಪೊಲೀಸ್ ಅಧಿಕಾರಿ ಅಪರಾಧ ಸಂಬಂಧೀ ಮಾಹಿತಿ ಪಡೆಯಬೇಕಾದರೆ ಮಾಹಿತಿದಾರರನ್ನು ಹುಡುಕಬೇಕಾಗುತ್ತದೆ. ನಿಖರವಾದ ಮಾಹಿತಿ ನೀಡುವ ಜನರು ಸಿಗುವುದು ಬಹಳ ಕಷ್ಟ. ಮಾಹಿತಿ ಕೊಡುವ ವ್ಯಕ್ತಿಗಳು ನಂಬಿಕಸ್ಥರಾಗಿರಬೇಕು ಹಾಗೂ ಯಾವ ಅಧಿಕಾರಿಗೆ ಮಾಹಿತಿ ಕೊಡುತ್ತಾರೋ ಆ ಅಧಿಕಾರಿಯ ಬಗ್ಗೆ ಸಂಪೂರ್ಣ ವಿಶ್ವಾಸವನ್ನು ಇಟ್ಟುಕೊಂಡಿರಬೇಕು. ಒಬ್ಬ ಪೊಲೀಸ್ ಅಧಿಕಾರಿ ಮಾಹಿತಿ ಪಡೆಯಲು ಸಾಕಷ್ಟು ಕಷ್ಟಪಡಬೇಕು. ಆತ ಒಂದೇ ಜಾಗದಲ್ಲಿ ಎರಡು ಮೂರು ವರ್ಷ ಕೆಲಸ ಮಾಡಿದರೆ ಮಾತ್ರ ಮಾಹಿತಿದಾರರನ್ನು ಹುಡುಕಿಕೊಳ್ಳುವುದು ಸಾಧ್ಯ. ಪದೇ ಪದೇ ಅಧಿಕಾರಿಗಳಿಗೆ ವರ್ಗವಾದರೆ ಮಾಹಿತಿ ಲಭ್ಯತೆ ತೀರಾ ಕಷ್ಟ. ಈ ಮುಖ್ಯ ತೊಂದರೆಯನ್ನು ನೀಗಿಸಲು ಗುಪ್ತಚರ ವಿಭಾಗಕ್ಕೆಂದೇ ವಿಶೇಷವಾಗಿ ಪೊಲೀಸ್ ಅಧಿಕಾರಿಗಳನ್ನು ಭರ್ತಿ ಮಾಡುವ ಬಗ್ಗೆ ಯೋಜನೆ ರೂಪುಗೊಳ್ಳಬೇಕು. ತನಗೆ ಈ ಜಾಗದಿಂದ ವರ್ಗ ಆಗುವುದಿಲ್ಲ ಎಂದು ಮನಗಂಡ ಅಧಿಕಾರಿ ಮಾತ್ರ ತನ್ನ ಕೆಲಸದ ಬಗ್ಗೆ ಹೆಚ್ಚು ಆಸಕ್ತಿ ಹೊಂದುತ್ತಾನೆ.

ಇತ್ತೀಚಿನ ದಿನಗಳಲ್ಲಿ ವಿಶ್ವದ ಸರಿಸುಮಾರು ಎಲ್ಲಾ ದೇಶಗಳಲ್ಲೂ ತಂತ್ರಜ್ಞಾನವನ್ನು ಅಳವಡಿಸಿಕೊಂಡು ಮಾಹಿತಿಯನ್ನು ಸಂಗ್ರಹಿಸಲಾಗುತ್ತಿದೆ. ಆಯಕಟ್ಟಿನ ಪ್ರದೇಶಗಳಲ್ಲಿ ಸಿ.ಸಿ.ಟಿವಿ. ಕ್ಯಾಮರಾಗಳನ್ನು ಅಳವಡಿಸಲಾಗುತ್ತಿದೆ. ಟೆಲಿಫೋನ್, ಮೊಬೈಲ್ ಫೋನ್ ಹಾಗೂ ಸ್ಯಾಟಲೈಟ್ ಫೋನ್ ಮೂಲಕ ರವಾನೆಯಾಗುವ ಸಂದೇಶಗಳನ್ನು ಆಲಿಸಿ ಮಾಹಿತಿಯನ್ನು ಪಡೆಯಲಾಗುತ್ತದೆ. ಅದೂ ಅಲ್ಲದೆ ಇ-ಮೇಲ್ ಮೂಲಕ ಹೋಗುವ ವಿಷಯಗಳನ್ನೂ ಗಮನಿಸಲಾಗುತ್ತಿದೆ. ಗುಪ್ತಚರ ದಳಗಳು ತಾವು ನಡೆಸುವ ಮಾತುಕತೆಗಳ ಬಗ್ಗೆ ನಿಗಾ ಇಡುತ್ತಾರೆ ಎನ್ನುವುದು ಆತಂಕವಾದಿಗಳಿಗೂ ತಿಳಿದಿರುವುದರಿಂದ ಎಷ್ಟೋ ಬಾರಿ ಕೋಡ್ ಮೂಲಕ ಸಂದೇಶಗಳನ್ನು ರವಾನಿಸಲಾಗುತ್ತದೆ. ಈ ಕೋಡೆಡ್ ಸಂಕೇತಗಳನ್ನು ಗ್ರಹಿಸಿ ಯಾವ ವಿಷಯದ ಬಗ್ಗೆ ಸಂಭಾಷಣೆಯನ್ನು ನಡೆಸುತ್ತಿದ್ದಾರೆಂಬುದನ್ನು ತಿಳಿಯಬೇಕಾದರೆ ವಿಶೇಷ ತಾಂತ್ರಿಕ ನೈಪುಣ್ಯತೆಯ ಅವಶ್ಯಕತೆ ಇದೆ.

ನಮ್ಮ ದೇಶದ ಪೊಲೀಸರಿಗೆ ವಿಶೇಷ ತಾಂತ್ರಿಕ ನೈಪುಣ್ಯ ಇಲ್ಲದೇ ಇರುವುದರಿಂದ ಈ ನಿಟ್ಟಿನಲ್ಲಿ ಸಾರ್ವಜನಿಕರು ಪೊಲೀಸ್ ಇಲಾಖೆಯ ಸಹಾಯಕ್ಕೆ ಬರಬಹುದಾಗಿದೆ. ಸ್ಪೇನ್ ದೇಶದ ಮ್ಯಾಡ್ರಿಡ್‌ನಲ್ಲಿ, ಲಂಡನ್‌ನಲ್ಲಿ ಆತಂಕವಾದದ ಘಟನೆಗಳು ನಡೆದ ನಂತರ ಆ ದೇಶದ ನಾಗರೀಕರು Citizens against Terror ಎನ್ನುವ ಗುಂಪುಗಳನ್ನು ಮಾಡಿಕೊಂಡು ಪೊಲೀಸರಿಗೆ ಆತಂಕವಾದಿಗಳ ವಿರುದ್ಧದ ಸಮರದಲ್ಲಿ ಸಹಾಯ ಹಸ್ತ ನೀಡುತ್ತಿದ್ದಾರೆ. ತಾಂತ್ರಿಕ ಪರಿಣಿತರು ಸ್ವಯಂ ಮುಂದೆ ಬಂದು ಕಂಪ್ಯೂಟರ್ ಕೋಡ್‌ಗಳನ್ನು ಭೇದಿಸಲು, ಕೋಡ್ ಮೂಲಕ ರವಾನೆ ಆಗುವಂತಹ ಹಲವಾರು ಸಂದೇಶಗಳನ್ನು ಅರ್ಥ ಮಾಡಿಕೊಳ್ಳಲು ಸಹಾಯ ಮಾಡುತ್ತಿದ್ದಾರೆ. ಇದೇ ರೀತಿ ವಿವಿಧ ಭಾಷೆಗಳನ್ನು ಬಲ್ಲ ಭಾಷಾ ತಜ್ಞರು ಆತಂಕವಾದಿಗಳು ಒತ್ತೆಯಾಳುಗಳನ್ನು ಇಟ್ಟುಕೊಂಡಾಗ ಅವರೊಡನೆ ಮಾತುಕತೆ ನಡೆಸಲು ಪೊಲೀಸರಿಗೆ ನೆರವಾಗುತ್ತಿದ್ದಾರೆ. ಟೆಲಿಫೋನ್ ಸಂಭಾಷಣೆಗಳನ್ನು ಆಲಿಸುವಲ್ಲಿಯೂ ಭಾಷಾಂತರ ತಜ್ಞರ ಸಹಾಯ ದೊರಕುತ್ತಿದೆ. ಇದೇ ರೀತಿ ನಮ್ಮ ದೇಶದಲ್ಲಿಯೂ ಕೂಡ ನಾಗರೀಕರು ಸ್ವಯಂಪೂರ್ವಕವಾಗಿ ಪೊಲೀಸ್ ಇಲಾಖೆಗೆ ಸಹಾಯ ಮಾಡಬಹುದಾಗಿದೆ.

ಇತ್ತೀಚೆಗೆ ಸೆಲ್ ಫೋನ್ ಕಂಪನಿಯೊಂದು ಉತ್ತರ ಪ್ರದೇಶದಲ್ಲಿ ಅಲ್ಲಿನ ಪೊಲೀಸರಿಗೆ ಸೆಲ್ ಫೋನ್ ರೆಕಾರ್ಡ್‌ಗಳನ್ನು ಯಾವ ರೀತಿ ಅವಲೋಕಿಸಬೇಕು ಎನ್ನುವ ಬಗ್ಗೆ ತರಬೇತಿಯನ್ನು ನೀಡಿದೆ. ತಾಂತ್ರಿಕ ನೈಪುಣ್ಯತೆ ಹೊಂದಿರುವ ಸಾರ್ವಜನಿಕರು ಪೊಲೀಸರಿಗೆ ತರಬೇತಿ ಮೂಲಕವಾಗಲೀ ಇಲ್ಲವೇ ತಮ್ಮ ಸಮಯವನ್ನು ಉಚಿತವಾಗಿ ನೀಡುವುದರ ಮೂಲಕವಾಗಲೀ ಸಹಾಯವನ್ನು ಮಾಡಬಹುದು.

ಸಾಮಾನ್ಯವಾಗಿ ಆತಂಕವಾದದ ಘಟನೆಯೊಂದು ನಡೆದಾಗ ಸಾರ್ವಜನಿಕರು ಭಯಭೀತರಾಗುತ್ತಾರೆ. ಹಲವಾರು ಸಾವು ನೋವುಗಳು ಸಂಭವಿಸುತ್ತವೆ. ಹಲವಾರು ಕಟ್ಟಡಗಳಿಗೆ ಹಾನಿಯಾಗುತ್ತದೆ. ಗಾಬರಿಯಿಂದ ಜನರು ಚೆಲ್ಲಾಪಿಲ್ಲಿಯಾಗಿ ಓಡುತ್ತಾರೆ. ಇಂತಹ ಸಂದರ್ಭಗಳಲ್ಲಿ ಹೆಚ್ಚಿನ ಹಾನಿಯಾಗುತ್ತದೆ. ಆತಂಕವಾದಿಗಳ ದಾಳಿಗಳಲ್ಲಿ ಗಾಯಗೊಂಡವರಿಗೆ

ಶೀಘ್ರದಲ್ಲಿ ಆಸ್ಪತ್ರೆಗೆ ಸೇರಿಸಿ ಉಪಚಾರ ನೀಡುವ ಅವಶ್ಯಕತೆ ಇದೆ. ಅದೇ ರೀತಿ ಗಾಯಗೊಂಡ ಅಥವ ಸತ್ತ ನಾಗರೀಕರ ಕುಟುಂಬಗಳನ್ನು ಸಂಪರ್ಕಿಸಿ ಅವರಿಗೆ ವಿಷಯ ಮುಟ್ಟಿಸಬೇಕಾಗುತ್ತದೆ. ಸತ್ತ ವ್ಯಕ್ತಿಗಳ ವಾರಸುದಾರರನ್ನು ಹುಡುಕಿ ಅವರುಗಳಿಗೆ ನೆರವಾಗಬೇಕಾಗುತ್ತದೆ. ಮಾಧ್ಯಮಗಳಲ್ಲಿ ಗಾಬರಿ ಆಗುವಂತಹ ಸುದ್ದಿಗಳು ಬರದಂತೆ ನೋಡಿಕೊಳ್ಳಬೇಕಾಗುತ್ತದೆ. ಪೊಲೀಸರು ಅಗ್ನಿಶಾಮಕ ದಳದವರು ಹಾಗೂ ನಾಗರೀಕ ರಕ್ಷಣಾ ದಳದವರು ಸಧ್ಯಕ್ಕೆ ಈ ಕೆಲಸಗಳನ್ನು ಮಾಡುತ್ತಿದ್ದಾರೆ. ಆದರೆ ಸಾರ್ವಜನಿಕರ ಮೇಲೆಯೂ ಈ ಹೊಣೆ ಇದೆ. ಆತಂಕವಾದದ ಘಟನೆಗೆ ತುತ್ತಾದ ನಾಗರೀಕರ ನೆರವಿಗೆ ಅತಿಶೀಘ್ರದಲ್ಲಿ ಸಾರ್ವಜನಿಕರು ಬರಬೇಕಾಗಿದೆ.

ಈ ಕಾರಣಕ್ಕಾಗಿ ನಾಗರೀಕರು ತಮ್ಮ ತಮ್ಮ ಬಡಾವಣೆಗಳಲ್ಲಿ ಗುಂಪುಗಳನ್ನು ಮಾಡಿಕೊಂಡು ಪೊಲೀಸರೊಂದಿಗೆ ಸಹಕರಿಸಬಹುದಾಗಿದೆ. ದೆಹಲಿಯಂತಹ ಮಹಾನಗರದಲ್ಲಿ ಈಗಾಗಲೇ ನೆರೆಹೊರೆ ಪಹರೆ ಯೋಜನೆ ಎನ್ನುವ ಯೋಜನೆ ಜಾರಿಯಲ್ಲಿದ್ದು ಸಾರ್ವಜನಿಕರು ತಮ್ಮ ತಮ್ಮ ಬಡಾವಣೆಗಳಲ್ಲಿ ಗಸ್ತು ತಿರುಗುತ್ತಾರೆ. ಯಾವುದೇ ರೀತಿ ಸಂಶಯಾಸ್ಪದ ವ್ಯಕ್ತಿ ಅಥವಾ ವಸ್ತು ಕಂಡುಬಂದರೂ ತಮ್ಮ ಪೊಲೀಸ್ ಠಾಣೆಗೆ ಶೀಘ್ರದಲ್ಲಿ ಸುದ್ದಿ ಮುಟ್ಟಿಸುತ್ತಾರೆ. ತಮ್ಮ ಬಡಾವಣೆಯಲ್ಲಿರುವ ಮನೆಗಳಲ್ಲಿ ಕೆಲಸ ಮಾಡುವ ಅಡಿಗೆಯವರು, ಚಾಲಕರು, ಮನೆ ಕೆಲಸದವರ ವೈಯಕ್ತಿಕ ವಿವರಗಳನ್ನು ಸಂಗ್ರಹಿಸಿ ಅವರ ಫೋಟೋ ಸಹಿತ ಮಾಹಿತಿಯನ್ನು ಪೊಲೀಸ್ ಠಾಣೆಗೆ ಕೊಟ್ಟು ಆ ವ್ಯಕ್ತಿಗಳು ಕ್ರಿಮಿನಲ್ ಹಿನ್ನಲೆ ಹೊಂದಿಲ್ಲ ಎನ್ನುವುದನ್ನು ಖಚಿತಪಡಿಸಿಕೊಳ್ಳುತ್ತಾರೆ. ತಮ್ಮ ತಮ್ಮ ಬಡಾವಣೆಗಳಲ್ಲಿ ಇರುವ ಪ್ರಮುಖ ಸ್ಥಾನಗಳ ಹೊರಗೆ ಹಾಗೂ ಅಂಗಡಿ ಮುಂಗಟ್ಟುಗಳಲ್ಲಿ ತಮ್ಮದೇ ಖರ್ಚಿನಿಂದ ಸಿಸಿಟಿವಿ ಕ್ಯಾಮರಾ ಅಳವಡಿಸಿಕೊಳ್ಳುತ್ತಾರೆ. ಪೊಲೀಸರಿಗೆ ಬೇಕಾದಾಗ ಈ ಗುಂಪುಗಳು ಸ್ವಯಂಸೇವಕರಾಗಿ ಪೊಲೀಸ್ ಇಲಾಖೆಗೆ ಸಹಾಯ ಹಸ್ತ ನೀಡುತ್ತವೆ.

ಇಂಗ್ಲೆಂಡ್‌ನಲ್ಲಿ ಈಗಾಗಲೇ ಈ ರೀತಿ ಗುಂಪುಗಳು ಕಾರ್ಯನಿರ್ವಹಿಸುತ್ತಿರುವುದರಿಂದ ಅಲ್ಲಿ ಜುಲೈ 7, 2005ರ ನಂತರ ಆತಂಕವಾದದ ಯಾವುದೇ ಭಾರಿ ಅನಾಹುತ ಸಂಭವಿಸಿಲ್ಲ. ಇಂಗ್ಲೆಂಡ್‌ನ ಮೆಟ್ರೋ ರೈಲಿನಲ್ಲಿ ಓಡಾಡುವ ಪ್ರತಿಯೊಬ್ಬ ವ್ಯಕ್ತಿಯ ಮುಖವನ್ನೂ ವಿಡಿಯೋಗ್ರಾಫ್ ಮಾಡಲಾಗುತ್ತಿದೆ. ಈ ರೀತಿ ಮಾಡುವುದರಿಂದ ನಮ್ಮ ಹಕ್ಕು ಮೊಟಕುಗೊಂಡಿತು ಎಂದು ಅಲ್ಲಿ ಯಾರು ದೂರುವುದಿಲ್ಲ. ಸಾರ್ವಜನಿಕರ ರಕ್ಷಣೆ ಮಾಡುವಲ್ಲಿ ಕೆಲವೊಂದು ಮುಖ್ಯ ಕಾರ್ಯಕ್ರಮಗಳನ್ನು ಪೊಲೀಸ್ ಇಲಾಖೆ ಹಾಕಿಕೊಳ್ಳಲೇ ಬೇಕು ಎನ್ನುವುದು ಅಲ್ಲಿನ ನಾಗರೀಕರಿಗೆ ಮನದಟ್ಟಾಗಿದೆ. ಆತಂಕವಾದವನ್ನು ಎದುರಿಸುವ ಹೊಣೆಗಾರಿಕೆ ಕೇವಲ ಪೊಲೀಸರು ಹಾಗೂ ಸರ್ಕಾರದ ಮೇಲೆ ಮಾತ್ರವಲ್ಲ, ಸಾರ್ವಜನಿಕರ ಮೇಲೆ ಕೂಡಾ ಇದೆ ಎಂದು ಜನ ಭಾವಿಸಿದಾಗ ಸಮರ್ಥ ರೀತಿಯಲ್ಲಿ ಆತಂಕವಾದವನ್ನು ಬಗ್ಗು ಬಡಿಯಬಹುದಾಗಿದೆ.

ಮುಂಬೈನಲ್ಲಿ ಸಿಎನ್‌ಎನ್ ಐಬಿಎನ್ ಸುದ್ದಿ ವಾಹಿನಿಯ ಪರಿಶ್ರಮದಿಂದಾಗಿ 'Citizens Against Terror' ಎನ್ನುವ ಗುಂಪು ಇತ್ತೀಚೆಗಷ್ಟೆ ರೂಪುಗೊಳ್ಳುತ್ತಲಿದೆ. ಆತಂಕವಾದವನ್ನು

ಎದುರಿಸುವಲ್ಲಿ ಸಾರ್ವಜನಿಕರ ಪಾತ್ರವೂ ಇದೆ ಎನ್ನುವ ವಿಷಯ ಮುಂಬೈನ ನಾಗರಿಕರಿಗೆ ಮನದಟ್ಟಾಗಿದೆ. ನಮ್ಮ ರಾಜ್ಯದಲ್ಲೂ ಈ ರೀತಿ ಸಾರ್ವಜನಿಕ ಗುಂಪುಗಳು ರೂಪುಗೊಂಡು ಪೊಲೀಸ್ ಇಲಾಖೆಗೆ ಸಹಾಯ ಹಸ್ತ ನೀಡಿದರೆ ಆತಂಕವಾದ ಮತ್ತಿತರ ಅಪರಾಧಗಳನ್ನು ಯಶಸ್ವಿಯಾಗಿ ಎದುರಿಸುವಲ್ಲಿ ನಮ್ಮ ಪೊಲೀಸರೂ ಸಫಲರಾಗಬಹುದು.

# 6

# ಭಯೋತ್ಪಾದಕ ಚಟುವಟಿಕೆಗಳಿಗೆ ಹಣ ಸಂಗ್ರಹಣೆ

ಇತ್ತೀಚಿನ ದಿನಗಳಲ್ಲಿ ಜಗತ್ತಿನ ನಾನಾ ದೇಶಗಳ ಪೊಲೀಸರಿಗೆ ಎದುರಾಗುತ್ತಿರುವ ಅತೀ ದೊಡ್ಡ ಸವಾಲು ಭಯೋತ್ಪಾದಕ ಚಟುವಟಿಕೆಗಳು. ಅವರ ಹೆಸರೇ ಹೇಳುವಂತೆ ಭಯೋತ್ಪಾದನೆ ಎಂದರೆ ಸಾರ್ವಜನಿಕರಲ್ಲಿ ಭಯವನ್ನುಂಟು ಮಾಡಿ ಸಮಾಜದಲ್ಲಿ ಭೀತಿಯ ವಾತಾವರಣವನ್ನು ನಿರ್ಮಿಸುವುದು, ಇದರ ಮೂಲ ಉದ್ದೇಶ ಸರ್ಕಾರದ ರಕ್ಷಣಾ ವ್ಯವಸ್ಥೆಯಲ್ಲಿ ಸಾರ್ವಜನಿಕರು ನಂಬಿಕೆ ಕಳೆದುಕೊಳ್ಳುವಂತೆ ಮಾಡುವುದು. ಎರಡು ಕೋಮುಗಳ ನಡುವೆ ಕಿಚ್ಚು ಹಚ್ಚಿ ಪರಸ್ಪರ ಘರ್ಷಣೆ ಉಂಟಾಗುವಂತೆ ಮಾಡಿ ನಾಡಿನಲ್ಲಿ ಅರಾಜಕತೆ ಸೃಷ್ಟಿಸುವುದು ಹಾಗೂ ದೇಶದ ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ವ್ಯವಸ್ಥೆಯನ್ನು ಬುಡಮೇಲು ಮಾಡುವುದು.

## ನಾಲ್ಕು ವಿಧಾನ

ಭಯೋತ್ಪಾದಕರು ತಮ್ಮ ಉದ್ದೇಶ ಸಾಧನೆಗೆ ನಾಲ್ಕು ಪ್ರಮುಖ ಕ್ರಮಗಳನ್ನು ಅನುಸರಿಸುತ್ತಾರೆ. ಮೊದಲನೆಯದು ಒಂದು ಕೋಮಿನ ಅಥವಾ ಗುಂಪಿನ ಜನರೇ ಹೆಚ್ಚಾಗಿ ಇರುವ ಜಾಗದಲ್ಲಿ ಬಾಂಬ್‌ಗಳನ್ನು ಸಿಡಿಸಿ ಅಮಾಯಕ ಜನರನ್ನು ಬಲಿ ತೆಗೆದುಕೊಳ್ಳುವುದು. ಸಾಮಾನ್ಯವಾಗಿ ಪ್ರಾರ್ಥನಾ ಮಂದಿರಗಳಲ್ಲಿ (ಅಯೋಧ್ಯೆಯ ದೇವಾಲಯ, ವಾರಣಸಿಯ ದೇವಾಲಯ, ಹೈದ್ರಾಬಾದಿನ ಸಾಯಿಬಾಬಾ ಮಂದಿರ, ಅಹ್ಮದಾಬಾದಿನ ಸ್ವಾಮಿನಾರಾಯಣ

ಮಂದಿರ) ಬಾಂಬುಗಳನ್ನು ಸಿಡಿಸಿ ಅಮಾಯಕರ ಹತ್ಯೆ ಮಾಡುವುದು. ಇದರ ಉದ್ದೇಶ ಕೋಮು ಸಾಮರಸ್ಯವನ್ನು ಹಾಳು ಮಾಡುವುದು. ಕೆಲವು ಬಾರಿ ಜನ ಜಂಗುಳಿ ಇರುವ ಜಾಗಗಳಲ್ಲಿ ಬಾಂಬ್ ಸಿಡಿಸಿ ನೂರಾರು ಜನರನ್ನು ಹತ್ಯೆಗೈದು ನಾಗರಿಕರು ಭೀತಿಯಿಂದ ಬಳಲುವಂತೆ ಮಾಡುತ್ತಾರೆ. ದೆಹಲಿಯ ಸರೋಜಿನಿ ನಗರದ ಮಾರ್ಕೆಟ್‌ನಲ್ಲಿನ ವಿಸ್ಫೋಟ, ಮುಂಬೈಯ ರೈಲುಗಳಲ್ಲಿ ಇದೇ ವರ್ಷ ನಡೆದ ಸ್ಫೋಟ ಇತ್ಯಾದಿಗಳನ್ನು ಪ್ರಸ್ತಾಪಿಸಬಹುದು.

ಎರಡನೇ ರೀತಿಯ ಕ್ರಮ ಸೈನ್ಯ ಹಾಗೂ ಅರೆಸೈನ್ಯ ಪಡೆಗಳು ಹಾಗೂ ಪೊಲೀಸರ ನೈತಿಕ ಸ್ಥೈರ್ಯ ಕುಗ್ಗಿಸಲು ಹಾಗೂ ಈ ಪಡೆಗಳು ಹೊಂದಿರುವ ಆಯುಧಗಳು ಹಾಗೂ ಇತರ ವಸ್ತುಗಳನ್ನು ಲೂಟಿ ಮಾಡಲು ರಕ್ಷಣಾ ಪಡೆಗಳ ಮೇಲೆಯೇ ದಾಳಿ. ಕೆಲವು ದಶಕಗಳ ಹಿಂದೆ ಪಂಜಾಬಿನಲ್ಲಿ ಪೊಲೀಸ್ ಮೆಸ್‌ನಲ್ಲಿ ವಿಶ್ರಾಂತಿ ಪಡೆಯುತ್ತಿದ್ದ ಪೊಲೀಸ್ ಅಧಿಕಾರಿ ರಿಬೇರೋ ಮೇಲಿನ ದಾಳಿ, ಕಾಶ್ಮೀರದಲ್ಲಿ ಸಿ.ಆರ್.ಪಿ.ಎಫ್. ಕ್ಯಾಂಪುಗಳ ಮೇಲೆ ನಡೆದಂತಹ ಹಲವಾರು ದಾಳಿಗಳು, ಬಂಗಳೂರಿನ ಟಾಟಾ ಇನ್ಸ್ಟಿಟ್ಯೂಟ್ ಮೇಲೆ ದಾಳಿ (ದಾಳಿ ನಡೆದ ೧೦೦ ಮೀಟರ್ ದೂರದಲ್ಲಿಯೆ ಸದಾಶಿವನಗರ ಪೊಲೀಸ್ ಠಾಣೆ ಇತ್ತು.) ಈ ರೀತಿಯ ದಾಳಿಗಳೆಂದು ಉಲ್ಲೇಖಿಸಬಹುದು.

ಇವೇ ರೀತಿಯ ದಾಳಿಗಳು ಕೆಲವು ವಿಶೇಷ ಸ್ಥಾನಗಳ ಮೇಲಾಗಬಹುದು. ಇಂಗ್ಲೀಷಿನಲ್ಲಿ ಇಂತಹ ಜಾಗಗಳಿಗೆ ಐಕಾನಿಕ್ ಟಾರ್ಗೆಟ್ಸ್ ಎನ್ನುತ್ತೇವೆ. ಜನರ ಮನದಲ್ಲಿ ಅಚ್ಚಳಿಯದಂತಹ ಭಾವನೆ ಮೂಡಿಸುವ ಜಾಗಗಳಿವು. ಉದಾಹರಣೆಗೆ ಅಮೇರಿಕಾದ ಪೆಂಟಗನ್ ಕಟ್ಟಡ. ಆ ರಾಷ್ಟ್ರದ ಮಿಲಿಟರಿ ವ್ಯವಸ್ಥೆಯ ಮೂಲಸ್ಥಾನವಿದು. ಭಾರತದ ಗೋಲಾಕಾರದ ಪಾರ್ಲಿಮೆಂಟ್ ಕಟ್ಟಡ ರಾಷ್ಟ್ರದ ಶಾಸಕಾಂಗದ ಪ್ರತೀಕ. ಅದೇ ರೀತಿ ಒಂದು ದೇಶದ ರಾಷ್ಟ್ರಪತಿಗಳು, ಪ್ರಧಾನಮಂತ್ರಿಗಳು, ರಕ್ಷಣಾ ಮಂತ್ರಿಗಳು, ಪೊಲೀಸ್ ಮುಖ್ಯಸ್ಥರು ಇಂತಹ ಪ್ರತೀಕ ಚಿನ್ಹೆಗಳು ಎನ್ನಬಹುದು. ಈ ಗುರಿಗಳ ಮೇಲಿನ ದಾಳಿಗಳನ್ನು ವಿವಿಧ ರೀತಿಗಳಲ್ಲಿ ಮಾಡಬಹುದು.

ಭಯೋತ್ಪಾದಕರು ಅನುಸರಿಸುವ ಮೂರನೇ ರೀತಿಯ ಕ್ರಮ ಕಿಡ್‌ನಾಪಿಂಗ್ ಅಥವಾ ಅಪಹರಣ. ನೇಪಾಳದಿಂದ ಅಪಹರಿಸಿದ ಇಂಡಿಯನ್ ಏರ್‌ಲೈನ್ಸ್ ವಿಮಾನವೇ ಇರಬಹುದು, ಅಮೇರಿಕಾ ದೇಶದ ಸೈನಿಕರೇ ಇರಬಹುದು. ಕಾಶ್ಮೀರ ಕೊಳವನ್ನು ನೋಡಲು ವಿದೇಶದಿಂದ ಬಂದಿದ್ದ ಪ್ರವಾಸಿಗರ ಅಪಹರಣವೇ ಇರಬಹುದು. ಈ ರೀತಿಯ ಅಪಹರಣವನ್ನು ತಮ್ಮ ಮೇಲುಗೈ ತೋರಿಸಲು ಭಯೋತ್ಪಾದಕರು ಬಳಸುತ್ತಾರೆ.

## ಊಹಿಸಲಸಾಧ್ಯ

ನಾಲ್ಕನೆಯ ದೇಶದ್ರೋಹಿ ಚಟುವಟಿಕೆ ಹಾಗೂ ವಿಧ್ವಂಸಕ ಕೃತ್ಯ. ಇವುಗಳಲ್ಲಿ ಭಯೋತ್ಪಾದಕರ ಸಂಘಟನೆ ಹಾಗೂ ತರಬೇತಿ, ಖೋಟಾನೋಟುಗಳ ವಿತರಣೆ, ದೇಶದ ಸೈನ್ಯ ಹಾಗೂ ಅರೆಸೈನ್ಯ ಪಡೆಗಳಲ್ಲಿ ನುಸುಳಿ ದೇಶದ ರಹಸ್ಯ ದಾಖಲೆಗಳನ್ನು ನಾನಾ ವಿದೇಶಗಳಿಗೆ ರವಾನೆ, ವಿವಿಧ ರೀತಿಯ ಗೂಢಚಾರರನ್ನು ಉಪಯೋಗಿಸಿ ದೇಶದ ಆರ್ಥಿಕ

ಹಾಗೂ ರಾಜಕೀಯ ವ್ಯವಸ್ಥೆಯನ್ನು ಬುಡಮೇಲು ಮಾಡುವುದು. ಇಂತಹ ಕೃತ್ಯಗಳಿಂದ ಆಗುವ ಹಾನಿ ಅಪಾರ. ಕೈಗಾ ಅಣುಸ್ಥಾವರಕ್ಕೆ ಬಾಂಬ್ ಇಟ್ಟರ ಅಥವಾ ತುಂಗಭದ್ರಾ ಅಣೆಕಟ್ಟನ್ನು ಧ್ವಂಸ ಮಾಡಿದರೆ ಆಗುವ ಪರಿಣಾಮ ಊಹಿಸಲಸಾಧ್ಯ. ಇವು ದೇಶದ್ರೋಹಿ ಚಟುವಟಿಕೆಗಳಲ್ಲಿ ಬರುತ್ತವೆ.

ಭಯೋತ್ಪಾದನಾ ಹಾಗೂ ವಿಧ್ವಂಸಕ ಕೃತ್ಯಗಳನ್ನು ಯಾರು ಮಾಡುತ್ತಾರೆ? ಇಂತಹ ಚಟುವಟಿಕೆಗಳ ರೂವಾರಿಗಳು ವಿವಿಧ ಬಗೆಯ ಆತಂಕವಾದಿ ಸಂಘಟನೆಗಳು. ಏಕೆಂದರೆ ಒಬ್ಬನೇ ವ್ಯಕ್ತಿ ಹಾಗೂ ಎರಡು ಮೂರು ವ್ಯಕ್ತಿಗಳು ವಿವಿಧ ಬಗೆಯ ಆತಂಕವಾದಿಗಳು. ಏಕೆಂದರೆ ಒಬ್ಬನೇ ವ್ಯಕ್ತಿ ಹಾಗೂ ಎರಡು ಮೂರು ವ್ಯಕ್ತಿಗಳು ತೀವ್ರರೂಪದಲ್ಲಿ ಭಯೋತ್ಪಾದನಾ ಕೃತ್ಯಗಳನ್ನು ನಡೆಸಲು ಸಾಧ್ಯವಿಲ್ಲ. ಯಾವುದೇ ಭಯೋತ್ಪಾದಕ ತಂಡಕ್ಕೆ ಮೊದಲಿಗೆ ಬೇಕಾಗಿರುವುದು ಅಪಾರವಾದ ಹಣ. ಈ ಹಣ ಸಂಗ್ರಹಣೆ ಗುಂಪುಗಳಿಗೆ ಮಾತ್ರ ಸುಲಭ ಸಾಧ್ಯ. ಭಯೋತ್ಪಾದನೆ ಒಂದು ವ್ಯವಸ್ಥಿತ ಚಟುವಟಿಕೆಯಾಗಿರುವುದರಿಂದ ಇದನ್ನು ಮಾಡಲು ಗುಂಪುಗಳೇ ಬೇಕು. ಸದ್ಯಕ್ಕೆ ಚಾಲ್ತಿಯಲ್ಲಿರುವ ಗುಂಪುಗಳು ಅಲ್‌ಖೈದಾ, ಎಲ್.ಟಿ.ಟಿ.ಇ., ಲಷ್ಕರ್ - ಎ - ತೋಯ್ಬಾ, ಹಿಜ್‌ಬುಲ್ ಮುಜಾಹಿದೀನ್, ಅಲ್ ಉಮ್ಮಾ, ಸಿಮಿ ಇತ್ಯಾದಿ . ಸಿಖ್ ಆತಂಕವಾದೀ ಗುಂಪುಗಳು ಈಗ ಭಾರತದಲ್ಲಿ ಇಲ್ಲ.

ಹಣ ಸಂಗ್ರಹಣೆ ಹೇಗೆ ಆಗುತ್ತದೆ? ಮಧ್ಯಪ್ರಾಚ್ಯ ದೇಶಗಳು, ಯೂರೋಪ್ ಖಂಡ ಹಾಗೂ ನಮ್ಮ ನೆರೆಹೊರೆಯ ರಾಷ್ಟ್ರಗಳಿಂದ ಭಯೋತ್ಪಾದಕ ಗುಂಪುಗಳಿಗೆ ಹಣ ಬರುತ್ತದೆ. ಈಗಿನ ಕಾಲದಲ್ಲಿ ಒಂದು ದೇಶದಿಂದ ಇನ್ನೊಂದಕ್ಕೆ ಕ್ಷಣಾರ್ಧದಲ್ಲಿ ಹಣ ರವಾನಿಸಬಹುದು-ವೆಸ್ಟರ್ನ್ ಯೂನಿಯನ್ ಮನಿ ಟ್ರಾನ್ಸ್‌ಫರ್ ಎನ್ನುವ ಸಂಸ್ಥೆಯ ಲಂಡನ್ ಕಚೇರಿಗೆ ಇಂದು ಬೆಳಿಗ್ಗೆ ಪೌಂಡ್‌ಗಳಲ್ಲಿ ಹಣ ಸಂದಾಯ ಮಾಡಿದರೆ ಇಂದು ಸಂಜೆ ಬೆಂಗಳೂರಿನಲ್ಲಿ ಅದೇ ಸಂಸ್ಥೆಯ ಶಾಖೆಯಿಂದ ರೂಪಾಯಿಗಳ ಮೂಲಕ ಹಣ ಪಡೆಯಬಹುದು. (ಇತ್ತೀಚೆಗೆ ಬಂಧಿತರಾಗಿರುವ ಹಲವಾರು ಭಯೋತ್ಪಾದಕರು ಇದೇ ರೀತಿಯಲ್ಲಿಯೇ ಹಣ ನಮಗೆ ತಲುಪುತ್ತಿತ್ತು ಎಂದು ಹೇಳಿದ್ದಾರೆ).,

ಹಲವಾರು ವ್ಯಕ್ತಿಗಳು ಬಾಂಗ್ಲಾದೇಶ, ಪಾಕಿಸ್ತಾನ ಹಾಗೂ ನೇಪಾಳ ದೇಶಗಳ ಮೂಲಕ ನಮ್ಮ ದೇಶಕ್ಕೆ ನುಸುಳಿಸುತ್ತಾರೆ. ಇವರು ತಮ್ಮ ಜೊತೆಯಲ್ಲಿ ಹಣವನ್ನು ತಂದು ಭಾರತದಲ್ಲಿರುವ ಭಯೋತ್ಪಾದಕರಿಗೆ ಹಂಚುತ್ತಾರೆ. ಕೆಲವು ವ್ಯಕ್ತಿಗಳು ವಿಮಾನದ ಮೂಲಕ ಹಣವನ್ನು ಕಳ್ಳಸಾಗಣೆ ಮಾಡಿದರೆ, ಕೆಲವರು ಸಮುದ್ರತೀರದ ಮೂಲಕ ಹಣ ತರುತ್ತಾರೆ. ಮತ್ತೊಂದು ರೀತಿಯ ಸಂಗ್ರಹಣೆ ಸರ್ಕಾರೇತರ ಸಂಘಟನೆಗಳ (ಎನ್.ಜಿ.ಒ) ಮೂಲಕ ಆಗುತ್ತದೆ. ನಮ್ಮ ದೇಶದಲ್ಲಿನ ಹಲವಾರು ಸಂಘಟನೆಗಳು ಶೈಕ್ಷಣಿಕ, ಸಾಂಸ್ಕೃತಿಕ ಇತ್ಯಾದಿ ಚಟುವಟಿಕೆಗಳನ್ನು ನಡೆಸಲು ವಿದೇಶಗಳಿಂದ ಹಣವನ್ನು ಕಾನೂನು ರೀತ್ಯಾ ಪಡೆಯುತ್ತವೆ. ಆದರೆ ಇವುಗಳಲ್ಲಿ ಕೆಲವು ದೇಶದ್ರೋಹಿ ಸಂಘಟನೆಗಳು ವಿದೇಶದಿಂದ ನ್ಯಾಯ ಮಾರ್ಗದಲ್ಲಿ ಹಣ ತರಿಸಿ ಅದನ್ನು ಭಯೋತ್ಪಾದಕ ಸಂಘಟನೆಗಳಿಗೆ ಹಂಚುತ್ತವೆ.

## ಪರಸ್ಪರ ನಂಟು

ಅತ್ಯಂತ ಸುಲಭ ರೀತಿಯು ಹಣ ಸಂಗ್ರಹ ಪಂತಿಗೆಯು ಮೂಲಕ ಆಗುತ್ತದೆ. ಭಯೋತ್ಪಾದಕ ಸಂಘಟನೆಗಳ ಉದ್ದೇಶಗಳಿಗೆ ಹಲವಾರು ವ್ಯಕ್ತಿಗಳು ಸಕಾರಾತ್ಮಕವಾಗಿ ಸ್ಪಂದಿಸುವುದುಂಟು. ಜಾತಿಯ ಹೆಸರಿನ ಮೇಲೆ, ಭಾಷೆಯ ಹೆಸರಿನ ಮೇಲೆ ಹಾಗೂ ಕೋಮಿನ ಹೆಸರಿನ ಮೇಲೆ ಹಣ ಸಂಗ್ರಹಿಸಿ ಸಂಗ್ರಹವಾದ ಹಣವನ್ನು ಭಯೋತ್ಪಾದಕ ಚಟುವಟಿಕೆಗಳಿಗೆ ಬಳಸಿಕೊಳ್ಳಲಾಗುತ್ತದೆ. ರಾಜೀವ್ ಗಾಂಧಿ ಹತ್ಯೆ ಪ್ರಕರಣದಲ್ಲಿ ಎಲ್.ಟಿ.ಟಿ.ಇ. ಸಂಘಟನೆಗೆ ಪಂತಿಗೆ ನೀಡಿದಂತಹ ಹಲವಾರು ಜನರನ್ನು ಹಂತಕರು ಅಡಗಿಕೊಳ್ಳಲು ಸಹಾಯ ಮಾಡುವಂತೆ ಕೋರಲಾಗಿತ್ತು. ಆದರೆ ಪಂತಿಗೆ ಮೂಲಕ ಭಾರೀ ಪ್ರಮಾಣದಲ್ಲಿ ಹಣ ಸಂಗ್ರಹಿಸುವುದು ಕಷ್ಟಕರವಾದ ಮಾತು ಎಂದು ಭಯೋತ್ಪಾದಕ ಸಂಘಟನೆಗಳಿಗೆ ತಿಳಿದಿದೆ.

ಹಣ ಸಂಗ್ರಹಣೆಗಾಗಿ ಭಯೋತ್ಪಾದಕ ಸಂಘಟನೆಗಳು ಅಪರಾಧಗಳಿಗೂ ಮೊರೆ ಹೋಗುತ್ತವೆ. ಮಾದಕ ವಸ್ತುಗಳ ಕಳ್ಳಸಾಗಾಟ ಹಾಗೂ ಮಾರಾಟದಿಂದ ಗಳಿಸಿದಂತಹ ಹೇರಳ ಹಣವನ್ನು ಭಯೋತ್ಪಾದನೆಗೆ ಬೇಕಾದ ಸ್ಫೋಟಕಗಳು ಹಾಗೂ ಶಸ್ತ್ರಾಸ್ತ್ರಗಳನ್ನು ಖರೀದಿಸಲು ಬಳಸಲಾಗುತ್ತದೆ. ವ್ಯವಸ್ಥಿತ ಅಪರಾಧಗಳನ್ನು ನಡೆಸಿ (ಉದಾಹರಣೆಗೆ ಹಫ್ತಾ ವಸೂಲಿ, ಕಳ್ಳ ಸಾಗಾಟ, ದರೋಡೆ, ವೇಶ್ಯಾವಾಟಿಕೆ, ಕಿಡ್‌ನಾಪಿಂಗ್) ಈ ಮೂಲಕ ಗಳಿಸಿದಂತಹ ಹಣವನ್ನು ಭಯೋತ್ಪಾದನೆಗೆ ಉಪಯೋಗಿಸುವುದುಂಟು. ಹೀಗಾಗಿ ಭೂಗತ ಜಗತ್ತಿಗೂ ಭಯೋತ್ಪಾದನೆಗೂ ಅವಿನಾಭಾವ ಸಂಬಂಧವಿದೆ. ಈ ಹಿಂದೆ ಭೂಗತ ಜಗತ್ತು 'ಹವಾಲಾ'. ವ್ಯವಹಾರಗಳಲ್ಲಿ ತೊಡಗಿಸಿಕೊಂಡಿದ್ದರಿಂದ ವಿದೇಶಗಳಿಂದ ಹವಾಲಾ ಮೂಲಕವೇ ಭಾರತಕ್ಕೆ ಹಣವನ್ನು ಕಳುಹಿಸಲಾಗುತ್ತಿತ್ತು.

## ಒಂದು ಅಸಲಿಗೆ ಮೂರು ನಕಲಿ

ಖೋಟಾನೋಟು ವ್ಯವಹಾರದಿಂದಲೂ ಹಣವನ್ನು ಗಳಿಸಲಾಗುತ್ತಿದೆ. ಈಗಿರುವ ವರ್ತಮಾನದಂತೆ ಮಧ್ಯಪ್ರಾಚ್ಯ ದೇಶವೊಂದರಲ್ಲಿ ನೂರು ಹಾಗೂ ಐದುನೂರು ರೂಪಾಯಿಯ ಖೋಟಾನೋಟುಗಳನ್ನು ಒಂದು ಅಸಲಿ ಐದುನೂರು ನೋಟಿಗೆ ಮೂರು ನಕಲಿ ನೋಟುಗಳಂತೆ ವಿತರಿಸಿ ಭಯೋತ್ಪಾದಕರು ಹಣ ಸಂಗ್ರಹಿಸುತ್ತಿದ್ದಾರೆ. ಈ ಖೋಟಾನೋಟುಗಳನ್ನು (ಅದರಲ್ಲೂ ನೂರು ರೂ. ಮುಖಬೆಲೆಯದ್ದು) ಎಷ್ಟು ಚೆನ್ನಾಗಿ ನಕಲಿ ಮಾಡಿದ್ದಾರೆಂದು ಇಂತಹ ಎರಡು ನೋಟುಗಳನ್ನು ನಾವು ಇತ್ತೀಚೆಗೆ ರಿಸರ್ವ್ ಬ್ಯಾಂಕಿಗೆ ಕಳುಹಿಸಿಕೊಟ್ಟಾಗ ಬ್ಯಾಂಕಿನ ಅಧಿಕಾರಿಗೇ ಆ ನೋಟುಗಳು ನಕಲಿ ಎಂದು ನಂಬಲಾಗಲಿಲ್ಲ. ಕರಾವಳಿ ಪ್ರದೇಶಗಳಲ್ಲಿ ಈ ರೀತಿ ನೋಟುಗಳ ಚಲಾವಣೆ ಹೆಚ್ಚಾಗಿ ಕಂಡುಬರುತ್ತಿದೆ.

ಭಯೋತ್ಪಾದಕರಿಗೆ ಹಣದ ಕೊರತೆ ಏನೇನೂ ಇಲ್ಲ.

# 7

## ಭಯೋತ್ಪಾದಕ ಚಟುವಟಿಕೆ ಬೆನ್ನೆಲುಬು - ಮಾನವ ಸಂಪನ್ಮೂಲ

ವಿಶ್ವದ ಯಾವುದೇ ಸೈನ್ಯಕ್ಕೆ ಸರಿಸಾಟಿಯಾಗಬಲ್ಲ ಆಧುನಿಕ ಶಸ್ತ್ರಾಸ್ತ್ರಗಳು ಭಯೋತ್ಪಾದಕರ ಬಳಿ ಇವೆ. ಮಾರುಕಟ್ಟೆಯಲ್ಲಿ ಶಸ್ತ್ರಾಸ್ತ್ರ ಖರೀದಿಗೆ ಅಡಚಣೆಯಾದಾಗ, ಪೊಲೀಸ್ ಹಾಗೂ ಸೈನ್ಯ ದಳಗಳ ಕ್ಯಾಂಪ್‌ಗಳ ಮೇಲೆ ದಾಳಿ ನಡೆಸಿ, ಶಸ್ತ್ರಾಸ್ತ್ರಗಳನ್ನು ಲಭಿಸಿಕೊಳ್ಳುತ್ತಾರೆ. ಎಕೆ-47, ಎಕೆ-56, ಗ್ರೆನೇಡುಗಳು. ರಾಕೆಟ್ ಲಾಂಚರ್‌ಗಳು, ಮಶೀನ್ ಗನ್‌ಗಳು, ವಿನೂತನ ಪಿಸ್ತೂಲುಗಳು ಭಯೋತ್ಪಾದಕರ ಬಳಿ ಇವೆ. ಚೀನಾ ದೇಶದಲ್ಲಿ ಮಾಡಿರುವ ಅತ್ಯಾಧುನಿಕ ಗ್ರೆನೇಡುಗಳೂ, ಇಸ್ರೇಲೀ ಶಸ್ತ್ರಗಳೂ ಇವರಲ್ಲಿ ಲಭ್ಯವಿದೆ. ಬೆಂಗಳೂರಿನ ಟಾಟಾ ಇನ್‌ಸ್ಟಿಟ್ಯೂಟ್ ಮೇಲೆ ಮಾಡಿದ ದಾಳಿಯಲ್ಲಿ ಆತಂಕವಾದಿಗಳು ಬಿಟ್ಟುಹೋದ ಶಸ್ತ್ರಾಸ್ತ್ರಗಳನ್ನು ಅವಲೋಕಿಸಿದಾಗ ಪೊಲೀಸರ ಬಳಿ ಇರದ ಶಸ್ತ್ರಗಳು ಕೂಡಾ ಭಯೋತ್ಪಾದಕರ ಬಳಿ ಇವೆ ಎನ್ನುವುದು ವಿದಿತವಾಯಿತು.

ಹಣ ಹಾಗೂ ಶಸ್ತ್ರಾಸ್ತ್ರಗಳನ್ನು ಲಭಿಸಿಕೊಂಡ ಮಾತ್ರಕ್ಕೇ ನಿರೀಕ್ಷಿತ ಗುರಿ ಮುಟ್ಟಲು ಸಾಧ್ಯವಿಲ್ಲ. ಬೇರೆಲ್ಲಾ ಸಂಘಟನೆಗಳಂತೆ, ಭಯೋತ್ಪಾದಕ ಸಂಘಟನೆಗಳ ಬೆನ್ನೆಲುಬು ಮಾನವ ಸಂಪನ್ಮೂಲ. ಈ ಮಾನವ ಸಂಪನ್ಮೂಲವನ್ನು ಲಭಿಸಿಕೊಳ್ಳಲು ಭಯೋತ್ಪಾದಕ ಸಂಘಟನೆಗಳು ಸಾಕಷ್ಟು ಶ್ರಮ ವಹಿಸುತ್ತವೆ. 'ಎಳೆಯರಿದ್ದಾಗಲೇ ಗುರುತಿಸಿ' ಎಂಬ ನಾಣ್ಣುಡಿಯ ಅನ್ವಯ ಸಣ್ಣ ವಯಸ್ಸಿನಿಂದಲೇ ಜೀಹಾದಿಯ ಶಿಕ್ಷಣ ನೀಡಲಾಗುತ್ತದೆ.

ಹಲವಾರು ಮದರಸಾಗಳಲ್ಲಿ ಮತ್ತಿತರ ಶಾಲೆಗಳಲ್ಲಿ ಚಿಕ್ಕಂದಿನಿಂದಲೇ ಬಾಲಕ-ಬಾಲಕಿಯರನ್ನು ಭಯೋತ್ಪಾದನೆಯತ್ತ ಆಕರ್ಷಿಸಲಾಗುತ್ತದ.

ಭಯೋತ್ಪಾದನೆಯ ಮುಖ್ಯ ತಿರುಳೇ ದ್ವೇಷ ಹಾಗೂ ಅಸ್ಥೈರಣೆ ಆದ್ದರಿಂದ ''ನಮ್ಮನ್ನು ಹೊರತುಪಡಿಸಿದರೆ ಇತರರು ಕೆಟ್ಟವರು ಹಾಗೂ ನಮ್ಮೊಡನೆ ವೈರತ್ವ ಕಟ್ಟಿಕೊಳ್ಳುವವರು ನಾವೇ ಎಲ್ಲರಿಗಿಂತ ಮೇಲು. ನಾವೇ ದೇವರ ದೂತರು. ನಮ್ಮ ನಂಬಿಕೆಯೇ ಸರಿಯಾದದ್ದು. ನಮ್ಮ ಮತವೇ ಶ್ರೇಷ್ಠವಾದದ್ದು. ನಮ್ಮ ಧರ್ಮವನ್ನು ವಿಶ್ವದಲ್ಲೆಲ್ಲಾ ಪ್ರಸಾರ ಮಾಡಬೇಕಾದ್ದು ನಮ್ಮ ಕರ್ತವ್ಯ. ಧರ್ಮಕ್ಕಾಗಿ ನಾವು ಏನು ಮಾಡಿದರೂ ಭಗವಂತನು ನಮಗೆ ಪ್ರತಿಫಲವನ್ನು ನೀಡುತ್ತಾನೆ. ಧರ್ಮದ ಕಾರ್ಯದಲ್ಲಿ ಯಾರು ಮಡಿಯುತ್ತಾರೋ ಅವರಿಗೆ ಖಂಡಿತಾ ಸ್ವರ್ಗ ಪ್ರಾಪ್ತಿಯಾಗುತ್ತದೆ. ಧರ್ಮ ಹೋರಾಟದಲ್ಲಿನ ಸಾವು ಅತಿ ಶ್ರೇಷ್ಠವಾದದ್ದು'' ಎಂಬುದಾಗಿ ಪದೇ ಪದೇ ಬೋಧನೆ ನೀಡಲಾಗುತ್ತದೆ. ಈ ರೀತಿ ಬೋಧನೆಗೊಳಗಾಗುವವರು ಬಾಲಕರು ಹಾಗೂ ಯುವಕರು. ಈ ಗುಂಪಿನ ಮನಪರಿವರ್ತನೆಯನ್ನು ಅತಿ ಸುಲಭವಾಗಿ ಮಾಡಬಹುದಾದ್ದರಿಂದ ಅವರನ್ನೇ ಹೆಚ್ಚು ಅವಲಂಬಿಸಲಾಗುತ್ತದೆ. ಆತ್ಮಹತ್ಯಾ ದಳಗಳಿಗೆ ಸ್ವಇಚ್ಛೆಯಿಂದ ಇಂತಹ ಯುವಕರು ಸೇರಿಕೊಳ್ಳುತ್ತಾರೆ. ಮನಪರಿವರ್ತನೆ ಆದಂತಹ ಈ ಯುವಕರು ಸಾಯುವವರೆವಿಗೂ ಜೀಹಾದಿಗಳಾಗಿಯೇ ಇರುತ್ತಾರೆ ಎನ್ನುವುದು ಅನುಭವದ ಮಾತು.

ಬಹಳಷ್ಟು ಜನ ಭಯೋತ್ಪಾದಕ ಸಂಘಟನೆಗಳಿಗೆ ಸೇರುವವರು ಸಮಾಜದ ಕೆಳಸ್ತರದಿಂದ ಬಂದವರು, ಅವಿದ್ಯಾವಂತರು ಎಂದು ಭಾವಿಸಿದ್ದಾರೆ. ಇದು ತಪ್ಪು. ಭಯೋತ್ಪಾದಕ ಗುಂಪುಗಳಿಗೆ ಸೇರಿದವರಲ್ಲಿ ಪ್ರೊಫೆಸರ್‌ಗಳಿದ್ದಾರೆ. ಎಂಜಿನಿಯರ್‌ಗಳು -ಡಾಕ್ಟರ್‌ಗಳಿದ್ದಾರೆ. ವಿವಿಧ ವಲಯಗಳಲ್ಲಿ ಸಾಧನೆ ಗಳಿಸಿರುವ ವ್ಯಕ್ತಿಗಳಿದ್ದಾರೆ. ಕೆಲವರು ಚಿಕ್ಕ ವಯಸ್ಸಿನಲ್ಲೇ ಈ ರೀತಿಯ ಸಂಘಟನೆಗಳಿಗೆ ಆಕರ್ಷಿತರಾದರೆ ಕೆಲವರು ಮಧ್ಯವಯಸ್ಸಿನಲ್ಲಿ ಆಗುತ್ತಾರೆ.

ಸಾಮಾನ್ಯವಾಗಿ ಹೊಸದಾಗಿ ಭಯೋತ್ಪಾದನಾ ತಂಡಗಳಿಗೆ ಸೇರಿಕೊಳ್ಳುವವರಿಗ ಮೂರು ರೀತಿಯ ತರಬೇತಿ ನೀಡಲಾಗುತ್ತದೆ. ಆರಂಭದಲ್ಲಿ ಧರ್ಮ ಪ್ರಚಾರ ಮಾಡಿ, ಹೇಗೆ ತಮ್ಮ ಧರ್ಮ ಸಂಕಷ್ಟಕ್ಕೆ ಒಳಗಾಗಿದೆ ಎಂದು ಮನನ ಮಾಡಿಕೊಡಲಾಗುತ್ತದೆ. ಧರ್ಮದ ರಕ್ಷಣೆಯನ್ನು ಮಾಡಲು ಭಯೋತ್ಪಾದನೆಯೇ ಏಕೈಕ ಮಾರ್ಗ ಎಂದು ತಿಳಿಸಲಾಗುತ್ತದೆ. ಈ ರೀತಿಯ ತರಬೇತಿಯಲ್ಲಿ ಉತ್ತಮ ಅಂಕ ಗಳಿಸಿದವರು ಮುಂದಿನ ಹಂತಕ್ಕೆ ಹೋಗುತ್ತಾರೆ. ಮುಂದಿನ ಹಂತಕ್ಕೆ ಹೋಗದವರನ್ನು ಅವರವರ ರಾಜ್ಯ/ಊರು/ ದೇಶಗಳಿಗೆ ಕಳಿಸಿ ಯಾವಾಗ ಸಹಾಯ ಬೇಕೋ ಆಗ ಸಂಪರ್ಕಿಸುತ್ತೇವೆ ಎಂದು ಹೇಳುತ್ತಾರೆ. ಇಂತಹವರು ತಮ್ಮ ಊರುಗಳಿಗೆ ವಾಪಸಾಗಿ ದೈನಂದಿನ ಚಟುವಟಿಕೆಗಳಲ್ಲಿ ತೊಡಗುತ್ತಾರೆ. ಸಮಯ ಬಂದಾಗ ಇವರು ಆತಂಕವಾದಿಗಳಿಗೆ ಊಟ, ವಸತಿ, ಆದಾಗುತಾನಾ, ಹಾ.

ಆಯುಧಗಳು ಇತ್ಯಾದಿಯನ್ನು ಕೊಡಮಾಡಬೇಕಾಗುತ್ತದೆ. ಇವರನ್ನು 'ಸ್ಲೀಪರ್ ಸಲ್'ಗಳು ಎಂದು ಕರೆಯುತ್ತಾರೆ. ಇವರ ಖರ್ಚಿಗಾಗಿ ಹಣವನ್ನು ಕಳುಹಿಸಲಾಗುತ್ತದೆ.

ಎರಡನೇ ಹಂತದಲ್ಲಿ ವಿಧ್ವಂಸಕ ಕೃತ್ಯಗಳನ್ನು ಹೇಗೆ ಮಾಡುವುದು ಎನ್ನುವುದನ್ನು ಕಲಿಸಲಾಗುತ್ತದೆ. ಪ್ರಶಿಕ್ಷಣಾರ್ಥಿಗಳಿಗೆ ವಿವಿಧ ರೀತಿಯ ಶಸ್ತ್ರಾಸ್ತ್ರಗಳ ಪರಿಚಯ ಮಾಡಿ ಅವುಗಳನ್ನು ಯಾವ ರೀತಿ ಬಳಸಬೇಕು, ಯಾವ ರೀತಿ ಪೊಲೀಸರ ಕಣ್ಣು ತಪ್ಪಿಸಬೇಕು, ಯಾವ ರೀತಿ ಬಾಂಬ್‌ಗಳನ್ನು ತಯಾರಿಸಬೇಕು ಎಂದು ಕಲಿಸಿಕೊಡಲಾಗುತ್ತದೆ. ಇದು ಮಿಲಿಟರಿ ತರಬೇತಿ.

ಮೂರನೆಯ ಹಂತದಲ್ಲಿ ಇನ್ನೂ ಹೆಚ್ಚಿನ ತರಬೇತಿ ನೀಡಿ ಒಂದು ದೇಶದಿಂದ ಇನ್ನೊಂದಕ್ಕೆ ಹೇಗೆ ನುಸುಳುವುದು, ಪಾಸ್‌ಪೋರ್ಟ್ ಫೋರ್ಜರಿ, ಕಳ್ಳಸಾಗಾಣಿಕೆ, ಖೋಟಾ ನೋಟುಗಳ ವಿತರಣೆ, ಮಾದಕ ವಸ್ತುಗಳ ಸಾಗಾಟ ಇತ್ಯಾದಿಗಳ ಬಗ್ಗೆ ಕಲಿಸಿಕೊಡಲಾಗುತ್ತದೆ. ಈ ತರಬೇತಿ ಮುಗಿಸಿದವರನ್ನು ದಾಳಿಗಳು ನಡೆಸುವಾಗ ಮುಂಚೂಣಿಯಲ್ಲಿಡಲಾಗುತ್ತದೆ.

ನಮಗೆ ತಿಳಿದುಬಂದಿರುವಂತೆ ಸೌದಿ ಅರೇಬಿಯಾ ಮತ್ತಿತರ ಕೊಲ್ಲಿ ರಾಷ್ಟ್ರಗಳಲ್ಲಿ ಕೆಲಸಕ್ಕೆ ಹೋದಂತಹ ಭಾರತೀಯ ವ್ಯಕ್ತಿಗಳನ್ನು ಗುರುತಿಸಿ ಅಲ್ಲಿ ಅವರಿಗೆ ಮೊದಲ ಹಂತದ ತರಬೇತಿ ನೀಡಲಾಗುತ್ತದೆ. ಎರಡನೆಯ ಹಂತದ ತರಬೇತಿಗಾಗಿ ಪಾಕಿಸ್ತಾನಕ್ಕೆ ಕರೆದೊಯ್ಯಲಾಗುತ್ತಿದೆ. ತರಬೇತಿ ಹೊಂದಿದ ಜೀಹಾದಿಗಳು ಕೆಲವೊಮ್ಮೆ ಹೆಚ್ಚಿನ ತರಬೇತಿಯನ್ನು ಬಾಂಗ್ಲಾದೇಶದಲ್ಲೂ ಪಡೆದಿದ್ದಾರೆ. ಹೈದರಾಬಾದಿನಲ್ಲಿ ಎಸ್.ಟಿ.ಎಫ್. ಕಚೇರಿಯ ಸ್ಫೋಟಗೊಳಿಸಿದ ಆತ್ಮಹತ್ಯಾ ತಂಡದವರಲ್ಲಿ ಇಬ್ಬರು ಬಾಂಗ್ಲಾದೇಶದಿಂದ ನಮ್ಮ ದೇಶಕ್ಕೆ ನುಸುಳಿದ್ದು ತಿಳಿದುಬಂದಿದೆ.

ಆತಂಕವಾದಿ ಸಂಘಟನೆಗಳ ಸದಸ್ಯರು ದೇಶವಿದೇಶಗಳಲ್ಲಿ ಪಸರಿಸಿರುವುದರಿಂದ ಈ ಸಂಘಟನೆಗಳಿಗೆ ಸಂಪರ್ಕ ವ್ಯವಸ್ಥೆ ಅತೀ ಮುಖ್ಯವಾದದ್ದು. ಇವರುಗಳು ಮುಖ್ಯವಾಗಿ ಅವಲಂಬಿಸುವುದು ಸೇಲ್ ಫೋನ್‌ಗಳನ್ನು. ಅದರಲ್ಲೂ ಪ್ರೀ ಪೇಯ್ಡ್ ಸಿಮ್ ಕಾರ್ಡುಗಳನ್ನು ಖರೀದಿಸುವ ಮೂಲಕ. ಒಂದೆರಡು ಬಾರಿ ಸಂಭಾಷಣೆ ಮಾಡಿದ ಬಳಿಕ ಸಿಮ್ ಕಾರ್ಡುಗಳನ್ನು ನಾಶಪಡಿಸಿಬಿಡುತ್ತಾರೆ. ಎಸ್.ಎಂ.ಎಸ್. ಸಂದೇಶಗಳನ್ನು ವ್ಯಾಪಕವಾಗಿ ಮಾಡುತ್ತಾರೆ. ಸಂದೇಶಗಳಲ್ಲಿ 'ಕೋಡ್'ಗಳನ್ನು ಬಳಸುತ್ತಾರೆ. ಹಲವಾರು ಬಾರಿ ತಮ್ಮದೇ ಆದ ವೈರ್‌ಲೆಸ್ ಸೆಟ್‌ಗಳನ್ನು ಉಪಯೋಗಿಸುತ್ತಾರೆ (ಆಂಧ್ರದ ನಕ್ಸಲೈಟರು ವೈರ್‌ಲೆಸ್ ಸಂಪರ್ಕವನ್ನು ಹೆಚ್ಚಾಗಿ ಮಾಡುತ್ತಾರೆ). ಇಂಟರ್‌ನೆಟ್ ಮೂಲಕ ಸಂಪರ್ಕವನ್ನು ಮಾಡುತ್ತಾರೆ. ಈ ಕಾರಣಕ್ಕೆ ಲ್ಯಾಪ್‌ಟಾಪ್‌ಗಳನ್ನು ಬಳಸುತ್ತಾರೆ. ಸೈಬರ್ ಕೆಫೆಗಳಿಗೆ ಹೋಗಿ ಅಲ್ಲಿಂದ ಈ-ಮೇಲ್ ಸಂದೇಶಗಳನ್ನು ರವಾನಿಸುತ್ತಾರೆ/ಪಡೆಯುತ್ತಾರೆ. ಗುಂಪಿನ ಎಲ್ಲ ಸದಸ್ಯರೂ ಒಂದೇ ಒಂದು ಈ ಮೇಲ್ ಐ.ಡಿ. ಪಡೆದು ಅದರ ಮೂಲಕ ಸಂದೇಶಗಳನ್ನು ರವಾನಿಸುತ್ತಾರೆ. ಕೆಲವು ಭಯೋತ್ಪಾದಕಾ ತಂಡಗಳು ಸ್ಯಾಟಲೈಟ್ ಟೆಲಿಫೋನ್‌ಗಳನ್ನೂ ಬಳಸುತ್ತವೆ.

ಸಂಪರ್ಕ ಸಾಧನಗಳ ಬಳಕೆ ಹೆಚ್ಚಾಗುತ್ತ ಹಾಗೆ ಭಯೋತ್ಪಾದಕರ ಚಟುವಟಿಕೆಗಳೂ ಹೆಚ್ಚಾಗುತ್ತದೆ. ರಕ್ಷಣಾ ಪಡೆಗಳಿಗೆ ಸಂಪರ್ಕ ಸಾಧನಗಳ ಸಂಭಾಷಣೆಗಳನ್ನು (ಈ ಮೇಲ್ ಕೂಡಾ) ಸುಲಭವಾಗಿ ಕೇಳುವ ಅವಕಾಶವಿರುವುದರಿಂದ ಭಯೋತ್ಪಾದಕರು ಹೆಚ್ಚು ಹೆಚ್ಚು ಎಚ್ಚರವನ್ನು ವಹಿಸುತ್ತಾರೆ.

ಕರ್ನಾಟಕ ರಾಜ್ಯದಲ್ಲಿ ಭಯೋತ್ಪಾದಕರ ಸಂಘಟನೆಗಳಿವೆಯೇ? ನಮ್ಮ ರಾಜ್ಯದಲ್ಲಿ 'ಸಿಮಿ' ಸಂಘಟನೆ ರಾಜ್ಯದ ಉತ್ತರ ಭಾಗಗಳಲ್ಲಿ ಚಟುವಟಿಕೆ ನಡೆಸಿತ್ತು. 'ದೀನ್‌ದಾರ್ ಅಂಜುಮನ್' ಸಂಘಟನೆ ಬೆಂಗಳೂರು, ಹುಬ್ಬಳ್ಳಿ, ವಾಡಿ ಇತ್ಯಾದಿ ಊರುಗಳಲ್ಲಿ ಚರ್ಚ್‌ಗಳಲ್ಲಿ ಸಣ್ಣ ಪ್ರಮಾಣದ ಸ್ಫೋಟಗಳನ್ನು ನಡೆಸಿತ್ತು. ಮಾವೋವಾದಿಗಳು ಪಶ್ಚಿಮ ಘಟ್ಟಗಳ ನಾಲ್ಕು ಜಿಲ್ಲೆಗಳಲ್ಲದೆ ರಾಜ್ಯದ 12 ಜಿಲ್ಲೆಗಳಲ್ಲಿ ಪಸರಿಸಿದ್ದಾರೆ. ಹೈದ್ರಾಬಾದಿನ ಎಸ್.ಟಿ. ಎಫ್. ಕಚೇರಿಯ ಸ್ಫೋಟಕ್ಕೆ ಸಂಬಂಧಿಸಿದಂತೆ ಬೀದರ್ ಜಿಲ್ಲೆಯಲ್ಲಿನ ಕೆಲವರನ್ನು ಬಂಧಿಸಲಾಗಿದೆ.

ಗುಲ್ಬರ್ಗಾದಲ್ಲಿ ಇತ್ತೀಚೆಗೆ ಆತಂಕವಾದಿಯೊಬ್ಬನನ್ನು ಬಂಧಿಸಲಾಗಿದೆ. 1990ರ ಸುಮಾರು ಬೀದರ್ ನಗರದ ದೀಪಕ್ ಥಿಯೇಟರ್‌ನಲ್ಲಿ ಸಿಖ್ ಆತಂಕವಾದಿಗಳು ಬಾಂಬ್ ಸ್ಫೋಟಿಸಿ ಹಲವಾರು ಅಮಾಯಕರ ಬಲಿಯನ್ನು ತೆಗೆದುಕೊಂಡಿದ್ದರು. ಗುಜರಾತಿನಲ್ಲಿ ಬಂಧಿತರಾದ ಕೆಲವು ಭಯೋತ್ಪಾದಕರು ತಾವು ಬಿಜಾಪುರ ಜಿಲ್ಲೆಗೆ ಸೇರಿದವರೆಂದು ತಿಳಿಸಿದ್ದರು.

ಉತ್ತರ ಪ್ರದೇಶದಲ್ಲಿ ದಸ್ತಗಿರಿಯಾದ ಇಬ್ಬರು ಆತಂಕವಾದಿಗಳು ತಾವು ಪಾಕಿಸ್ತಾನದಲ್ಲಿ ಭಯೋತ್ಪಾದನೆ ಬಗ್ಗೆ ತರಬೇತಿ ಪಡೆದಿದ್ದಾಗಿಯೂ ಪಾಕಿಸ್ತಾನದಿಂದ ಉತ್ತರ ಪ್ರದೇಶಕ್ಕೆ ಬರುವಾಗ ಹಾದಿಯಲ್ಲಿ ಭಟ್ಕಳದಲ್ಲಿ ಎರಡು-ಮೂರು ದಿನ ತಂಗಿದ್ದಾಗಿಯೂ ತಿಳಿಸಿದ್ದರು. ೨೦೦೫ರ ಡಿಸೆಂಬರ್ ತಿಂಗಳಲ್ಲಿ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್ ಮೇಲೆ ಉಗ್ರವಾದಿಯೊಬ್ಬನ ದಾಳಿ ನಡೆಯಿತು.

ಈ ಸಂಬಂಧ ಕೋಲಾರ ಜಿಲ್ಲೆಯ ಕೆಲವರು ಬಂಧಿತರಾಗಿದ್ದಾರೆ. ಬೆಂಗಳೂರಿನಲ್ಲಿಯೇ ರಾಜೀವ್ ಗಾಂಧಿ ಹತ್ಯಾಕಾಂಡದ ಶಿವರಾಸನ್ ಮತ್ತಿತರರು ಅಡಗಿದ್ದರು. ಬೆಂಗಳೂರಿನ ಸಂಜಯನಗರದಲ್ಲಿ ತಮಿಳುನಾಡಿಗೆ ಸೇರಿದ ಉಗ್ರವಾದಿಗಳನ್ನು ಎನ್‌ಕೌಂಟರ್‌ನಲ್ಲಿ ಕೊಲ್ಲಲಾಯಿತು. ಸ್ಫೋಟಕ ವಸ್ತುಗಳನ್ನು ಹೊಂದಿದ್ದ ಕೆಲವು ತಮಿಳು ಉಗ್ರವಾದಿಗಳನ್ನು ಬೆಂಗಳೂರಿನ ಫ್ರೇಜರ್ ಟೌನ್‌ನಲ್ಲಿ ಬಂಧಿಸಲಾಗಿದೆ. ಈ ರಾಜ್ಯದಲ್ಲಿ ಹಲವಾರು 'ಸ್ಲೀಪರ್ ಸೆಲ್‌ಗಳು ಇರಬಹುದೆಂದು ತಜ್ಞರು ಅಂದಾಜು ಮಾಡಿದ್ದಾರೆ.

ಭಯೋತ್ಪಾದಕರ ಬಗ್ಗೆ ಎಷ್ಟು ಎಚ್ಚರ ವಹಿಸಿದರೂ ಕಡಿಮೆಯೇ. ಮುಂದಿನ ವರ್ಷಗಳಲ್ಲಿ ಈ ಸಮಸ್ಯೆ ಇನ್ನೂ ತೀವ್ರಗೊಳ್ಳುತ್ತದೆಯೇ ಹೊರತು ಕಡಿಮೆ ಆಗುವ ಲಕ್ಷಣಗಳು ಕಂಡುಬರುತ್ತಿಲ್ಲ.

# 8

## ಕಾನೂನು ವಿರೋಧಿ ಚಟುವಟಿಕೆ (ತಡೆ) ಕಾಯ್ದೆ

ಭಾರತದ ಅಖಂಡತೆ ಹಾಗೂ ಸಾರ್ವಭೌಮತೆಯ ರಕ್ಷಣೆಗಾಗಿ ನಾಗರೀಕರ ಮೇಲೆ ಕೆಲವೊಂದು ನ್ಯಾಯಯುತವಾದ ನಿಬಂಧನೆಗಳನ್ನು ಹಾಕುವುದು ಸೂಕ್ತವೇ ಎನ್ನುವ ವಿಷಯವನ್ನು ಪರಿಗಣಿಸಲು 60 ರ ದಶಕದಲ್ಲಿ ರಾಷ್ಟ್ರೀಯ ಐಕ್ಯತಾ ಮಂಡಳಿ ಸಮಿತಿಯೊಂದನ್ನು ರಚಿಸಿತ್ತು. ಈ ಸಮಿತಿಯ ಶಿಫಾರಸ್ಸಿನ ಮೇರೆಗೆ ಕೇಂದ್ರ ಸರ್ಕಾರವು ಸಂವಿಧಾನದ ಹದಿನಾರನೇ ತಿದ್ದುಪಡಿ ತಂದು ಅಭಿವ್ಯಕ್ತಿ ಸ್ವಾತಂತ್ರದ ಹಕ್ಕು, ಸಂಘಟನೆಗಳು ಹಾಗೂ ಸಂಘಗಳನ್ನು ಕಟ್ಟಿಕೊಳ್ಳುವ ಹಕ್ಕು ಮತ್ತು ಶಾಂತಿಯುತವಾಗಿ ಹಾಗೂ ನಿರಾಯುಧರಾಗಿ ಒಂದೆಡೆ ಗುಂಪು ಸೇರುವ ಹಕ್ಕುಗಳ ಬಗ್ಗೆ ಕೆಲವು ನ್ಯಾಯಯುತವಾದ ನಿಬಂಧನೆಗಳನ್ನು ಹೇರಲು ಅವಕಾಶವನ್ನು ಪಡೆಯಿತು. ತದನಂತರ ಕಾನೂನು ವಿರೋಧಿ ಚಟುವಟಿಕೆ[ತಡೆ] ಮಸೂದೆಯನ್ನು 1963ರಲ್ಲಿ ಸಂಸತ್ತಿನಲ್ಲಿ ಮಂಡಿಸಿತು. ತತ್ಫಲವಾಗಿ ರೂಪುಗೊಂಡಿದ್ದೇ ಕಾನೂನು ವಿರೋಧಿ ಚಟುವಟಿಕೆಗಳ [ತಡೆ] ಕಾಯ್ದೆ 1967. ಈ ಕಾಯ್ದೆಯ ಉದ್ದೇಶ ಭಾರತದ ಅಖಂಡತೆ ಹಾಗೂ ಸಾರ್ವಭೌಮತೆಗಳ ವಿರುದ್ಧ ನಡೆಯುವ ಚಟುವಟಿಕೆಗಳನ್ನು ನಿಗ್ರಹಿಸುವ ಶಕ್ತಿ ಹೊಂದುವುದು. ಈ ಕಾಯ್ದೆಯು ಇಡೀ ದೇಶಕ್ಕೇ ಅನ್ವಯವಾಗುತ್ತದೆ.

ಈ ಕಾಯ್ದೆ ಜಾರಿಗೆ ಬಂದ ಸುಮಾರು ಎರಡು ದಶಕದ ನಂತರ ಪಂಜಾಬ್, ಪೂರ್ವೋತ್ತರ ರಾಜ್ಯಗಳು ಹಾಗೂ ಕಾಶ್ಮೀರದಲ್ಲಿ ಹಲವಾರು ಆತಂಕವಾದೀ ಚಟುವಟಿಕೆಗಳು ಪ್ರಾರಂಭವಾದವು. ಇಂತಹ ಚಟುವಟಿಕೆಗಳನ್ನು ಸಮರ್ಪಕವಾಗಿ ಎದುರಿಸಲು ಕಾನೂನು

ವಿರೋಧೀ ಚಟುವಟಿಕೆ ಕಾಯ್ದೆಗೆ ತಿದ್ದುಪಡಿ ತರುವ ಅವಶ್ಯಕತೆಯನ್ನು ಸರ್ಕಾರ ಮನಗಂಡು 2004ರಲ್ಲಿ ಈ ಕಾಯ್ದೆಗೆ ವ್ಯಾಪಕ ತಿದ್ದುಪಡಿ ತಂದಿತು. 2004ರ ಡಿಸೆಂಬರ್ ತಿಂಗಳಿನಿಂದ ತಿದ್ದುಪಡಿಯಾಗಿರುವ ಕಾಯ್ದೆ ಜಾರಿಯಲ್ಲಿದೆ.

ಕಾನೂನು ವಿರೋಧಿ ಚಟುವಟಿಕೆಗಳ ಕಾಯ್ದೆಯ ಮುಖ್ಯ ಅಂಶ ಯಾವನೇ ವ್ಯಕ್ತಿ ಈ ಕಾಯ್ದೆಯ ಮೇರೆಗೆ ಶಿಕ್ಷಿಸಬಹುದಾದ ಅಪರಾಧವನ್ನು ಭಾರತದ ಹೊರಗಡೆ ಮಾಡಿದರೂ ಅಂತಹವನನ್ನು ಭಾರತದಲ್ಲೇ ಅಪರಾಧ ಮಾಡಿದ್ದಾನೆ ಎಂದು ಭಾವಿಸಿ ಶಿಕ್ಷೆ ನೀಡಬಹುದಾಗಿದೆ. ಉದಾಹರಣೆಗೆ 'ಅ' ಎನ್ನುವವನು ಪಾಕಿಸ್ತಾನದಲ್ಲಿ ಕುಳಿತು ಈ ಕಾಯ್ದೆಯಲ್ಲಿ ಶಿಕ್ಷೆ ನೀಡುವಂತಹ ಅಪರಾಧವನ್ನು ಮಾಡಿದರೆ ಆತನಿಗೆ ಭಾರತದಲ್ಲಿ ಶಿಕ್ಷೆ ನೀಡಬಹುದಾಗಿದೆ. ಇದಲ್ಲದೆ ಈ ಕಾಯ್ದೆಯು ಹೊರದೇಶದಲ್ಲಿರುವ ಭಾರತೀಯ ನಾಗರೀಕರಿಗೆ, ಪ್ರಪಂಚದ ಯಾವುದೇ ಭಾಗದಲ್ಲಿ ಇರುವ ಭಾರತದ ಸರ್ಕಾರೀ ನೌಕರರಿಗೆ ಹಾಗೂ ಭಾರತದಲ್ಲಿ ನೋಂದಣಿಯಾದ ಹಡಗುಗಳು ಹಾಗೂ ವಿಮಾನಗಳಲ್ಲಿ ಇರುವಂತಹ ಎಲ್ಲಾ ವ್ಯಕ್ತಿಗಳಿಗೂ, [ಆ ಹಡಗು/ ವಿಮಾನ ವಿಶ್ವದ ಯಾವುದೇ ಭಾಗದಲ್ಲಿ ಇದ್ದರೂ] ಅನ್ವಯವಾಗುತ್ತದೆ.

ಈ ಕಾಯ್ದೆಯಲ್ಲಿ ಬಳಸಲಾಗಿರುವ ಕೆಲವು ಶಬ್ದ ಹಾಗೂ ವಾಕ್ಯಗಳ ಅರ್ಥವನ್ನು ಕಲಂ 2ರಲ್ಲಿ ತಿಳಿಸಲಾಗಿದೆ. ಇದರನ್ವಯ "ನಾಮಾಂಕಿತ ಅಧಿಕಾರಿ" ಎಂದರೆ ಕೇಂದ್ರ ಸರ್ಕಾರ ನಾಮ ನಿರ್ದೇಶನ ಮಾಡಿದ ಜಂಟಿ ಕಾರ್ಯದರ್ಶಿ ಹುದ್ದೆಗೆ ಕಡಿಮೆ ಇಲ್ಲದ ಅಧಿಕಾರಿ ಹಾಗೂ ರಾಜ್ಯ ಸರ್ಕಾರ ನಾಮ ನಿರ್ದೇಶನ ಮಾಡಿದ ಕಾರ್ಯದರ್ಶಿ ಹುದ್ದೆಗೆ ಕಡಿಮೆ ಇಲ್ಲದ ಅಧಿಕಾರಿ.

"ಆತಂಕವಾದದ ಫಲ" ಎಂದರೆ ಆತಂಕವಾದೀ ಚಟುವಟಿಕೆಗಳನ್ನು ನಡೆಸಿ ತತ್ಪರಿಣಾಮವಾಗಿ ಲಭಿಸಿಕೊಂಡ ಎಲ್ಲಾ ಬಗೆಯ ಆಸ್ತಿ. ಈ ರೀತಿಯ ಆಸ್ತಿ ಆತಂಕವಾದೀ ಕೃತ್ಯಕ್ಕೆ ಸಂಬಂಧಪಟ್ಟಿದ್ದೂ ಆಗಿರಬಹುದು. ಯಾವುದೇ ಆತಂಕವಾದೀ ಸಂಘಟನೆಗೆ ಸಂಬಂಧಿಸಿದ ಆಸ್ತಿಯೂ ಆಗಿರಬಹುದು. ಯಾರದೇ ವಶದಲ್ಲಿ ಈ ಆಸ್ತಿ ಇದ್ದರೂ ಇಲ್ಲವೇ ಯಾರದೇ ಹೆಸರಿನಲ್ಲಿ ಈ ಆಸ್ತಿ ಇದ್ದರೂ ಅದನ್ನು ಆತಂಕವಾದದ ಫಲವೆಂದೇ ಪರಿಗಣಿಸಲಾಗುವುದು. ಆಸ್ತಿ ಎಂದರೆ ಸ್ಥಿರಾಸ್ತಿ, ಚರಾಸ್ತಿ, ಬ್ಯಾಂಕ್ ಠೇವಣಿ, ಶೇರುಗಳು ಹಾಗೂ ಯಾವುದೇ ರೀತಿಯ ಆರ್ಥಿಕ ಹಕ್ಕನ್ನು ನೀಡುವಂತಹ ದಾಖಲೆಗಳು.

"ಕಾನೂನು ವಿರೋಧೀ ಚಟುವಟಿಕೆ" ಎಂದರೆ ಯಾವನೇ ಒಬ್ಬ ವ್ಯಕ್ತಿ, ಇಲ್ಲವೇ ವ್ಯಕ್ತಿಗಳಿರುವ ಸಂಘವು, ಮಾತಿನಿಂದಾಗಲೀ, ಬರಹದಿಂದಾಗಲೀ, ಸನ್ನೆಯ ಮೂಲಕವಾಗಲೀ, ಚಿತ್ರಗಳ ಮೂಲಕವಾಗಲೀ ಮಾಡುವ ಕೆಳಕಂಡ ಕೃತ್ಯಗಳು :–

ಭಾರತದ ಯಾವುದೇ ಒಂದು ಭಾಗವನ್ನು ಭಾರತದಿಂದ ಹೊರತರಲು ಉದ್ದೇಶಿಸಲಾದ ಕೃತ್ಯ ಅಥವಾ ಈ ರೀತಿ ಪ್ರತ್ಯೇಕಗೊಳಿಸಲು ಕೆಲವು ವ್ಯಕ್ತಿಗಳಿಗೆ ಯಾ ಸಂಘಗಳಿಗೆ ನೀಡುವ ಪ್ರಚೋದನೆ [ಭಾರತದ ಯಾವುದೇ ಒಂದು ಪ್ರದೇಶವನ್ನು ಭಾರತದ ಅವಿಭಾಜ್ಯ ಅಂಗವಲ್ಲ ಎಂದು ಸಾಧಿಸುವುದೂ ಇಂತಹ ಕೃತ್ಯವೇ]

ಭಾರತದ ಐಕ್ಯತೆ ಹಾಗೂ ಅಖಂಡತೆಯ ಬಗ್ಗೆ ಪ್ರಶ್ನಿಸುವುದು ಇಲ್ಲವೇ ಅಲ್ಲಗಳೆಯುವುದು ಇಲ್ಲವೇ ಐಕ್ಯತೆಗೆ ಭಂಗತರುವುದು ಇಲ್ಲವೇ ಭಂಗತರಲು ಯತ್ನಿಸುವುದು; ಇಲ್ಲವೇ ಉದ್ದೇಶಿಸುವುದು.

ಭಾರತ ದೇಶದ ವಿರುದ್ಧ ವೈರತ್ವ ಬರಿಸುವ ಇಲ್ಲವೇ ಅಸಮಾಧಾನ ಉಂಟು ಮಾಡುವಂತಹ ಕೃತ್ಯ.

"ಕಾನೂನು ವಿರೋಧೀ ಸಂಘ" ಎಂದರೆ ಯಾವ ಸಂಘದ ಸದಸ್ಯರು ಕಾನೂನು ವಿರೋಧೀ ಚಟುವಟಿಕೆಗಳಲ್ಲಿ ತೊಡಗಿರುತ್ತಾರೋ, ಇಲ್ಲವೇ ಯಾವ ಸಂಘವು ತನ್ನ ಸದಸ್ಯರು ಕಾನೂನು ವಿರೋಧೀ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಲು ಪ್ರಚೋದನೆ ನೀಡುತ್ತದೆಯೋ. ಇಲ್ಲವೇ ಸಹಾಯ ಹಸ್ತ ಚಾಚುತ್ತದೆಯೋ. ಇಲ್ಲವೇ ಭಾರತೀಯ ದಂಡ ಸಂಹಿತೆಯ ಕಲಂ 153ಎ ಹಾಗೂ 153ಬಿ ಗಳನ್ವಯ ಶಿಕ್ಷಾರ್ಹವಾದ ಕೃತ್ಯಗಳನ್ನು ಮಾಡುವ ಉದ್ದೇಶವಿರುವ ಸಂಘ. 153ಎ ಐಪಿಸಿ ಅನ್ವಯ ಜಾತಿ. ಮತ. ಹುಟ್ಟಿದ ಸ್ಥಳ. ವಾಸಿಸುವ ಸ್ಥಳ. ಭಾಷೆ. ಇತ್ಯಾದಿಗಳ ಕಾರಣ ನೀಡಿ ವಿವಿಧ ಜನಗಳ ಮಧ್ಯೆ ದ್ವೇಷ ಹುಟ್ಟಿಸುವುದು ಅಪರಾಧ. ಅಂತೆಯೇ ಕಲಂ 153ಬಿ ಅನ್ವಯ ರಾಷ್ಟ್ರೀಯ ಐಕ್ಯತೆಗೆ ತೊಡಕುಂಟುಮಾಡುವ ಮಾತುಗಳು. ಭಾಷಣ. ಬರವಣಿಗೆ. ಚಿತ್ರ. ಕಾರ್ಟೂನ್ ಇತ್ಯಾದಿಗಳನ್ನು ಅಭಿವ್ಯಕ್ತಿಸುವುದು ಅಪರಾಧ.

ಕಾನೂನು ವಿರೋಧಿ ಚಟುವಟಿಕೆಗಳ ಕಾಯ್ದೆಯ ಕಲಂ 3ರ ಅನ್ವಯ ಯಾವುದಾದರೊಂದು ಸಂಘವು ಕಾನೂನು ವಿರೋಧೀ ಸಂಘವಾಗಿದೆ ಎನ್ನುವುದನ್ನು ಕೇಂದ್ರ ಸರ್ಕಾರವು ಮನಗಂಡರೆ. ಅಧಿಕೃತ ರಾಜ್ಯಪತ್ರದಲ್ಲಿ ಆ ಸಂಘವನ್ನು ಕಾನೂನು ವಿರೋಧೀ ಸಂಘವೆಂದು ಪ್ರಕಟಿಸಬಹುದಾಗಿದೆ. ಇಂತಹ ಪ್ರತಿಯೊಂದು ಪ್ರಕಟಣೆಯಲ್ಲೂ ಯಾವ ಕಾರಣಕ್ಕೆ ಸಂಘವೊಂದನ್ನು ಕಾನೂನು ವಿರೋಧೀ ಸಂಘವೆಂದು ಪರಿಗಣಿಸಲಾಗಿದೆ ಎನ್ನುವ ಬಗ್ಗೆ ಸಕಾರಣವನ್ನು ನೀಡಬೇಕು.

ಆದರೆ ಎಲ್ಲಾ ಸಂದರ್ಭಗಳಲ್ಲಿಯೂ ಕೇಂದ್ರ ಸರ್ಕಾರ ಯಾವ ಕಾರಣಕ್ಕಾಗಿ ಸಂಘವೊಂದನ್ನು ಕಾನೂನು ವಿರೋಧೀ ಎಂದು ಪರಿಗಣಿಸಲಾಗಿದೆ ಎನ್ನುವ ಬಗ್ಗೆ ವಿವರಣೆ ನೀಡಬೇಕಾದ್ದಿಲ್ಲ. ಇಂತಹ ವಿವರಣೆ ಸಾರ್ವಜನಿಕ ಹಿತಾಸಕ್ತಿಗೆ ವಿರೋಧ ಎಂದು ಸರ್ಕಾರಕ್ಕೆ ಅನಿಸಿದಾಗ ವಿವರಣೆ ನೀಡಬೇಕಾದ್ದಿಲ್ಲ. ಅಧಿಕೃತ ರಾಜ್ಯ ಪತ್ರವಲ್ಲದೆ. ತನ್ನ ಅಧಿಸೂಚನೆಯನ್ನು ಕೇಂದ್ರ ಸರ್ಕಾರ "ಕಾನೂನು ವಿರೋಧೀ" ಸಂಘ ಎಲ್ಲಿ ಅಸ್ತಿತ್ವದಲ್ಲಿದೆಯೋ ಆ ರಾಜ್ಯದಲ್ಲಿ ಪ್ರಕಟವಾಗುವ ಹೆಚ್ಚು ಪ್ರಸಾರವಿರುವ ದಿನಪತ್ರಿಕೆಗಳಲ್ಲಿಯೂ ಪ್ರಕಟಿಸತಕ್ಕದ್ದು. ಮೇಲಾಗಿ ಯಾವ ಸಂಘದ ಬಗ್ಗೆ ಅಧಿಸೂಚನೆ ಹೊರಡಿಸಲಾಗಿದೆಯೋ ಆ ಸಂಘದ ಪದಾಧಿಕಾರಿಗಳಿಗೆ ಅಧಿಸೂಚನೆಯ ಪ್ರತಿಯೊಂದನ್ನು ನೀಡತಕ್ಕದ್ದು. ಇದಲ್ಲದೆ ಸಂಘದ ಕಾರ್ಯಾಲಯದ ಬಾಗಿಲಿನ ಮೇಲೆ ಅಧಿಸೂಚನೆ ಪ್ರತಿ ಅಂಟಿಸಬಹುದು.

ಕಲಂ 3ರ ಅನ್ವಯ ಕೇಂದ್ರ ಸರ್ಕಾರ ಹೊರಡಿಸಿದ ಅಧಿಸೂಚನೆಯು ಈ ಕಾನೂನಿನನ್ವಯ ಸ್ಥಾಪಿತವಾದ ನ್ಯಾಯ ಮಂಡಳಿಯ ಅನುಮೋದನೆ ಪಡೆದ ನಂತರವೇ

ಜಾರಿಗೆ ಬರುತ್ತದೆ. ಕೆಲವೊಂದು ವಿಶೇಷ ಸಂದರ್ಭಗಳಲ್ಲಿ ಮಾತ್ರ ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನದಿಂದಲೇ ಅಧಿಸೂಚನೆ ಜಾರಿಯಾಗುತ್ತದೆ.

ಈ ಕಾಯ್ದೆಯ ಕಲಂ 4 ರ ಅನ್ವಯ ಕೇಂದ್ರ ಸರ್ಕಾರವು ಯಾವುದಾದರೊಂದು ಸಂಘವನ್ನು ಕಾನೂನು ವಿರೋಧಿ ಎಂದು ಘೋಷಿಸಿದ ನಂತರ. ಅಂದರೆ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನದಿಂದ 30 ದಿನಗಳ ಒಳಗೆ ಅಧಿಸೂಚನೆಯನ್ನು ಸಂಬಂಧಿಸಿದ ನ್ಯಾಯಮಂಡಳಿಗೆ ಕಳಿಸಬೇಕು. ನ್ಯಾಯಮಂಡಳಿಯು ಸದರಿ ಸಂಘವನ್ನು ಕಾನೂನು ವಿರೋಧೀ ಸಂಘವೆಂದು ಘೋಷಿಸಲು ಸಕಾರಣಗಳು ಇವೆಯೇ ಇಲ್ಲವೇ ಎನ್ನುವುದನ್ನು ಪರಾಮರ್ಶಿಸಬೇಕು. ನ್ಯಾಯಮಂಡಳಿಯು ಕಾನೂನು ವಿರೋಧೀ ಎಂದು ಘೋಷಿಸಲಾದ ಸಂಘಕ್ಕೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿ ಸದರಿ ಸಂಘದಿಂದ 30 ದಿನಗಳೊಳಗಾಗಿ ವಿವರಣೆಯನ್ನು ಪಡೆಯಬೇಕು. ವಿವರಣೆ ಪಡೆದ ಬಳಿಕ ನ್ಯಾಯ ಮಂಡಳಿಯು ವಿಚಾರಣೆಯೊಂದನ್ನು ನಡೆಸಿ [ಆರು ತಿಂಗಳ ಒಳಗೆ ವಿಚಾರಣೆಯನ್ನು ಮುಗಿಸಬೇಕು] ಸಂಘವನ್ನು ಕಾನೂನು ಬಾಹಿರ ಎಂದು ಘೋಷಿಸಲು ಸಕಾರಣಗಳು ಇವೆಯೇ ಇಲ್ಲವೇ ಎಂಬ ತೀರ್ಪನ್ನು ನೀಡಬೇಕು. ನ್ಯಾಯಮಂಡಳಿಯ ತೀರ್ಪನ್ನೂ ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟಿಸಬೇಕು.

ಈ ಕಾಯ್ದೆಯ ಕಲಂ5 ರನ್ವಯ ಕೇಂದ್ರ ಸರ್ಕಾರವು "ಕಾನೂನು ವಿರೋಧೀ ಚಟುವಟಿಕೆ [ತಡೆ] ನ್ಯಾಯಮಂಡಳಿ" ಎಂಬ ಹೆಸರಿನ ಏಕ ಸದಸ್ಯ ಪೀಠದ ನ್ಯಾಯಮಂಡಳಿಯನ್ನು ರಚಿಸಬೇಕು. ಈ ನ್ಯಾಯ ಮಂಡಳಿಯ ಸದಸ್ಯರಾಗಬೇಕಾದ ವ್ಯಕ್ತಿ ಹೈ ಕೋರ್ಟ್ ನ್ಯಾಯಾಧೀಶರೇ ಆಗಿರಬೇಕು.

ಕಾನೂನು ವಿರೋಧಿ ಚಟುವಟಿಕೆಗಳ ಕಾಯ್ದೆಯ ಕಲಂ7 ರಂತೆ ಯಾವುದಾದರೊಂದು ಸಂಘವನ್ನು ಕಾನೂನು ವಿರೋಧಿ ಎಂದು ಘೋಷಿಸಿದ ನಂತರ ಕೇಂದ್ರ ಸರ್ಕಾರಕ್ಕೆ ಆ ಸಂಘಕ್ಕೆ ಸಂಬಂಧಿಸಿದ ಆಸ್ತಿಪಾಸ್ತಿಗಳನ್ನು ಯಾರಾದರೊಬ್ಬ ವ್ಯಕ್ತಿ ಹೊಂದಿದ್ದಾನೆ ಎಂದು ಮನವರಿಕೆಯಾದರೆ ಸರ್ಕಾರವು ಲಿಖಿತ ಆದೇಶವೊಂದನ್ನು ಹೊರಡಿಸಿ ಆ ವ್ಯಕ್ತಿಯು ಸದರಿ ಆಸ್ತಿಯನ್ನು ಇತರರಿಗೆ ಹಸ್ತಾಂತರ ಮಾಡುವುದನ್ನು ತಡೆಯುವಂತೆ ನಿಷೇದ ಹೇರಬಹುದು. ಈ ನಿಷೇಧಾಜ್ಞೆಯ ಪ್ರತಿಯೊಂದನ್ನು ಸರ್ಕಾರ ಪತ್ರಾಂಕಿತ ಹುದ್ದೆ ಹೊಂದಿರುವ ಯಾವುದಾದರೂ ಸರ್ಕಾರೀ ಅಧಿಕಾರಿಗೆ ನೀಡಬಹುದು. ಸದರಿ ಅಧಿಕಾರಿಯು ಈ ನಿಷೇದಾಜ್ಞೆಯನ್ನೇ ವಾರಂಟ್ ಎಂದು ಪರಿಗಣಿಸಿ ಯಾರ ಮೇಲೆ ಆದೇಶ ಹೊರಡಿಸಲಾಗಿದೆಯೋ ಆ ವ್ಯಕ್ತಿಯ ಮನೆ, ಕಚೇರಿ ಪ್ರವೇಶಿಸಿ ಸದರಿ ಆಸ್ತಿಪಾಸ್ತಿಯ ಬಗ್ಗೆ ವಿಚಾರಣೆಯನ್ನು ನಡೆಸಬಹುದು.

# 9

## ಕಾನೂನು ವಿರೋಧಿ ಸಂಘಟನೆಗಳ ಆಸ್ತಿಪಾಸ್ತಿಗಳ ಮೇಲೆ ನಿಗ್ರಹ

ಯಾವನೇ ವ್ಯಕ್ತಿ ಕಾನೂನು ವಿರೋಧೀ ಚಟುವಟಿಕೆ [ತಡೆ] ಕಾನೂನಿನ ಕಲಂ 7ರನ್ವಯ ನಿಷೇದಾಜ್ಞೆಯನ್ನು ಸ್ವೀಕರಿಸಿದ ನಂತರ ತಾನು ಸಾಮಾನ್ಯವಾಗಿ ವಾಸವಿರುವ ಪ್ರದೇಶದ ಜಿಲ್ಲಾ ನ್ಯಾಯಾಧೀಶರಿಗೆ ಅರ್ಜಿಯೊಂದನ್ನು ಸಲ್ಲಿಸಿ ತನ್ನ ಆಸ್ತಿಪಾಸ್ತಿಯು ಕಾನೂನು ವಿರೋಧೀ ಚಟುವಟಿಕೆಗಳಿಗಾಗಿ ಬಳಸಲಾಗುತ್ತಿಲ್ಲ ಇಲ್ಲವೇ ಬಳಸುವುದಿಲ್ಲ ಎಂದು ಹದಿನೈದು ದಿನಗಳ ಒಳಗೆ ತಿಳಿಸಬಹುದು. ಇಂತಹ ಅರ್ಜಿ ಸ್ವೀಕರಿಸಿದ ಜಿಲ್ಲಾ ನ್ಯಾಯಾಧೀಶರು ಸದರಿ ಅರ್ಜಿಯ ಬಗ್ಗೆ ವಿಚಾರಣೆ ನಡೆಸಿ ತೀರ್ಮಾನ ನೀಡಬಹುದು.

ಯಾವುದಾದರೊಂದು ಸಂಘವನ್ನು ಈ ಕಾಯ್ದೆಯ ಕಲಂ3 ರ ಅನ್ವಯ ಕಾನೂನು ವಿರೋಧೀ ಎಂದು ಘೋಷಿಸಿದ್ದಲ್ಲಿ ಕೇಂದ್ರ ಸರ್ಕಾರವು ಸದರಿ ಸಂಘವು ಯಾವ ಜಾಗವನ್ನು ಕಾನೂನು ವಿರೋಧೀ ಕೃತ್ಯಗಳಿಗಾಗಿ ಉಪಯೋಗ ಮಾಡುತ್ತಿದೆ ಎಂದು ನಿರ್ದಿಷ್ಟ ಜಾಗವನ್ನು ಸೂಚಿಸಬಹುದು. “ಜಾಗ” ಎಂದರೆ ಮನೆ ಅಥವಾ ಕಟ್ಟಡ, ಟೆಂಟ್ ಅಥವಾ ದೋಣಿ ಎಂದು ಭಾವಿಸಬಹುದು.

ಕಾನೂನು ವಿರೋಧಿ ಕೃತ್ಯಗಳಿಗೆ ಬಳಸಲಾಗುತ್ತಿದೆ ಎಂದು ಒಂದು ಜಾಗವನ್ನು ಸೂಚಿಸಿದ ಕೂಡಲೇ ಸದರಿ ಜಾಗದ ವ್ಯಾಪ್ತಿ ಹೊಂದಿರುವ ಜಿಲ್ಲಾ ಮ್ಯಾಜಿಸ್ಟ್ರೇಟರು ಅಧಿಕಾರಿಯೊಬ್ಬನನ್ನು ನೇಮಿಸಿ ಸದರಿ ಸ್ಥಳದಲ್ಲಿ ಇರುವ ಎಲ್ಲಾ ಚರಾಸ್ತಿಯ [ಬಟ್ಟೆ ಪಾತ್ರೆ ಪಡಗ, ಹಾಸಿಗೆ-ದಿಂಬು,

ಆಹಾರ ಧಾನ್ಯಗಳು, ಜಾನುವಾರು, ಕುರಿ-ಕೋಳಿ ಹೊರತುಪಡಿಸಿ] ಪಟ್ಟಿ ಮಾಡಿಸಬೇಕು. ಈ ಪಟ್ಟಿ ಮಾಡುವಾಗ ಇಬ್ಬರು ಸಾಕ್ಷಿಗಳು ಸ್ಥಳದಲ್ಲಿ ಇರಬೇಕು.

ಜಿಲ್ಲಾ ಮ್ಯಾಜಿಸ್ಟ್ರೇಟರ ಅಭಿಪ್ರಾಯದಲ್ಲಿ ಪಟ್ಟಿಯಲ್ಲಿ ಇರುವಂತಹ ಚರಾಸ್ತಿಯನ್ನು ಕಾನೂನು ವಿರೋಧೀ ಚಟುವಟಿಕೆಗಳಿಗೆ ಉಪಯೋಗಿಸಬಹುದು ಎಂದಾದರೆ ಅವರು ಈ ಆಸ್ತಿಯನ್ನು ಬಳಸಬಾರದು ಎಂದು ಆಜ್ಞೆಯನ್ನು ಹೊರಡಿಸಬಹುದು.

ಕಾನೂನು ವಿರೋಧೀ ಚಟುವಟಿಕೆ ತಡೆ ಕಾಯ್ದೆಯ ಅನ್ವಯ ಯಾವುದಾದರೂ ಸಂಘವನ್ನು ಕಾನೂನು ವಿರೋಧೀ ಎಂದು ಘೋಷಿಸಿದ ನಂತರ ಯಾವನೇ ವ್ಯಕ್ತಿಯು ಅಂತಹ ಸಂಘದ ಸದಸ್ಯನಾಗಿದ್ದರೆ ಇಲ್ಲವೇ ಸದಸ್ಯನಾಗಿ ಮುಂದುವರೆದರೆ, ಆ ಸಂಘದ ಸಭೆಗಳಲ್ಲಿ ಭಾಗವಹಿಸಿದರೆ, ಆ ಸಂಘಕ್ಕೆ ದೇಣಿಗೆಯನ್ನು ನೀಡಿದರೆ ಇಲ್ಲವೇ ಸಂಘದ ಪರವಾಗಿ ದೇಣಿಗೆಯನ್ನು ಪಡೆದರೆ ಯಾವುದೇ ರೀತಿಯಲ್ಲಿ ಸಂಘದ ಚಟುವಟಿಕೆಗಳಿಗೆ ಸಹಕಾರ ನೀಡಿದರೆ ಅಂತಹ ವ್ಯಕ್ತಿಗೆ ಎರಡು ವರ್ಷಗಳವರೆಗೆ ಕಾರಾಗೃಹವನ್ನು ವಿಧಿಸಿ ದಂಡವನ್ನು ಹಾಕಬಹುದು.

ಯಾವನೇ ವ್ಯಕ್ತಿಯು ನಿಷೇಧ ಹಾಕಿರುವ ಸಂಘದ ಸದಸ್ಯನಾಗಿ ಮುಂದುವರೆದು ಸ್ವಯಂಪ್ರೇರಿತನಾಗಿ ಸಂಘದ ಧ್ಯೇಯೋದ್ದೇಶಗಳನ್ನು ಪಾಲಿಸಲು ಯಾವುದೇ ಕೃತ್ಯದ ಮೂಲಕ ಸಹಕರಿಸಿದರೆ, ಇಲ್ಲವೇ ಲೈಸನ್ಸ್ ಇಲ್ಲದ ಬಂದೂಕು/ಪಿಸ್ತೂಲು, ಮದ್ದುಗುಂಡುಗಳು, ಸ್ಫೋಟಕ ವಸ್ತುಗಳು ಇಲ್ಲವೇ ಸಾವಿಗೆ ಕಾರಣವಾಗುವಂತಹ ಇಲ್ಲವೇ ಆಸ್ತಿಪಾಸ್ತಿ ನಷ್ಟವಾಗುವಂತಹ ಯಾವುದೇ ವಸ್ತು ಅಥವಾ ಆಯುಧವನ್ನು ಹೊಂದಿದ್ದರೆ ಆತನಿಗೆ ಐದು ವರ್ಷಗಳವರೆಗೆ ಜೈಲಿಗೆ ಕಳಿಸಿ ಜುಲ್ಮಾನೆ ವಿಧಿಸಬಹುದು. ಒಂದು ವೇಳೆ ಸದರಿ ವ್ಯಕ್ತಿ ಮಾಡಿದ ಕೃತ್ಯದ ಫಲವಾಗಿ ಯಾರಾದರೂ ಸತ್ತರೆ ಅಂತಹ ವ್ಯಕ್ತಿಗೆ ಜೀವಾವಧಿ ಶಿಕ್ಷೆ ವಿಧಿಸಿ ಜುಲ್ಮಾನೆಯನ್ನು ಹಾಕಬಹುದು.

ನಿಷೇದಾಜ್ಞೆಯನ್ನು ಜಾರಿ ಮಾಡಿರುವಂತಹ ಯಾವುದೇ ವ್ಯಕ್ತಿಯು ಯಾವುದೇ ರೂಪದಲ್ಲಿ ನಿಷೇದಾಜ್ಞೆ ಉಲ್ಲಂಘಿಸಿ ಹಣ/ಚರಾಸ್ತಿಯನ್ನು ಯಾರೊಬ್ಬರಿಗಾದರೂ ಹಸ್ತಾಂತರಿಸಿದರೆ ಅಂತಹ ವ್ಯಕ್ತಿಗೆ ಮೂರು ವರ್ಷಗಳ ವರೆಗೆ ಜೈಲು ಶಿಕ್ಷೆ ವಿಧಿಸಿ ಜುಲ್ಮಾನೆಯನ್ನು ಹಾಕಬಹುದು. ಇದಲ್ಲದೇ ಆ ವ್ಯಕ್ತಿ ಹಸ್ತಾಂತರಿಸಿದಂತಹ ಆಸ್ತಿಯ ಮೌಲ್ಯದಷ್ಟು ಹಣವನ್ನು ಹೆಚ್ಚುವರಿ ಜುಲ್ಮಾನೆಯಾಗಿ ವಿಧಿಸಬಹುದು.

ಕಾನೂನು ವಿರೋಧೀ ಕೃತ್ಯಕ್ಕೆ ಬಳಸಲಾಗುತ್ತಿದೆ ಎಂದು ಸರ್ಕಾರವು ಅಧಿಸೂಚಿಸಿರುವ ಜಾಗದ ಬಗ್ಗೆ ಯಾವನಾದರೂ ವ್ಯಕ್ತಿಯು ಆದೇಶವನ್ನು ಉಲ್ಲಂಘಿಸಿದರೆ ಅವನಿಗೆ ಒಂದು ವರ್ಷದ ವರೆಗೆ ಜೈಲುವಾಸ ವಿಧಿಸಿ ಜುಲ್ಮಾನೆಯನ್ನೂ ವಿಧಿಸಬಹುದು.

ಕಾನೂನು ವಿರೋಧೀ ಕೃತ್ಯಕ್ಕೆ ಬಳಸಲಾಗುತ್ತಿದೆ ಎಂದು ಒಂದು ಜಾಗವನ್ನು ನಿರ್ದಿಷ್ಟ ಪಡಿಸಿದ ನಂತರ ಸರ್ಕಾರವು ಆ ಜಾಗಕ್ಕೆ ಜನರು ಬಂದು ಹೋಗುವುದನ್ನು ನಿರ್ಬಂಧಿಸುವ

ಅಧಿಕಾರವನ್ನು ಹೊಂದುತ್ತದೆ. ಯಾವನಾದರೂ ವ್ಯಕ್ತಿ ಜಾಗದ ಪ್ರವೇಶದ ಬಗ್ಗೆ ಇರುವ ನಿರ್ಬಂಧವನ್ನು ಧಿಕ್ಕರಿಸಿ ಆ ಜಾಗದೊಳಗೆ ಪ್ರವೇಶ ಮಾಡಿದರೆ ಇಲ್ಲವೇ ಮಾಡಲು ಯತ್ನಿಸಿದರೆ ಅಂತಹ ವ್ಯಕ್ತಿಗೆ ಕಾನೂನು ವಿರೋಧಿ ಚಟುವಟಿಕೆಗಳ ಕಾಯ್ದೆಯ ಕಲಂ 12ರ ಅನ್ವಯ ಒಂದು ವರ್ಷದ ವರೆಗೆ ಜೈಲುವಾಸ ವಿಧಿಸಬಹುದು.

ಈ ಕಾಯ್ದೆಯ ಕಲಂ 13 ರ ಅನ್ವಯ ಯಾವನಾದರೂ ವ್ಯಕ್ತಿಯು ಯಾವುದೇ ಬಗೆಯ ಕಾನೂನು ವಿರೋಧೀ ಚಟುವಟಿಕೆಯಲ್ಲಿ ಭಾಗವಹಿಸಿದರೆ ಇಲ್ಲವೇ ಚಟುವಟಿಕೆಗೆ ಪ್ರಚೋದಿಸಿದರೆ, ಸಹಕರಿಸಿದರೆ, ಸಲಹೆ-ಸೂಚನೆ ನೀಡಿದರೆ ಅಥವಾ ಕಾನೂನು ವಿರೋಧೀ ಚಟುವಟಿಕೆಯನ್ನು ಪ್ರತಿಪಾದಿಸಿದರೆ ಅಂತಹವನಿಗೆ ಏಳು ವರ್ಷಗಳ ವರೆಗೆ ಜೈಲು ಶಿಕ್ಷೆ ನೀಡಿ ಜುಲ್ಮಾನೆಯನ್ನೂ ವಿಧಿಸಬಹುದಾಗಿದೆ.

ಒಂದು ಸಂಘದ ಚಟುವಟಿಕೆಗಳನ್ನು ಕಾನೂನು ಬಾಹಿರ ಎಂದು ಸರ್ಕಾರ ಘೋಷಿಸಿದ ನಂತರವೂ ಯಾವನೇ ವ್ಯಕ್ತಿ ಆ ಸಂಘಕ್ಕೆ ಯಾವುದೇ ರೀತಿಯಲ್ಲಿ ಸಹಕಾರ ನೀಡಿದರೆ ಅಂತಹ ವ್ಯಕ್ತಿಗೆ ಐದು ವರ್ಷಗಳ ಕಾಲದ ಕಾರಾಗೃಹವಾಸ ಹಾಗೂ ಜುಲ್ಮಾನೆಯನ್ನು ವಿಧಿಸಬಹುದಾಗಿದೆ.

ಕಾನೂನು ವಿರೋಧೀ ಚಟುವಟಿಕೆ [ತಡೆ] ಕಾಯ್ದೆಯಲ್ಲಿ ನಮೂದಿಸಿರುವ ಎಲ್ಲಾ ಅಪರಾಧಗಳೂ ಸಂಜ್ಞೇಯ ಅಪರಾಧಗಳಾಗಿವೆ, ಅಂದರೆ ಆರೋಪಿಯನ್ನು ಪೊಲೀಸರು ವಾರಂಟ್ ಇಲ್ಲದೇ ಬಂಧಿಸಬಹುದಾಗಿದೆ.

**ಭಯೋತ್ಪಾದಕ ಚಟುವಟಿಕೆ :**

ಯಾವನೇ ವ್ಯಕ್ತಿಯು ಭಾರತದ ಐಕ್ಯತೆ, ಸಾರ್ವಭೌಮತೆ, ಭದ್ರತೆ ಹಾಗೂ ಅಖಂಡತೆಗೆ ಬೆದರಿಕೆ ಒಡ್ಡುವ ಭಾರತದ ಅಥವಾ ಬೇರಾವುದೇ ದೇಶದಲ್ಲಿ ವಾಸಿಸುತ್ತಿರುವ ಜನರ ಮನದಲ್ಲಿ ಭಯ ಮೂಡಿಸುವ ಉದ್ದೇಶದಿಂದ ಬಾಂಬ್‌ಗಳನ್ನಾಗಲೀ ಅಥವಾ ಬೇರಿತರ ಸ್ಫೋಟಕ ವಸ್ತುಗಳನ್ನಾಗಲೀ, ಬೆಂಕಿ ಹತ್ತಿಸುವ ವಸ್ತುಗಳನ್ನಾಗಲೀ, ವಿಷಾನಿಲ ಅಥವಾ ವಿಷ ರಾಸಾಯನಿಕಗಳನ್ನಾಗಲೀ ಇಲ್ಲವೇ ಬೇರಾವುದೇ ರೀತಿಯ ವಸ್ತುವನ್ನು ಪ್ರಯೋಗಿಸಿ, ತತ್ಪರಿಣಾಮವಾಗಿ ಯಾವನೇ ವ್ಯಕ್ತಿಯ ಅಥವಾ ವ್ಯಕ್ತಿಗಳಿಗೆ ಸಾವು ನೋವು ಉಂಟು ಮಾಡುವ ಇಲ್ಲವೇ ಆಸ್ತಿಪಾಸ್ತಿಗೆ ನಷ್ಟವನ್ನುಂಟು ಮಾಡುವ ಇಲ್ಲವೇ ಯಾವುದಾದರೂ ಅವಶ್ಯಕ ಹಾಗೂ ತುರ್ತು ಸೇವೆಗಳಿಗೆ ಹಾನಿ ಮಾಡುವ ಕೃತ್ಯ ಮಾಡಿದರೆ ಇಲ್ಲವೇ ಭಾರತದ ರಕ್ಷಣಾ ಪಡೆಗಳಿಗೆ ಸೇರಿದ ಆಸ್ತಿಪಾಸ್ತಿಗಳಿಗೆ ಹಾನಿ ಮಾಡುವ ಕೃತ್ಯ ನಡೆಸಿದರೆ ಅಥವಾ ಕೇಂದ್ರ ಇಲ್ಲವೇ ರಾಜ್ಯ ಸರ್ಕಾರಕ್ಕೆ ಸೇರಿದ ಆಸ್ತಿಗೆ ಹಾನಿ ಮಾಡುವ ಕೃತ್ಯ ಎಸಗಿದರೆ ಅಥವಾ ಯಾವನೇ ವ್ಯಕ್ತಿಯನ್ನು ಬಂಧನಕ್ಕೊಳಪಡಿಸಿ ಆ ವ್ಯಕ್ತಿಯ ಬಿಡುಗಡೆಗಾಗಿ ಭಾರತ ಸರ್ಕಾರ ಅಥವಾ ಇನ್ನಾವುದೇ ರಾಜ್ಯ ಸರ್ಕಾರಕ್ಕೆ ಒಂದು ಕೃತ್ಯ ಮಾಡಲು ಅಥವಾ ಮಾಡದಿರಲು ಬ್ಲಾಕ್‌ಮೇಲ್ ಮಾಡಿದರೆ ಅಂತಹ ವ್ಯಕ್ತಿಯು ಭಯೋತ್ಪಾದಕ ಚಟುವಟಿಕೆ ನಡೆಸಿದ್ದಾನೆ

ಎಂದು ತಿಳಿಯಬಹುದು. [ಉದಾಹರಣೆ: ಮುಫ್ತಿ ಮಹಮದ್ ಸಯೀದ್ ಮಗಳು ರುಬಿಯ್ಯಾಳ ಅಪಹರಣ 8.12.89]

ಕಾನೂನು ವಿರೋಧೀ ಕೃತ್ಯಗಳ ತಡೆ ಕಾಯ್ದೆಯ ಕಲಂ 16 ರ ಅನ್ವಯ ಯಾವನೇ ವ್ಯಕ್ತಿಯು ಭಯೋತ್ಪಾದಕ ಕೃತ್ಯವನ್ನು ನಡೆಸಿ, ಅಂತಹ ಕೃತ್ಯದ ಫಲವಾಗಿ ಯಾವುದಾದರೂ ವ್ಯಕ್ತಿಯ ಸಾವು ಸಂಭವಿಸಿದ್ದಲ್ಲಿ ಆ ವ್ಯಕ್ತಿಗೆ ಮರಣದಂಡನೆ ಇಲ್ಲವೇ ಜೀವಾವಧಿ ಶಿಕ್ಷೆ ವಿಧಿಸಿ ಜುಲ್ಮಾನೆಯನ್ನು ವಿಧಿಸಬಹುದು. ಸಾವು ಸಂಭವಿಸದಿದ್ದರೆ ಆ ವ್ಯಕ್ತಿಗೆ 5 ವರ್ಷಗಳಿಗೆ ಕಡಿಮೆ ಇಲ್ಲದಂತೆ ಜೀವಾವಧೀ ಕಾರಾಗೃಹವಾಸದವರೆಗೆ ಶಿಕ್ಷೆ ವಿಧಿಸಿ ಜುಲ್ಮಾನೆಯನ್ನು ಹಾಕಬಹುದು.

ಯಾವನೇ ವ್ಯಕ್ತಿಯು ಭಯೋತ್ಪಾದಕ ಕೃತ್ಯ ನಡೆಸುವ ಉದ್ದೇಶದಿಂದ ಹಣ ಸಂಗ್ರಹ ಮಾಡಿದರೆ ಆತನಿಗೆ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಜೀವಾವಧಿ ಕಾರಾಗೃಹ ವಾಸದ ವರೆಗೆ ಶಿಕ್ಷೆ ನೀಡಿ ಜುಲ್ಮಾನೆಯನ್ನು ಹಾಕಬಹುದು [ಕಲಂ 17]

ಯಾವನೇ ವ್ಯಕ್ತಿಯು ಭಯೋತ್ಪಾದಕ ಕೃತ್ಯ ನಡೆಯಲು ಇಲ್ಲವೇ ಅಂತಹ ಕೃತ್ಯಕ್ಕೆ ಪೂರಕವಾಗುವಂತಹ ಕೃತ್ಯ ನಡೆಯಲು ಅನುಕೂಲವಾಗುವಂತೆ ಒಳಸಂಚು ನಡೆಸಿದರೆ, ಇಲ್ಲವೇ ಆ ಕೃತ್ಯ ನಡೆಯಲು ಪ್ರಚೋದಿಸಿದರೆ, ಸಲಹೆ ನೀಡಿದರೆ, ಇಲ್ಲವೇ ಯಾವುದೇ ಬಗೆಯ ಸಹಕಾರ ನೀಡಿದರೆ ಅಂತಹ ವ್ಯಕ್ತಿಗೆ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಜೀವಾವಧೀ ಕಾರಾಗೃಹವಾಸದ ವರೆಗೆ ಶಿಕ್ಷೆ ನೀಡಿ ಜುಲ್ಮಾನೆಯನ್ನು ವಿಧಿಸಬಹುದು [ಕಲಂ 18]

ಯಾವನೇ ವ್ಯಕ್ತಿಯು ಬುದ್ಧಿಪೂರ್ವಕವಾಗಿ "ಆತಂಕವಾದಿ" ಎಂದು ತಾನು ತಿಳಿದಿರುವ ವ್ಯಕ್ತಿ ಅಡಗಿಕೊಳ್ಳಲು ಸಹಕರಿಸಿದರೆ ಇಲ್ಲವೇ ಅವನನ್ನು ಅಡಗಿಸಿದರೆ ಇಲ್ಲವೇ ರಕ್ಷಣೆ ನೀಡಿದರೆ ಅಂತಹ ವ್ಯಕ್ತಿಗೆ ಮೂರು ವರ್ಷಗಳಿಗೆ ಕಡಿಮೆ ಇಲ್ಲದಂತೆ ಜೀವಾವಧಿ ಕಾರಾಗೃಹವಾಸದವರೆಗೂ ಶಿಕ್ಷೆ ನೀಡಿ ಜುಲ್ಮಾನೆಯನ್ನೂ ವಿಧಿಸಬಹುದು. ಒಂದು ವೇಳೆ ಈ ರಕ್ಷಣೆ ನೀಡಿದ ವ್ಯಕ್ತಿ ಆತಂಕವಾದಿಯ ಗಂಡ/ಹೆಂಡತಿ ಆದರೆ ಈ ಕಲಂ ಅನ್ವಯವಾಗುವುದಿಲ್ಲ [ಕಲಂ 19]

ಈ ಕಾಯ್ದೆಯ ಕಲಂ 20ರ ಅನ್ವಯ ಯಾವನೇ ವ್ಯಕ್ತಿಯು ಭಯೋತ್ಪಾದಕ ಗುಂಪು ಅಥವಾ ಭಯೋತ್ಪಾದಕ ಸಂಘಟನೆಯ ಸದಸ್ಯನಾಗಿದ್ದು ಸದರಿ ಸಂಘಟನೆ ಭಯೋತ್ಪಾದಕ ಚಟುವಟಿಕೆಯಲ್ಲಿ ತೊಡಗಿದ್ದರೆ ಅಂತಹ ವ್ಯಕ್ತಿಗೆ ಜೀವಾವಧಿ ಶಿಕ್ಷೆ ಹಾಗೂ ಜುಲ್ಮಾನೆಯನ್ನು ವಿಧಿಸಬಹುದು.

ಯಾವನೇ ವ್ಯಕ್ತಿಯು ಭಯೋತ್ಪಾದಕ ಚಟುವಟಿಕೆಯಿಂದ ಲಭ್ಯವಾದ ಇಲ್ಲವೇ ಭಯೋತ್ಪಾದಕ ಸಂಘಟನೆಯ ಹಣದಿಂದ ಲಭ್ಯವಾದ ಯಾವುದೇ ಆಸ್ತಿಯನ್ನು ಬುದ್ಧಿಪೂರ್ವಕವಾಗಿ ಹೊಂದಿದ್ದಲ್ಲಿ ಅಂತಹ ವ್ಯಕ್ತಿಗೆ ಜೀವಾವಧಿ ಶಿಕ್ಷೆ ಹಾಗೂ ಜುಲ್ಮಾನೆಯನ್ನು ವಿಧಿಸಬಹುದಾಗಿದೆ. [ಕಲಂ 21]

ಯಾವನೇ ವ್ಯಕ್ತಿಯು ಪ್ರಕರಣವೊಂದರ ಸಾಕ್ಷಿಗೆ ಪ್ರತ್ಯಕ್ಷವಾಗಿ ಇಲ್ಲವೇ ಪರೋಕ್ಷವಾಗಿ ಹಿಂಸಾರೂಪದ ಬೆದರಿಕೆ ಒಡ್ಡಿದರೆ, ಇಲ್ಲವೇ ಆತನನ್ನಾಗಲೀ ಅಥವಾ ಆತ ಆಸಕ್ತಿ ಹೊಂದಿರುವ

ಇನ್ನೊಬ್ಬ ವ್ಯಕ್ತಿಗಾಗಲೀ ಅಕ್ರಮ ಬಂಧನ ಇಲ್ಲವೇ ಅಕ್ರಮ ತಡೆ ಒಡ್ಡಿದರೆ ಅಥವಾ ಇನ್ನಾವುದೇ ರೀತಿಯ ಕಾನೂನು ವಿರೋಧೀ ಕೃತ್ಯ ನಡೆಸಿದರೆ ಅಂತಹವನಿಗೆ ಮೂರು ವರ್ಷಗಳವರೆಗೆ ಜೈಲು ಶಿಕ್ಷೆ ವಿಧಿಸಿ ಜುಲ್ಮಾನೆ ಕೂಡಾ ಹಾಕಬಹುದು (ಕಲಂ 22).

# 10

## ಆತಂಕವಾದೀ ಸಂಘಟನೆಗಳ ಮೇಲೆ ನಿಗಾ

ಆತಂಕವಾದಿಯೊಬ್ಬನಿಗೆ ಸಹಕರಿಸುವ ಉದ್ದೇಶದಿಂದ ಯಾವನಾದರೊಬ್ಬ ವ್ಯಕ್ತಿ ಸ್ಫೋಟಕವಸ್ತುಗಳ ಕಾಯ್ದೆ, ಬೆಂಕಿ ಉಂಟುಮಾಡುವ ವಸ್ತುಗಳ ಕಾಯ್ದೆ, ಆಯುಧಗಳ ಕಾಯ್ದೆ, ಇತ್ಯಾದಿಗಳನ್ನು ಉಲ್ಲಂಘಿಸುತ್ತಾನೋ ಇಲ್ಲವೇ ತನ್ನ ವಶದಲ್ಲಿ ಭಾರೀ ಸಂಖ್ಯೆಯಲ್ಲಿ ಜನರ ಸಾವನ್ನುಂಟುಮಾಡಬಹುದಾದಂತಹ ಬಾಂಬ್, ಸ್ಫೋಟಕ ವಸ್ತುಗಳು, ಆಯುಧಗಳು, ವಿಷಾನಿಲಗಳು, ರಾಸಾಯನಿಕಗಳು ಇತ್ಯಾದಿಗಳನ್ನು ಇಟ್ಟುಕೊಂಡಿದ್ದರೆ ಅಂತಹ ವ್ಯಕ್ತಿಗೆ ಮೇಲ್ಕಾಣಿಸಿದ ಕಾಯ್ದೆಗಳಲ್ಲಿ ಏನನ್ನೇ ಹೇಳಿದ್ದರೂ ಕಾನೂನು ವಿರೋಧೀ ಚಟುವಟಿಕೆ[ತಡೆ] ಕಾಯ್ದೆಯನ್ವಯ 5 ವರ್ಷಗಳಿಗೆ ಕಡಿಮೆ ಇಲ್ಲದಂತೆ ಜೀವಾವಧಿ ಕಾರಾಗೃಹವಾಸದ ವರೆಗೆ ಶಿಕ್ಷೆ ನೀಡಿ ಜುಲ್ಮಾನೆಯನ್ನು ಹಾಕಬಹುದು [ಕಲಂ 23]

ಕಾನೂನು ವಿರೋಧಿ ಚಟುವಟಿಕೆಗಳ ಕಾಯ್ದೆಯ ಕಲಂ 24ರ ಅನ್ವಯ ಯಾವ ವ್ಯಕ್ತಿಯೂ ಭಯೋತ್ಪಾದಕ ಚಟುವಟಿಕೆಯಿಂದ ಲಭಿಸಿದ ಫಲವನ್ನು ಹೊಂದುವಂತಿಲ್ಲ. ಆತಂಕವಾದಿಯಾಗಲೀ, ಬೇರಾವುದೇ ವ್ಯಕ್ತಿಯೇ ಆಗಲಿ ಭಯೋತ್ಪಾದಕ ಚಟುವಟಿಕೆಯಿಂದ ಲಭಿಸಿದ ಆಸ್ತಿಯನ್ನು ಹೊಂದಿದ್ದರೆ ಸರ್ಕಾರವು ಆ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳಬಹುದು.

ಈ ಕಾಯ್ದೆಯ ಅಡಿಯಲ್ಲಿ ದಾಖಲಾದಂತಹ ಅಪರಾಧದ ತನಿಖೆ ನಡೆಸುತ್ತಿರುವ ಅಧಿಕಾರಿಯು ತನಿಖೆಯ ಸಂಬಂಧದಲ್ಲಿ ಯಾವುದಾದರೊಂದು ಆಸ್ತಿಯನ್ನು ಭಯೋತ್ಪಾದಕ

ಕೃತ್ಯದ ಫಲ ಎಂದು ಮನಗಂಡರೆ ಆತನು ತನ್ನ ಡಿ.ಜಿ.ಪಿ.ಯ ಪೂರ್ವಾನುಮತಿಯ ಮೇರೆಗೆ ಸದರಿ ಆಸ್ತಿಯನ್ನು ಜಪ್ತು ಮಾಡಬಹುದು. 48 ಗಂಟೆಗಳ ಒಳಗಡೆ ಈ ಜಪ್ತಿಯ ಬಗ್ಗೆ ನಾಮಾಂಕಿತ ಅಧಿಕಾರಿಗೆ ವರದಿ ಸಲ್ಲಿಸಬೇಕು. ನಾಮಾಂಕಿತ ಅಧಿಕಾರಿಯು ಜಪ್ತಿಯನ್ನು ದೃಢೀಕರಿಸಬೇಕು ಇಲ್ಲವೇ ತಿರಸ್ಕರಿಸಬೇಕು. ಇದನ್ನು ಮಾಡುವ ಮೊದಲು ಆರೋಪಿಗೆ ಈ ಆಸ್ತಿಯ ಬಗ್ಗೆ ವಿವರಣೆ ನೀಡಲು ಅವಕಾಶ ನೀಡಬೇಕು. ನಾಮಾಂಕಿತ ಅಧಿಕಾರಿಯ ಆದೇಶದಿಂದ ಅತೃಪ್ತಿ ಹೊಂದಿದ ವ್ಯಕ್ತಿ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಬಹುದು. ನ್ಯಾಯಾಲಯವು ಜಪ್ತಿಯು ಸರಿಯಾಗಿದೆಯೋ ಇಲ್ಲವೋ ಎನ್ನುವ ತೀರ್ಪನ್ನು ನೀಡಬೇಕಾಗುತ್ತದೆ. ಒಂದು ವೇಳೆ ಜಪ್ತಿ ಸರಿಯಲ್ಲ ಎಂದು ತೀರ್ಪಿತ್ತರೆ ಜಪ್ತಾದ ಆಸ್ತಿಯನ್ನು ಯಾರಿಂದ ಜಪ್ತು ಮಾಡಲ್ಪಟ್ಟಿದೆಯೋ ಅವನಿಗೆ ವಾಪಸ್ ಮಾಡಬೇಕು.

ಕೇಂದ್ರ ಸರ್ಕಾರವು ಯಾವುದೇ ಸಂಘ/ಸಂಘಟನೆಯನ್ನು ಆತಂಕವಾದೀ ಸಂಘಟನೆ ಎಂದು ಘೋಷಿಸಬಹುದು. ಯಾವುದಾದರೊಂದು ಸಂಘಟನೆ ಆತಂಕವಾದೀ ಚಟುವಟಿಕೆಗಳಲ್ಲಿ ತೊಡಗಿದ್ದರೆ, ಭಯೋತ್ಪಾದಕ ಕೃತ್ಯ ನಡೆಸಿದರೆ, ಭಯೋತ್ಪಾದಕ ಕೃತ್ಯಕ್ಕೆ ಪ್ರೋತ್ಸಾಹ ನೀಡಿದರೆ, ಇಲ್ಲವೇ ಯಾವುದೇ ರೀತಿಯಲ್ಲಿ ಭಯೋತ್ಪಾದಕ ಕೃತ್ಯಕ್ಕೆ ಸಂಬಂಧ ಪಟ್ಟಿದ್ದರೆ ಅಂತಹ ಸಂಘಟನೆಯನ್ನು ಆತಂಕವಾದಿ ಎಂದು ಘೋಷಿಸಿ ಈ ಕಾಯ್ದೆಯ ಅನುಬಂಧ-II ರಲ್ಲಿ ಸೇರಿಸಬಹುದು. ಈ ಅನುಬಂಧಕ್ಕೆ ಹೊಸ ಸಂಘಗಳನ್ನು ಸೇರಿಸುವ ಹಾಗೂ ಇರುವ ಹೆಸರುಗಳನ್ನು ತೆಗೆಯುವ ಅಧಿಕಾರ ಸರ್ಕಾರಕ್ಕೆ ಇದೆ.

ಸದ್ಯಕ್ಕೆ [1.4.2007 ರಂತೆ] ಕೆಳಕಂಡ 34 ಸಂಘಟನೆಗಳನ್ನು ಕೇಂದ್ರ ಸರ್ಕಾರ ಭಯೋತ್ಪಾದಕ ಸಂಘಟನೆಗಳೆಂದು ಘೋಷಿಸಿದೆ.

ಯುನೈಟೆಡ್ ಲಿಬರೇಷನ್ ಫ್ರಂಟ್ ಆಫ್ ಅಸ್ಸಾಂ [ಯುಎಲ್‌ಎಫ್‌ಎ] ನ್ಯಾಷನಲ್ ಡೆಮಾಕ್ರಟಿಕ್ ಫ್ರಂಟ್ ಆಫ್ ಬೋಡೋಲ್ಯಾಂಡ್ [ಎನ್‌ಡಿಎಫ್‌ಬಿ] ಪೀಪಲ್ಸ್ ಲಿಬರೇಷನ್ ಆರ್ಮಿ [ಪಿಎಲ್‌ಎ] ಯುನೈಟೆಡ್ ನ್ಯಾಷನಲ್ ಲಿಬರೇಷನ್ ಫ್ರಂಟ್ [ಯುಎನ್‌ಎಲ್‌ಎಫ್ ಪೀಪಲ್ಸ್ ರೆವೊಲ್ಯೂಷನರಿ ಪಾರ್ಟಿ ಆಫ್ ಕಾಂಗ್ಲೈಪಾಕ್ [ಪಿಆರ್‌ಇಪಿಎಕೆ] ಕಾಂಗ್ಲೇಪಾಕ್ ಕಮ್ಯೂನಿಸ್ಟ್ ಪಾರ್ಟಿ [ಕೆಸಿಪಿ] ಕಾಂಗ್ಲೇ ಯಾವೋಲ್ ಕಾನ್ಬಾ ಲೂಪ್ [ಕೆವೈಕೆಎಲ್] ಮಣಿಪುರ್ ಪೀಪಲ್ಸ್ ಲಿಬರೇಷನ್ ಫ್ರಂಟ್ [ಎಂಪಿಎಲ್‌ಎಫ್] ಮಣಿಪುರದಲ್ಲಿರುವ ರೆವೊಲ್ಯೂಷನರಿ ಪೀಪಲ್ಸ್ ಫ್ರಂಟ್ [ಆರ್‌ಪಿಎಫ್] ಆಲ್ ತ್ರಿಪುರ ಟೈಗರ್ ಫೋರ್ಸ್ [ಎಟಿಟಿಎಫ್] ನ್ಯಾಷನಲ್ ಲಿಬರೇಷನ್ ಫ್ರಂಟ್ ಆಫ್ ತ್ರಿಪುರ [ಎನ್‌ಎಲ್‌ಎಫ್‌ಟಿ] ಹೈನ್ಯೂ ಟ್ರೆಪ್ ನ್ಯಾಷನಲ್ ಲಿಬರೇಷನ್ ಕೌಂಸಿಲ್ [ಹೆಚ್‌ಎನ್‌ಎಲ್‌ಸಿ] ಮೇಘಾಲಯದಲ್ಲಿರುವ ಅಚಿಕ್ ನ್ಯಾಷನಲ್ ವಾಲೆಂಟಿಯರ್ ಕೌಂಸಿಲ್ [ಎಎನ್‌ವಿಸಿ] ಬಬ್ಬರ್ ಖಲ್ಸಾ ಇಂಟರ್‌ನ್ಯಾಷನಲ್ ಖಾಲೀಸ್ತಾನ್ ಕಮಾಂಡೋ ಫೋರ್ಸ್ ಇಂಟರ್ ನ್ಯಾಷನಲ್ ಸಿಖ್ ಯೂತ್ ಫೆಡರೇಷನ್, ಲಷ್ಕರೇ ತೋಯ್ಬಾ - ಪಸ್ಬಾನ್-ಎ-ಅಹಲೇ-ಹಾಡಿಸ್ ಜೈಷ್-ಎ-ಮೊಹಮ್ಮದ್/ತಹರಿಕ್-ಎ-ಫರ್ಕ್ವಾನ್ ಹರ್ಕತ್ ಉಲ್ ಮುಜಾಹಿದ್ದೀನ್/ ಹರ್ಕಾರ್ ಉಲ್ ಅನ್ಸಾರ್/ಹರ್ಕತ್ ಉಲ್ ಜೇಹಾದೇ ಇಸ್ಲಾಮಿ

ಹಿಸ್ಬ್ ಉಲ್ ಮುಜಾಹಿದ್ದೀನ್/ಹಿಸ್ಬ್ ಉಲ್ ಮುಜಾಯಿದ್ದೀನ್ ಪೀರ್ ಪಂಜಾಲ್ ರೆಜಿಮೆಂಟ್ ಅಲ್ ಉಮರ್ ಮುಜಾಹಿದ್ದೀನ್ ಜಮ್ಮೂ ಅಂಡ್ ಕಾಶ್ಮೀರ್ ಮುಜಾಯಿದ್ದೀನ್ ಫ್ರಂಟ್. ಲಿಬರೇಷನ್ ಟೈಗರ್ಸ್ ಆಫ್ ತಮಿಳ್ ಈಳಂ (ಎಲ್‌ಟಿಟಿಇ). ಸ್ಟೂಡೆಂಟ್ಸ್ ಇಸ್ಲಾಮಿಕ್. ಮೂವ್‌ಮೆಂಟ್ ಆಫ್ ಇಂಡಿಯಾ[ಸಿಮಿ]. ದೀನ್‌ದಾರ ಅಂಜುಮನ್. ಕಮ್ಯೂನಿಸ್ಟ್ ಪಾರ್ಟಿ ಆಫ್ ಇಂಡಿಯಾ (ಮಾರ್ಕ್ಸಿಸ್ಟ್ -ಲೆನಿನಿಸ್ಟ್-ಪೀಪಲ್ಸ್ ವಾರ್ ಹಾಗೂ ಅದರ ಎಲ್ಲಾ ಮುಂಚೂಣೀ ಸಂಘಟನೆಗಳು ಮಾವೋಇಸ್ಟ್ ಕಮ್ಯೂನಿಸ್ಟ್ ಸೆಂಟರ್ (ಎಂಸಿಸಿ). ಹಾಗೂ ಅದರ ಎಲ್ಲಾ ಮುಂಚೂಣೀ ಸಂಘಟನೆಗಳು ಅಲ್ ಬದರ್ ಜಮಾತ್ ಉಲ್ ಮುಜಾಹಿದೀನ್ ಅಲ್ ಕೈದಾ ದುಖಾತರಾನ್-ಎ-ಮಿಲತ್ (ಡಿ.ಇ.ಎಂ). ತಮಿಳುನಾಡು ಲಿಬರೇಷನ್ ಆರ್ಮಿ (ಟಿಎನ್‌ಎಲ್‌ಎ) ತಮಿಳು ನಾಡು ರಿಟ್ರವಲ್ ಟ್ರೂಪ್ಸ್ (ಟಿ.ಎನ್.ಆರ್.ಟಿ) ಅಖಿಲ್ ಭಾರತ್ ನೇಪಾಲಿ ಏಕ್ತಾ ಸಮಾಜ್ (ಎ.ಬಿ.ಎನ್.ಇ.ಎಸ್).

ಯಾವುದಾದರೊಂದು ಸಂಘಟನೆ ಈ ಪಟ್ಟಿಯಿಂದ ತನ್ನ ಹೆಸರನ್ನು ಕೈಬಿಡುವಂತೆ ಕೇಂದ್ರ ಸರ್ಕಾರಕ್ಕೆ ಅರ್ಜಿ ಸಲ್ಲಿಸಬಹುದು. ಕೇಂದ್ರ ಸರ್ಕಾರ ನೇಮಿಸಿದ ತ್ರಿಸದಸ್ಯ ಸಮಿತಿಯೊಂದು ಸದರಿ ಅರ್ಜಿಯನ್ನು ಪರಿಗಣಿಸಿ ಸೂಕ್ತ ತೀರ್ಮಾನ ತೆಗೆದುಕೊಳ್ಳಬಹುದು. ಸಮಿತಿಯ ತೀರ್ಮಾನದಿಂದಲೂ ಸಮಾಧಾನವಾಗದ ಸಂಘಟನೆ ನ್ಯಾಯಾಲಯದ ಮೊರೆ ಹೋಗಬಹುದಾಗಿದೆ.

ಒಂದು ವೇಳೆ ಭಯೋತ್ಪಾದನಾ ಸಂಘವೊಂದು ಬೇರೆ ಹೆಸರಿಟ್ಟುಕೊಂಡರೆ ಇಲ್ಲವೇ ಒಡೆದು ಹೋದರೆ. ಆ ಸಂಘಟನೆಯ ಸದಸ್ಯರು ಒಂದಾಗಿ ಇರುವವರೆಗೆ ಸಂಘವು ಮುಂದುವರೆದಿದೆ ಎಂದೇ ಭಾವಿಸಲಾಗುವುದು. ಉದಾಹರಣೆಗೆ ಅನುಬಂಧ ಎರಡರಲ್ಲಿ ಎಂ.ಸಿ.ಸಿ.ಐ ಹಾಗೂ ಪಿ.ಡಬ್ಲ್ಯೂ.ಜಿ ಸಂಘಟನೆಗಳನ್ನು ಗುರುತಿಸಲಾಗಿದೆ. ಸದ್ಯ ಈ ಎರಡೂ ಸಂಘಟನೆಗಳು ಒಟ್ಟಾಗಿ ಸಿ.ಪಿ.ಐ (ಮಾವೋ) ಎಂಬ ಹೊಸ ಸಂಘಟನೆಯನ್ನು ಹುಟ್ಟುಹಾಕಿವೆ. ಸಿಪಿಐ (ಮಾವೋ) ಎಂಬ ಹೆಸರು ಈ ಪಟ್ಟಿಯಲ್ಲಿ ಇಲ್ಲದಿದ್ದರೂ ಈ ಸಂಘಟನೆಯನ್ನು ಭಯೋತ್ಪಾದಕ ಸಂಘಟನೆ ಎಂದೇ ಪರಿಗಣಿಸಲಾಗುತ್ತಿದೆ. ಈ ಕಾಯ್ದೆಗೆ ಸಂಬಂಧ ಪಟ್ಟಂತಹ ಯಾವುದೇ ಅಪರಾಧದ ತನಿಖೆಯನ್ನು ಡೆಪ್ಯೂಟಿ ಸೂಪರಿಂಟೆಂಡೆಂಟ್ ಹುದ್ದೆಗಿಂತ ಕಡಿಮೆ ಇರುವ ಪೊಲೀಸ್ ಅಧಿಕಾರಿ ಮಾಡಲು ಬರುವುದಿಲ್ಲ.

ಈ ಕಾಯ್ದೆಯಡಿಯಲ್ಲಿ ದಾಖಲಾದ ಅಪರಾಧದ ವಿಚಾರಣೆ ನ್ಯಾಯಾಲಯದಲ್ಲಿ ನಡೆಯುವಂತಹ ಸಂದರ್ಭದಲ್ಲಿ ಯಾವನೇ/ಳೇ ಸಾಕ್ಷಿಯು ತನಗೆ ಜೀವಭಯ ಇದೆ ಎಂದು ನ್ಯಾಯಾಲಯಕ್ಕೆ ಮನವರಿಕೆ ಮಾಡಿಕೊಟ್ಟರೆ ನ್ಯಾಯಾಲಯವು ಆ ಸಾಕ್ಷಿಯ ರಕ್ಷಣೆಗೆ ಸೂಕ್ತ ಕ್ರಮಗಳನ್ನು ಕೈಗೊಳ್ಳತಕ್ಕದ್ದು. ನ್ಯಾಯಾಲಯವು ಕೆಳಕಂಡ ಕ್ರಮಗಳನ್ನು ಅನುಸರಿಸಬಹುದಾಗಿದೆ. [1] ವಿಚಾರಣೆಯನ್ನು ಗುಪ್ತ ಸ್ಥಳದಲ್ಲಿ ನಡೆಸಬಹುದು [2] ಸಾಕ್ಷಿಯ ಹೆಸರು ವಿಳಾಸ ಇತ್ಯಾದಿಯನ್ನು ಸಾರ್ವಜನಿಕರಿಗೆ ದೊರೆಯುವಂತಹ ಯಾವುದೇ ದಾಖಲೆಯಲ್ಲಿ ಇಲ್ಲದಂತೆ ನೋಡಿಕೊಳ್ಳಬಹುದು [3] ಸಾಕ್ಷಿಯ ಗುರುತು ಸಾರ್ವಜನಿಕರಿಗೆ ತಿಳಿಯದಂತೆ

ಮಾಡಬೇಕಾದ ಕ್ರಮ ತೆಗೆದುಕೊಳ್ಳಬಹುದು ಹಾಗೂ [4] ತನ್ನ ಮುಂದೆ ನಡೆಯುತ್ತಿರುವ ವಿಚಾರಣೆಯನ್ನು ಯಾವುದೇ ರೀತಿಯಲ್ಲಿ ಪ್ರಕಟಗೊಳಿಸುವಂತಿಲ್ಲ ಎಂದು ಆದೇಶಿಸಬಹುದು.

ಈ ಕಾಯ್ದೆಗೆ ಸಂಬಂಧಿಸಿದ ಎಲ್ಲಾ ಅಪರಾಧಗಳ ಬಗ್ಗೆ ದೋಷಾರೂಪಣಾ ಪತ್ರ ಸಲ್ಲಿಸುವ ಮುನ್ನ ಕೇಂದ್ರ/ರಾಜ್ಯ ಸರ್ಕಾರದ ಪೂರ್ವಾನುಮತಿಯನ್ನು ತನಿಖಾಧಿಕಾರಿ ಪಡೆಯಲೇ ಬೇಕು.

ತನಿಖೆಯ ಸಂದರ್ಭದಲ್ಲಿ ತನಿಖಾದಿಕಾರಿಯು ಯಾವುದೇ ರೀತಿಯ ಫೋನ್ ಸಂಭಾಷಣೆ, ಮೊಬೈಲ್ ಮೂಲಕ ಸಂಭಾಷಣೆ, ಟೆಲಿಗ್ರಾಂ, ಈ ಮೇಲ್ ಮೂಲಕ ವ್ಯವಹಾರ ಇತ್ಯಾದಿಗಳನ್ನು ರೆಕಾರ್ಡ್ ಮಾಡಿಕೊಂಡು ಅಂತಹ ಸಾಕ್ಷ್ಯವನ್ನು ನ್ಯಾಯಾಲಯದ ಮುಂದೆ ಹಾಜರು ಮಾಡಿದಾಗ ಭಾರತೀಯ ಸಾಕ್ಷ್ಯ ಅಧಿನಿಯಮದಲ್ಲಿ ಏನೇ ಹೇಳಿದ್ದರೂ ನ್ಯಾಯಾಲಯವು ಈ ಸಾಕ್ಷ್ಯವನ್ನು ಪರಿಗಣಿಸಬೇಕಾಗುತ್ತದೆ [ಸಧ್ಯ ಈ ರೀತಿಯ ಸಾಕ್ಷ್ಯವನ್ನು ಬೇರೆ ತರಹದ ಪ್ರಕರಣಗಳಲ್ಲಿ ನ್ಯಾಯಾಲಯದಲ್ಲಿ ಪರಿಗಣಿಸಲಾಗುವುದಿಲ್ಲ]

ಈ ಕಾನೂನಿನನ್ವಯ ಅಧಿಕಾರವನ್ನು ಚಲಾಯಿಸುವ ಕೇಂದ್ರ ಸರ್ಕಾರದ ಯಾ ರಾಜ್ಯ ಸರ್ಕಾರದ ಯಾವುದೇ ಅಧಿಕಾರಿಯು ದುರುದ್ದೇಶವಿಲ್ಲದೆ ಮಾಡುವ ಕೃತ್ಯದ ವಿರುದ್ಧ ಯಾವುದೇ ರೀತಿಯ ಕ್ರಿಮಿನಲ್ ಕೇಸ್, ಸಿವಿಲ್ ಪ್ರಕರಣ ಇತ್ಯಾದಿ ಕಾನೂನು ಕ್ರಮವನ್ನು ಜರುಗಿಸುವಂತಿಲ್ಲ. ಈ ಕಾರಣದಿಂದ ತನಿಖಾಧಿಕಾರಿಯು ನಿರ್ಭಯದಿಂದ ತನ್ನ ಕಾರ್ಯ ನಿರ್ವಹಿಸಬಹುದು.

ಕಾನೂನು ವಿರೋಧಿ ಚಟುವಟಿಕೆಗಳ ಕಾಯ್ದೆಯ ಅನ್ವಯ ಯಾವುದೇ ವ್ಯಕ್ತಿಯನ್ನು ಆರೋಪಿಯನ್ನಾಗಿ ಮಾಡಿದಾಗ ಅಂತಹ ವ್ಯಕ್ತಿಯ ಪಾಸ್‌ಪೋರ್ಟ್ ಹಾಗೂ ಆಯುಧ ಹೊಂದುವ ಲೈಸನ್ಸ್ ಪ್ರಕರಣದ ವಿಚಾರಣೆ ಮುಗಿಯುವವರಿವಿಗೂ ತಂತಾನೇ ರದ್ದುಗೊಳ್ಳುತ್ತದೆ.

2004ರಲ್ಲಿ ಪರಿಷ್ಕೃತಗೊಂಡ ನಂತರ ಕಾನೂನು ವಿರೋಧಿ ಚಟುವಟಿಕೆಗಳ[ತಡೆ] ಕಾಯ್ದೆಗೆ ಹೆಚ್ಚಿನ ಬಲ ಬಂದಿರುತ್ತದೆ.

2009 ರಲ್ಲಿ ಸಿ.ಪಿ.ಐ (ಮಾವೋ) ಸಂಘಟನೆಯನ್ನು ಭಯೋತ್ಪಾದಕ ಸಂಘಟನೆ ಎಂದು ಕೇಂದ್ರ ಸರ್ಕಾರ ಘೋಷಿಸಿದೆ.

# 11

## ಸೈಬರ್ ವಾತಾವರಣ ಸ್ತ್ರೀಯರಿಗೆ ಅಪಾಯ

ಸುಮಾರು ಆರು ತಿಂಗಳ ಹಿಂದೆ ನನ್ನ ಕಚೇರಿಗೆ ದಂಪತಿಗಳಿಬ್ಬರು ಬಂದರು. ಅವರ ಮುಖದಲ್ಲಿ ಗಾಬರಿ ಇತ್ತು. ನಮಗೆ ಇರುವುದು ಒಬ್ಬಳೇ ಮಗಳು. 17 ವರ್ಷ. ಪಿಯುಸಿ ಓದುತ್ತಿದ್ದಾಳೆ. ಕಳೆದ ಎರಡು ದಿನಗಳಿಂದ ನನ್ನ ಮಗಳ ಮೊಬೈಲ್ ಫೋನ್‌ಗೆ ಹಾಗೂ ನಮ್ಮ ಮನೆಯ ಲ್ಯಾಂಡ್ ಲೈನ್‌ಗೆ ಹಲವಾರು ಅಶ್ಲೀಲ ಕರೆಗಳು ಬರುತ್ತಿವೆ. ಹೊತ್ತಲ್ಲದ ಹೊತ್ತಿನಲ್ಲಿ ಫೋನ್ ಮಾಡುವ ಪುರುಷರು ನಮ್ಮ ಮಗಳನ್ನು ವೇಶ್ಯಾವೃತ್ತಿಗಾಗಿ ಆಹ್ವಾನಿಸುತ್ತಿದ್ದಾರೆ. ಮೊದಲ ಎರಡು ದಿನ ನಾವು ಇಂತಹ ಕರೆಗಳು ಬಂದಾಗ ಕೋಪದಿಂದಲೇ ಉತ್ತರಿಸುತ್ತಿದ್ದೆವು. ಮೊನ್ನೆ ರಾತ್ರಿ ಇಂತಹದ್ದೇ ಕರೆ ಬಂದಾಗ ಇದು ಮರ್ಯಾದಸ್ಥರ ಮನೆ. ಈ ರೀತಿ ಫೋನ್ ಮಾಡಲು ನಿಮಗೆ ನಾಚಿಕೆ ಆಗುವುದಿಲ್ಲವೇ ಎಂದು ಫೋನ್ ಮಾಡಿದವರನ್ನು ಕೇಳಿದಾಗ ಅತ ನಾವು ಸುಮ್ಮಸುಮ್ಮನೇ ಫೋನ್ ಮಾಡಿಲ್ಲ. ಇಂತಹ ಫೋನ್ ಸಂಖ್ಯೆಯಲ್ಲಿ ನಾನು ಸೆಕ್ಸ್‌ಗಾಗಿ ಲಭ್ಯವಿದ್ದೇನೆಂದು ನಿಮ್ಮ ಮಗಳೇ ಇಂಟರ್‌ನೆಟ್‌ನಲ್ಲಿ ತನ್ನ ಫೋಟೋ ಜೊತೆ ಆಹ್ವಾನಿಸಿರುವುದರಿಂದ ಫೋನ್ ಮಾಡುತ್ತಿದ್ದೇವೆ. ನಮ್ಮನ್ನು ಬೈದು ಏನು ಪ್ರಯೋಜನ ನಿಮ್ಮ ಮಗಳಿಗೆ ಬುದ್ಧಿ ಹೇಳಿ ಎಂದ. ತಕ್ಷಣವೇ ನಾವು ಗಾಬರಿಯಾಗಿ ಇಂಟರ್‌ನೆಟ್‌ನಲ್ಲಿ ಒಬ್ಬರನ್ನೊಬ್ಬರು ಸಂಧಿಸಬಹುದಾದಂತಹ ಸೈಟ್ ಆದ 'ಆರ್ಕೂಟ್' ನಲ್ಲಿ ನಮ್ಮ ಮಗಳ ಪ್ರೊಫೈಲ್ ನೋಡಿದೆವು. ಹಲವಾರು ನಗ್ನ ಚಿತ್ರಗಳ ಮೇಲೆ ನನ್ನ ಮಗಳ ಮುಖವನ್ನು ಪೇಸ್ಟ್ ಮಾಡಿದ್ದಾರೆ. ನಾವಂತೂ ಟೆಲಿಫೋನ್ ಸಂಪರ್ಕ ಕಡಿದು ಹಾಕಿದ್ದೇವೆ. ದಯವಿಟ್ಟು ಏನಾದರೂ ಮಾಡಿ ಎಂದರು.

ತಕ್ಷಣವೇ ನಮ್ಮ ಕಚೇರಿಯಲ್ಲಿಯೇ ಇರುವ ಸೈಬರ್ ಕ್ರೈಂ ಪೊಲೀಸ್ ಠಾಣೆಯ ಅಧಿಕಾರಿಗಳನ್ನು ಕರೆಸಿ ಅವರ ದೂರನ್ನು ತಿಳಿಸಿದೆ. ಆರ್ಕುಟ್ ಎನ್ನುವುದು ವಿಶ್ವದಾದ್ಯಂತ ಹಲವಾರು ವ್ಯಕ್ತಿಗಳು ಸಾಮಾಜಿಕ ಚಟುವಟಿಕೆಗಳಿಗೆ ಭೇಟಿ ಆಗುವ ಒಂದು ಸೈಟ್. ಒಬ್ಬ ವ್ಯಕ್ತಿಯ ಚಹರೆ ಪಟ್ಟಿ ಆರ್ಕುಟ್‌ನಲ್ಲಿ ಬಂದರೆ ಅದನ್ನು ವಾಪಸ್ಸು ತೆಗೆಯುವುದು ತೀರಾ ಕಷ್ಟ. ಕ್ರಿಮಿನಲ್ ಕೇಸ್ ದಾಖಲಿಸಿ ಪೊಲೀಸ್ ಮುಖ್ಯಸ್ಥರ ಮೂಲಕ ಆರ್ಕುಟ್‌ನ ಮಾತೃ ಸಂಸ್ಥೆ ಗೂಗಲ್ ಅನ್ನು ಸಂಪರ್ಕಿಸಬೇಕು. ಇದಕ್ಕೆ ಸ್ವಲ್ಪ ಸಮಯ ತಗಲುತ್ತದೆ. ಯಾರು ಈ ರೀತಿ ಮಾರ್ಫಿಂಗ್ [ಬೇರೊಬ್ಬರ ಚಿತ್ರದ ಮೇಲೆ ಇನ್ನೊಬ್ಬರದ್ದನ್ನು ಅಂಟಿಸುವುದು] ಮಾಡಿದ್ದಾರೋ ಅವರೇ ತೆಗೆಯುವುದು ಸುಲಭ ಎಂದು ನಮ್ಮ ಅಧಿಕಾರಿಗಳು ಹೇಳಿದರು. ನಿಮ್ಮ ಮಕ್ಕಳಿಗೆ ಪರಿಚಯ ಇರುವವರೇ ಈ ಕೆಲಸ ಮಾಡಿರಬೇಕು ನೀವು ಸ್ವಲ್ಪ ಪತ್ತೇದಾರಿ ಕೆಲಸ ಮಾಡಿ ಎಂದು ಆ ದಂಪತಿಗಳಿಗೆ ಸೂಚಿಸಿದೆ. ಇದಾದ ಒಂದು ವಾರದ ನಂತರ ಮತ್ತೆ ಆ ದಂಪತಿಗಳು ಇನ್ನೊಂದು ಜೋಡಿಯೊಂದಿಗೆ ನನ್ನ ಕಚೇರಿಗೆ ಬಂದರು. ಇವರು ನಮ್ಮ ಮನೆಯ ಪಕ್ಕದಲ್ಲಿ ಇರುತ್ತಿದ್ದರು. ಇವರ ಮಗ ಹಾಗೂ ನನ್ನ ಮಗಳು ನರ್ಸರಿ ಕ್ಲಾಸ್‌ನಿಂದ ಇಲ್ಲಿಯವರೆಗೆ ಒಟ್ಟಿಗೆ ಓದುತ್ತಿದ್ದಾರೆ. ಇವರ ಮಗನೇ ನಮ್ಮ ಮಗಳ ನಗ್ನ ಚಿತ್ರಗಳನ್ನು ಆರ್ಕುಟ್‌ನಲ್ಲಿ ಹಾಕಿದ್ದು ಎಂದರು. ಹೊಸ ಜೋಡಿಯತ್ತ ನೋಡಿದೆ. ಇಬ್ಬರೂ ಮರ್ಯಾದಸ್ಥರು. ಇಬ್ಬರೂ ದೊಡ್ಡದೊಡ್ಡ ಹುದ್ದೆಯಲ್ಲಿರುವವರು. ಅವರಿಗೂ ಒಬ್ಬನೇ ಮಗ. ನನ್ನ ಮಗ ಇಲ್ಲೇ ಹೊರಗೇ ನಿಂತಿದ್ದಾನೆ, ಅವನನ್ನೇ ವಿಚಾರಿಸಿ ಎಂದರು. ಆ ಯುವಕನನ್ನು ನನ್ನ ಕಚೇರಿಗೆ ಕರೆಸಿದಾಗ ಆತ ಅಳುತ್ತಲೇ ಬಂದು ನಾನು ತಪ್ಪು ಮಾಡಿದೆ. ಕ್ಷಮಿಸಿ ಎಂದ. ಇವರ ಮಗಳು ನನಗೆ ಬಹಳ ಹತ್ತಿರದ ಸ್ನೇಹಿತೆ. ಒಂದು ದಿನ ನಾನು ಸಲಿಗೆಯಿಂದ ಆಕೆಯನ್ನು ನನ್ನ ಜೊತೆ ಕಾಫಿ ಕುಡಿಯಲು ಕರೆದೆ. ಆಕೆ ನನ್ನ ಸ್ನೇಹಿತರ ಎದುರುಗಡೆಯೇ ನನ್ನ ಆಹ್ವಾನವನ್ನು ತಿರಸ್ಕರಿಸಿ, ನನ್ನನ್ನು ಅವಮಾನಿಸಿದಳು. ಇದೇ ಕಾರಣಕ್ಕಾಗಿಯೇ ನಾನು ಆಕೆಯ ಮೇಲಿನ ಕೋಪದಿಂದ ಆರ್ಕುಟ್‌ನ ಚಹರೆ ಪಟ್ಟಿಯಲ್ಲಿ ಆಕೆಯ ಚಿತ್ರವನ್ನು ಹಾಕಿದ್ದು. ಆಕೆಯ ಪಾಸ್‌ವರ್ಡ್ ನನಗೆ ತಿಳಿದಿದ್ದರಿಂದ ಈ ರೀತಿ ಕೆಲಸ ಮಾಡಲು ಸುಲಭವಾಯಿತು ಎಂದ ಆ ಹುಡುಗ. ಗೌರವಯುತ ಮನೆತನದಿಂದ ಬಂದಂತಹ ಹುಡುಗ ಹೀಗೆ ಮಾಡಿದ್ದು ಆಶ್ಚರ್ಯವಾಯಿತು. ನಾವು ಕೇಸ್ ದಾಖಲಿಸಿದರೆ ಈ ಹುಡುಗನ ಭವಿಷ್ಯಕ್ಕೆ ತೊಂದರೆಯಾಗುತ್ತದೆ. ಆದದ್ದು ಆಗಿಹೋಯಿತು ಎಂದರು ಹುಡುಗಿಯ ಪೋಷಕರು. ಇದಕ್ಕೆ ಒಪ್ಪಿ ಎರಡೂ ಕುಟುಂಬಗಳಿಗೆ ರಾಜಿ ಮಾಡಿಸಿ. ಆರ್ಕುಟ್ ಪ್ರೊಫೈಲ್‌ನ್ನು ಕೂಡಲೇ ತಿದ್ದುವಂತೆ ಆ ಹುಡುಗನಿಗೆ ಹೇಳಿ ಅವರನ್ನು ಕಳುಹಿಸಿಕೊಟ್ಟೆ.

ಅತ್ಯಂತ ಸಾಮಾನ್ಯ ಅಪಾಯವಿದು. ಸಾಮಾನ್ಯವಾಗಿ ಒಬ್ಬಳನ್ನು ಅತಿ ಹೆಚ್ಚು ಪ್ರೀತಿಸಿದಾಗ, ಇಲ್ಲವೇ ದ್ವೇಷಿಸಿದಾಗ ಇಲ್ಲವೇ ಅವಳ ಜೊತೆ ತಮಾಷೆ ಮಾಡಲು ಈ ರೀತಿ ಪುರುಷರು ಮಾಡುವುದುಂಟು. ಕಾಲೇಜು ವಿದ್ಯಾರ್ಥಿ ವಿದ್ಯಾರ್ಥಿನಿಯರಲ್ಲದೇ ಕಚೇರಿಗಳಲ್ಲಿ ಕೆಲಸ ಮಾಡುವವರೂ ಈ ರೀತಿ ಅಪಾಯವನ್ನು ಎದುರಿಸುತ್ತಾರೆ. ಈ ರೀತಿ ಕೃತ್ಯಗಳನ್ನು ಸಾಮಾನ್ಯವಾಗಿ ಪರಿಚಯಸ್ಥರೇ ಮಾಡಿದರೂ ಎಷ್ಟೋ ಬಾರಿ ಅಪರಿಚಿತರಿಂದಲೂ ಈ ರೀತಿ ದುಷ್ಕೃತ್ಯಗಳು ನಡೆಯುತ್ತದೆ.

ಅಪರಿಚಿತರು ಹೇಗೆ ಇಂತಹ ಕೃತ್ಯ ಮಾಡಲು ಸಾಧ್ಯ ಎಂದು ನೀವು ಕೇಳಬಹುದು. ಸಾಮಾನ್ಯವಾಗಿ ಇಂಟರ್‌ನೆಟ್‌ನಲ್ಲಿ ಹೆಣ್ಣು ಮಕ್ಕಳು ಚಾಟ್ ಕೋಣೆಗಳಿಗೆ ಹೋಗಿ ಅಪರಿಚಿತರೊಂದಿಗೆ ಸಂಭಾಷಣೆಯನ್ನು ನಡೆಸುತ್ತಾರೆ. ಒಂದೊಂದು ಚಾಟ್ ಕೋಣೆಯಲ್ಲಿ ಏಕಕಾಲಕ್ಕೆ 30 ರಿಂದ 40 ಜನ ಸಂಭಾಷಣೆಯನ್ನು ನಡೆಸಬಹುದಾದರೂ ಒಮ್ಮೊಮ್ಮೆ ಇಬ್ಬರೇ ಪರಸ್ಪರ ಸಂಭಾಷಣೆಯಲ್ಲಿ ತೊಡಗಬಹುದು. ಇದನ್ನು ಪ್ರೈವೇಟ್ ಚಾಟ್ ಎನ್ನುತ್ತಾರೆ. ಈ ರೀತಿಯ ಚಾಟ್ ಸಂಭಾಷಣೆಗಳ ಪರಿಣಾಮವಾಗಿ ಹಲವಾರು ಜೋಡಿಗಳ ಮಧ್ಯೆ ಪ್ರೀತಿ ಉಗಮವಾಗಿದೆ. ಈ ಪ್ರೀತಿಯ ಫಲವಾಗಿ ಎಷ್ಟೋ ಜನ ಒಬ್ಬರನ್ನೊಬ್ಬರು ಲಗ್ನವಾಗಿದ್ದಾರೆ. ನನಗೆ ಪರಿಚಯ ಇರುವ ಹೆಸರಾಂತ ವೃತ್ತ ಪತ್ರಿಕೆಯೊಂದರ ಮಹಿಳಾ ಪತ್ರಿಕೋದ್ಯಮಿ ವಿವಾಹ ವಿಚ್ಛೇದನ ಪಡೆದುಕೊಂಡು ಒಬ್ಬಂಟಿಗಳಾಗಿ ಜೀವನ ಸಾಗಿಸುತ್ತಿದ್ದಳು. ಈಗ ಒಂದು ವರ್ಷದ ಹಿಂದೆ ಆಕೆ ಇಂಟರ್‌ನೆಟ್‌ನ ಚಾಟ್ ಕೋಣೆಯೊಂದರಲ್ಲಿ ಅಮೇರಿಕಾದಲ್ಲಿ ವಾಸ ಮಾಡುತ್ತಿರುವ ವಿವಾಹ ವಿಚ್ಛೇದನ ಪಡೆದ ವ್ಯಕ್ತಿಯೊಬ್ಬನ ಪರಿಚಯ ಮಾಡಿಕೊಂಡಳು. ಇಬ್ಬರೂ ತಮ್ಮ ತಮ್ಮ ಬಯೋ-ಡಾಟಾ ಹಾಗೂ ಛಾಯಾಚಿತ್ರಗಳನ್ನು ವಿನಿಮಯ ಮಾಡಿಕೊಂಡರು. ಆನಂತರ ಇಬ್ಬರೂ ಭಾರತದಲ್ಲಿ ಲಗ್ನ ಮಾಡಿಕೊಂಡು ಸಧ್ಯಕ್ಕೆ ಅಮೇರಿಕಾದಲ್ಲಿ ಸುಖವಾಗಿ ವಾಸ ಮಾಡುತ್ತಿದ್ದಾರೆ.

ಆದರೆ ಚಾಟ್ ಕೋಣೆಗಳಲ್ಲಿ ಸಂಧಿಸುವ ಎಲ್ಲಾ ಯುವಕ ಯುವತಿಯರ ಕಥೆಯು ಇದೇ ರೀತಿ ಸುಖಾಂತ್ಯವಾಗುವುದಿಲ್ಲ. ನನಗೆ ತಿಳಿದಂತಹ ಇನ್ನೊಂದು ಪ್ರಕರಣದಲ್ಲಿ ಚಾಟ್ ರೂಂನಲ್ಲಿ ಕರ್ನಾಟಕದ ಅವಿವಾಹಿತ ತರುಣಿಯೊಬ್ಬಳು ಅಮೇರಿಕಾದಲ್ಲಿರುವ ಕನ್ನಡ ಯುವಕನನ್ನು ಸಂಧಿಸಿ ಪ್ರಣಯಕ್ಕೆ ಒಳಗಾದಳು. ಇಬ್ಬರೂ ಮದುವೆಯಾಗಲು ನಿರ್ಧರಿಸಿದರು. ಯುವಕ ಅಮೇರಿಕಾದಿಂದ ಬಂದು ಆಕೆಯನ್ನು ವಿವಾಹ ಮಾಡಿಕೊಂಡ. ಕೆಲಕಾಲ ಭಾರತದಲ್ಲಿಯೇ ಇದ್ದು, ಆಕೆಯ ಆಸ್ತಿಪಾಸ್ತಿಯನ್ನು ಲಪಟಾಯಿಸಿ, ಅಮೇರಿಕಾಕ್ಕೆ ಹೋಗಿ ಆಕೆಯನ್ನು ತೊರೆದು ನಾಪತ್ತೆ ಆಗಿದ್ದಾನೆ. ಈಗ ಆ ಯುವತಿ ಏನೂ ಮಾಡಲು ತೋಚದೆ ಪರಿತಪಿಸುತ್ತಿದ್ದಾಳೆ.

ಓಗಾಗಿ ಚಾಟ್ ರೂಂಗಳಲ್ಲಿ ತಮ್ಮ ಪರಿಚಯ ಹೇಳುವಾಗ ಮಹಿಳೆಯರು ಅತ್ಯಂತ ಜಾಗರೂಕರಾಗಲೇ ಬೇಕು. ಸ್ವಲ್ಪ ಎಚ್ಚರ ತಪ್ಪಿ ತಮ್ಮ ವಿಳಾಸ, ಮೊಬೈಲ್ ಫೋನ್ ನಂಬರ್ ಇತ್ಯಾದಿಯನ್ನು ನೀಡಿದರೆ ಅಪಾಯವನ್ನು ಎದುರಿಸಲು ಸಿದ್ಧರಾಗಿರಲೇಬೇಕು. ಹಲವಾರು ಬಾರಿ ಚಾಟ್ ರೂಂನಲ್ಲಿ ಗೆಳೆತನ ಬೆಳೆಸಿಕೊಂಡ ಯುವಕರು ಅಮಾಯಕ ಯುವತಿಯರನ್ನು ಮೋಸ ಮಾಡಿ ಅವರನ್ನು ರೇಪ್ ಮಾಡಿ ಅವರ ಬಳಿ ಇದ್ದ ಹಣವನ್ನೂ ಕಸಿದುಕೊಂಡು ಹೋಗಿದ್ದಾರೆ. ಇಂತಹ ಒಂದು ಪ್ರಕರಣದಲ್ಲಿ ಯುವತಿಯೊಬ್ಬಳಿಗೆ ಇಂಟರ್‌ನೆಟ್ ಮೂಲಕ ಪರಿಚಯವಾದ ಅಮೇರಿಕಾ ವಾಸಿ ಸ್ಫುರದ್ರೂಪಿ ಯುವಕನೊಬ್ಬ ಭಾರತಕ್ಕೆ ಬಂದು ಯುವತಿಯನ್ನು ಸಂಧಿಸಿ ನಿನ್ನನ್ನು ಮದುವೆಯಾಗುತ್ತೇನೆ ಎಂದು ನಂಬಿಸಿ ಆಕೆಯ ದೇಹದ ಸವಿಯನ್ನು ಅನುಭವಿಸಿ ಆಕೆ ಗರ್ಭಿಣಿಯಾದ ನಂತರ ಅಮೇರಿಕಾಕ್ಕೆ ಹಾರಿ ಹೋಗಿದ್ದಾನೆ.

ಆ ಯುವಕನ ಮೇಲೆ ಅತ್ಯಾಚಾರದ ಕೇಸು ದಾಖಲಾಗಿದ್ದರೂ ಆತನನ್ನು ಬಂಧಿಸಲು ಆಗುತ್ತಿಲ್ಲ.

ಕೆಲವು ಬಾರಿ ರೇಪ್ ನಂತಹ ಘೋರ ಅಪರಾಧಗಳು ನಡೆಯದೇ ಹೋಗಬಹುದು. ಸಾಮಾನ್ಯವಾಗಿ ಮಹಿಳೆಯರಿಗೆ ಅಶ್ಲೀಲ ಇ-ಮೇಲ್ ಸಂದೇಶಗಳನ್ನು ಕಳುಹಿಸಲಾಗುತ್ತದೆ. ಎಷ್ಟೋ ಬಾರಿ ಅಶ್ಲೀಲವಲ್ಲದಿದ್ದರೂ "ನಾನು ನಿನ್ನವನು. ನಿನ್ನನ್ನು ಬಿಡಲು ನನಗೆ ಆಗುವುದಿಲ್ಲ" ಎನ್ನುವಂತಹ ಈ-ಮೇಲ್ ಸಂದೇಶವನ್ನು ದಿನಕ್ಕೆ 20 ಬಾರಿ ಕಳಿಸಿದರೆ ಎಂತಹವರೂ ಅಧೀರರಾಗುತ್ತಾರೆ. ಕೆಲವು ಬಾರಿ ತನಗಾಗದ ಯುವತಿಯ ಹಸರಿನಲ್ಲಿ ನಕಲಿ ಜಾಹೀರಾತುಗಳನ್ನು ಇಂಟರ್‌ನೆಟ್‌ನಲ್ಲಿ ಕೊಟ್ಟು ತಾನು ಸೆಕ್ಸ್‌ಗಾಗಿ ಸಿದ್ದ ಎಂದು ಆಕೆಯೇ ಆಹ್ವಾನ ನೀಡಿದಂತೆ ಬರೆಯಲಾಗುತ್ತದೆ. ಈ ರೀತಿಯ ಜಾಹಿರಾತಿನಲ್ಲಿ ಆಕೆಯ ಟೆಲಿಫೋನ್ ನಂಬರ್, ಮೊಬೈಲ್ ಫೋನ್ ನಂಬರ್ ಮತ್ತು ಇ-ಮೇಲ್ ಐ.ಡಿ.ಗಳನ್ನು ಕೂಡ ಕೊಡಲಾಗುತ್ತದೆ. ಇದರ ಫಲವಾಗಿ ವಿನಾಕಾರಣ ಹಲವಾರು ಜನರು ಆ ಮಹಿಳೆಯನ್ನು ಸಂಪರ್ಕಿಸಿ ಆಕೆಗೆ ತೊಂದರೆಯನ್ನು ಕೊಡುತ್ತಾರೆ. ಈಗಾಗಲೇ ಇಂತಹ ಒಂದು ಪ್ರಕರಣವನ್ನು ಉಲ್ಲೇಖಿಸಲಾಗಿದೆ.

ಮೊಬೈಲ್ ಫೋನ್‌ನ ಎಸ್‌ಎಂಎಸ್‌ಗಳನ್ನು ಇಂಟರ್‌ನೆಟ್‌ಗೆ ಲಿಂಕ್ ಮಾಡಬಹುದಾಗಿರುವುದರಿಂದ ಎಷ್ಟೋ ಬಾರಿ ಒಬ್ಬ ಮಹಿಳೆಗೆ ತೊಂದರೆ ಕೊಡಬಯಸುವವರು ಮೊಬೈಲ್‌ಗೆ ಎಸ್‌ಎಂಎಸ್‌ಗಳನ್ನು ಕಳುಹಿಸುತ್ತಾರೆ. ಹಲವು ಹತ್ತು ಬಾರಿ ಸಂದೇಶಗಳನ್ನು ಕಳಿಸಿ ನಾನು ನಿನ್ನನ್ನು ಪ್ರೀತಿಸುತ್ತಿದ್ದೇನೆ, ನೀನು ನನ್ನನ್ನು ಲಗ್ನವಾಗು ಎಂದು ಪೀಡಿಸಬಹುದು. ಇಲ್ಲವೇ ಅಶ್ಲೀಲ ಸಂದೇಶಗಳನ್ನು ಕಳುಹಿಸಬಹುದು. ಇತ್ತೀಚೆಗೆ ಇಂತಹದ್ದೇ ಒಂದು ಕೇಸ್ ನಮ್ಮ ಗಮನಕ್ಕೆ ಬಂದಿತು. ಸರ್ಕಾರಿ ಕಚೇರಿಯೊಂದರಲ್ಲಿ ಕೆಲಸ ಮಾಡುವ ಒಬ್ಬ ಗೃಹಿಣಿಗೆ ಒಂದು ಎಸ್‌ಎಂಎಸ್ ಸಂದೇಶ ಬಂದಿತ್ತು. ಸಂದೇಶದಲ್ಲಿ ನಮ್ಮ ಇಬ್ಬರ ಪ್ರೀತಿ ಇನ್ನೂ ಯಾರಿಗೂ ತಿಳಿದಿಲ್ಲ, ನಮ್ಮ ಪ್ರೀತಿ ಅಜರಾಮರ, ನಾವು ಲಗ್ನ ಯಾವಾಗ ಆಗೋಣ ಎಂದು ಬರೆದಿತ್ತು. ಆ ಗೃಹಿಣಿ ಎಸ್‌ಎಂಎಸ್ ಸಂದೇಶವನ್ನು ಓದಿರಲಿಲ್ಲ. ಆಕೆ ಮನೆಗೆ ಹೋದ ನಂತರ ಅಕಸ್ಮಾತ್ತಾಗಿ ಆಕೆಯ ಗಂಡ ಆಕೆಯ ಮೊಬೈಲ್ ಫೋನನ್ನು ಪಡೆದು ಅದರಲ್ಲಿದ್ದ ಎಸ್‌ಎಂಎಸ್ ಸಂದೇಶಗಳನ್ನು ಓದಿದ. ಇದ್ದಕ್ಕಿದ್ದಂತೆ ಆತ ಕೋಪಾವಿಷ್ಟನಾಗಿ ಎರಡು ಮಕ್ಕಳ ತಾಯಿಯಾಗಿ ನೀನು ಅದು ಹೇಗೆ ಇನ್ನೊಬ್ಬನ ಜೊತೆ ಪ್ರೀತಿಸಿ ಲಗ್ನಕ್ಕೆ ತಯಾರಾದೆ ಎಂದು ದಬಾಯಿಸಿದಾಗ ಆ ಗೃಹಿಣಿ ತಬ್ಬಿಬ್ಬಾದಳು. ಕಡೆಗೆ ಪೊಲೀಸರ ಮೊರೆ ಹೋಕ್ಕಾಗ ಎಸ್‌ಎಂಎಸ್ ಸಂದೇಶ ಕಳುಹಿಸಿದವನು ಬೇರೊಬ್ಬ ಹೆಣ್ಣಿನ ಮೊಬೈಲ್ ನಂಬರ್ ಬದಲಾಗಿ ಈ ಗೃಹಿಣಿಯ ನಂಬರ್‌ಗೆ ಆಕಸ್ಮಾತಾಗಿ ಸಂದೇಶ ಕಳಿಸಿದ್ದ. ವಸ್ತುಸ್ಥಿತಿ ಅರಿತ ಮೇಲೆ ಗಂಡಹೆಂಡಿರು ರಾಜಿಯಾದರು. ಆದರೆ ಈ ರೀತಿ ಸಂದೇಶಗಳಿಂದ ಎಷ್ಟೋ ಬಾರಿ ಹಲವಾರು ವಿವಾಹಗಳು ಮುರಿದು ಹೋಗಿವೆ.

ಇಂಟರ್‌ನೆಟ್ ಮೂಲಕ ಹೆಣ್ಣುಮಕ್ಕಳನ್ನು ಕಾಡಿಸುವ ವ್ಯಕ್ತಿಗಳಿಗೆ ಇಂಗ್ಲೀಷ್‌ನಲ್ಲಿ "Cyber Stalker" ಎಂದು ಕರೆಯುತ್ತಾರೆ. ಸೈಬರ್ ಸ್ಟಾಕರ್ ಗಳಿಗೆ ಮುಖ್ಯವಾಗಿ ಮೂರು

ರೀತಿಯ ಉದ್ದೇಶಗಳು ಇರುತ್ತವೆ. ಮೊಟ್ಟಮೊದಲನೇ ಉದ್ದೇಶ ಹೆಣ್ಣು ಮಕ್ಕಳಿಗೆ ಲೈಂಗಿಕ ಕಿರುಕುಳ ಕೊಡುವುದು. ಎರಡನೆಯದು ಪ್ರಣಯ ಅಥವಾ ಪ್ರೀತಿ. ಒಬ್ಬಳನ್ನು ಅತ್ಯಂತ ಆಳವಾಗಿ ಪ್ರೀತಿಸಿದ ವ್ಯಕ್ತಿ ತನ್ನ ಪ್ರೀತಿಯನ್ನು ಇಂಟರ್‌ನೆಟ್ ಮೂಲಕ ತೋಡಿಕೊಳ್ಳುತ್ತಾನೆ. ಕೆಲವು ಬಾರಿ ಇಂತಹ ಪ್ರಣಯ ಒನ್‌ವೇ ಅಂದರೆ ಏಕರೂಪದ ಪ್ರಣಯವಾಗಿರಬಹುದು. ತನ್ನ ಸಂದೇಶಗಳಿಗೆ ಉತ್ತರ ಬಾರದಿದ್ದರೂ, ಸಂದೇಶ ಕಳಿಸುವ ವ್ಯಕ್ತಿ ಸುಮ್ಮನೇ ಕೂಡದೇ ಪದೇ ಪದೇ ಈ-ಮೇಲ್‌ಗಳನ್ನು ಬರೆದು ಆ ಹೆಣ್ಣು ಮಗಳನ್ನು ಕಾಡಿಸುತ್ತಾನೆ. ಸಾಮಾನ್ಯವಾಗಿ ಸಿನಿಮಾ ತಾರೆಯರು ಈ ರೀತಿಯ ಒನ್‌ವೇ ಪ್ರಣಯಿಗಳ ತೊಂದರೆಗೆ ಈಡಾಗುತ್ತಾರೆ. ಕೆಲವು ಬಾರಿ ಇಬ್ಬರು ವ್ಯಕ್ತಿಗಳು ಒಬ್ಬರನ್ನೊಬ್ಬರು ಪ್ರೀತಿಸುತ್ತಾ ಇರುತ್ತಾರೆ. ಕಾರಣಾಂತರಗಳಿಂದ ಅವರ ಪ್ರಣಯ ಮುರಿದು ಹೋಗುತ್ತದೆ. ಹೀಗೆ ಪ್ರಣಯವು ಮುರಿದು ಹೋದಾಗ ಭಗ್ನ ಪ್ರೇಮಿಯು ತನ್ನ ಪ್ರೇಮಿಕಾಳಿಗೆ ಇಂಟರ್‌ನೆಟ್ ಮೂಲಕ ತೊಂದರೆಯನ್ನು ಕೊಡುತ್ತಾನೆ. ಮೂರನೇ ವಿಧದ ಪ್ರಕರಣದಲ್ಲಿ ಇಬ್ಬರು ವ್ಯಕ್ತಿಗಳು ಪರಸ್ಪರ ಪರಿಚಯ ಮಾಡಿಕೊಂಡು ಮೊದಲಿಗೆ ಉತ್ತಮ ಸ್ನೇಹಿತರಾಗಿರುತ್ತಾರೆ. ಇಲ್ಲವೇ ಪ್ರೇಮಿಗಳಾಗುತ್ತಾರೆ. ಯಾವುದಾದರೊಂದು ಕಾರಣಕ್ಕಾಗಿ ಅವರಿಬ್ಬರ ಮಧ್ಯೆ ಮನಸ್ತಾಪ ಉಂಟಾದಾಗ ಪ್ರತೀಕಾರವನ್ನು ತೆಗೆದುಕೊಳ್ಳಲು ಇಂಟರ್‌ನೆಟ್‌ನ್ನು ಉಪಯೋಗ ಮಾಡಿಕೊಳ್ಳಲಾಗುತ್ತದೆ.

# 12

## ಸೈಬರ್ ಸ್ಟಾಕರ್‌ಗಳ ಗುರಿ-ಮಕ್ಕಳು

ಪ್ರಪಂಚದಲ್ಲಿ ಸಧ್ಯದಲ್ಲಿ ಸುಮಾರು 3 ರಿಂದ 4 ಲಕ್ಷ ಜನ ಹೆಣ್ಣು ಮಕ್ಕಳಿಗೆ ತೊಂದರೆ ಕೊಡುವಂತಹ ಸೈಬರ್ ಸ್ಟಾಕರ್‌ಗಳು ಇದ್ದಾರೆ ಎಂದು ಅಂದಾಜು ಮಾಡಲಾಗಿದೆ. ಸುಮಾರು 80 ದಶಲಕ್ಷ ಜನ ಇಂಟರ್‌ನೆಟನ್ನು ಯಾವುದೇ ನಿಗದಿತ ಸಮಯದಲ್ಲಿ ಬಳಸುವುದರಿಂದ ವಿಶ್ವದಾದ್ಯಂತ ಸುಮಾರು 65,000 ಇಂಟರ್‌ನೆಟ್ ಸ್ಟಾಕರ್‌ಗಳು ತಮ್ಮ ಕೈಚಳಕವನ್ನು ಸದಾಕಾಲವೂ ತೋರಿಸುತ್ತಿದ್ದಾರೆಂದು ಅಂದಾಜು ಮಾಡಲಾಗಿದೆ. ಸುಮಾರು ಐದು ಲಕ್ಷ ಜನ ಹೆಣ್ಣು ಮಕ್ಕಳು ಇಂಟರ್‌ನೆಟ್ ಸ್ಟಾಕರ್‌ಗಳಿಗೆ ಪ್ರತಿ ದಿನ ಬಲಿಯಾಗುತ್ತಾರೆಂದು ಅಂದಾಜು ಮಾಡಲಾಗಿದೆ. ನಮ್ಮ ದೇಶದಲ್ಲಿ ಎಷ್ಟು ಮಂದಿ ಸ್ತ್ರೀಯರು ಸೈಬರ್ ಕಿರುಕುಳಕ್ಕೆ ತುತ್ತಾಗುತ್ತಿದ್ದಾರೆಂಬ ನಿಖರ ಅಂಕಿಅಂಶಗಳು ಇಲ್ಲ. ಏಕೆಂದರೆ ಇಂತಹ ಕೃತ್ಯಗಳು ಪೊಲೀಸರಿಗೆ ವರದಿಯಾಗುವುದೇ ಇಲ್ಲ. ಆದರೂ ವರ್ಷಕ್ಕೆ ಸುಮಾರು ಸಾವಿರ ಸ್ತ್ರೀಯರು ಇಂತಹ ಕೃತ್ಯಗಳಿಗೆ ತುತ್ತಾಗಿರುತ್ತಿರಬಹುದು ಎನ್ನಲಾಗಿದೆ.

ಸಾಮಾನ್ಯವಾಗಿ ಸೈಬರ್ ಸ್ಟಾಕರ್‌ಗಳಿಗೆ ಗುರಿಯಾಗುವವರು ಯಾವುದಾದರೊಂದು ರೀತಿಯಲ್ಲಿ ಮಾನಸಿಕ ತುಮುಲಕ್ಕೆ ಒಳಗಾದ ಮಹಿಳೆಯರು. ಮಾನಸಿಕವಾಗಿ ಅಭದ್ರತೆಯಲ್ಲಿರುವವರು ತಾವು ಏಕಾಏಕಿ ತೀರ್ಮಾನಗಳನ್ನು ತೆಗೆದುಕೊಳ್ಳುತ್ತಾರೆ. ಮನೆಯಲ್ಲಿ ಯಾರಿಂದಾದರೂ ತೊಂದರೆ ಉಂಟಾದರೆ, ಆ ತೊಂದರೆಯ ಬಗ್ಗೆ ಬೇರೆಯವರಲ್ಲಿ ಹೇಳಿಕೊಳ್ಳಲು ಬಯಸುತ್ತಾರೆ. ಎಷ್ಟೋ ಬಾರಿ ಅಪರಿಚಿತರ ಬಳಿಯೂ ತಮ್ಮ ದುಃಖ ಹಂಚಿಕೊಳ್ಳುತ್ತಾರೆ.

ಪ್ರಾಯದ ಮೂಲಕ ಸಂಗಾತಿ ಒಬ್ಬನನ್ನು ಹುಡುಕಿಕೊಳ್ಳಲು ಹೋಗುತ್ತಾರೆ. ಇಂತಹ ವ್ಯಕ್ತಿಗಳನ್ನು ಸೈಬರ್ ಸ್ಟಾಕರಗಳು ಸದಾಕಾಲವೂ ಹುಡುಕುತ್ತಿರುತ್ತಾರೆ. ಹೀಗಾಗಿ ಮಾನಸಿಕವಾಗಿ ಏನಾದರೂ ತೊಂದರೆ ಉಂಟಾದಾಗ ಇಂಟರ್‌ನೆಟ್ ಮೂಲಕ ಬೇರೊಬ್ಬರ ಸ್ನೇಹವನ್ನು ಮಾಡುವುದಕ್ಕಿಂತ ನಮ್ಮ ಪರಿಚಯದವರ ಮೂಲಕವೇ ಭದ್ರತೆ ಪಡೆಯುವುದು ಒಳಿತು.

ಸಾಮಾನ್ಯವಾಗಿ ಸೈಬರ್ ಸ್ಟಾಕರ್‌ಗಳು ಮಕ್ಕಳನ್ನು ಗುರಿಯಾಗಿಟ್ಟುಕೊಳ್ಳುತ್ತಾರೆ. ಕೆಲವು ವ್ಯಕ್ತಿಗಳಿಗೆ ಮಕ್ಕಳ ಜೊತೆ ಲೈಂಗಿಕ ಸಹವಾಸ ಒಂದು ರೀತಿಯ ತೃಪ್ತಿಯನ್ನು ತಂದುಕೊಡುತ್ತದೆ. ಇಂತಹ ವ್ಯಕ್ತಿಗಳನ್ನು ಪಡೋಫೈಲ್ ಎನ್ನುತ್ತೇವೆ. ಇವರುಗಳು ಇಂಟರ್‌ನೆಟ್ ಮೂಲಕ ಮುಗ್ಧ ಮಕ್ಕಳನ್ನು ಪುಸಲಾಯಿಸಿ ತಮ್ಮ ಬಳಿ ಬರಮಾಡಿಕೊಳ್ಳುತ್ತಾರೆ. ಅಂತಹ ಮಕ್ಕಳಿಗೆ ವಿವಿಧ ರೀತಿಯ ಆಮಿಷಗಳನ್ನು ಒಡ್ಡಿ ಲೈಂಗಿಕ ಕೃತ್ಯಗಳಿಗೆ ಬಳಸಿಕೊಳ್ಳುತ್ತಾರೆ. ನಮ್ಮ ದೇಶದಲ್ಲಿಯೂ ಗೋವಾ ಮತ್ತು ಮುಂಬೈ ಇತ್ಯಾದಿ ನಗರಗಳಲ್ಲಿ ಗಂಡು ಮತ್ತು ಹೆಣ್ಣು ಮಕ್ಕಳನ್ನು ಪುಸಲಾಯಿಸಿ ಅವರ ನಗ್ನ ಭಾವ ಚಿತ್ರಗಳನ್ನು ಇಂಟರ್‌ನೆಟ್ ಮೂಲಕ ಜಾಹೀರಾತು ಪಡಿಸಿದ ಪ್ರಕರಣಗಳು ಆಗಿವೆ. ಹೀಗಾಗಿ ನಿಮ್ಮ ಮನೆಯಲ್ಲಿ ಕಂಪ್ಯೂಟರ್ ಇದ್ದರೆ, ಆ ಕಂಪ್ಯೂಟರ್ ಮಕ್ಕಳ ಕೋಣೆಯಲ್ಲಿ ಇಡದಿರುವುದು ಉತ್ತಮ. ನಿಮ್ಮ ಮಕ್ಕಳು ಇಂಟರ್‌ನೆಟ್ ಮೂಲಕ ಯಾವ ಯಾವ ಸೈಟ್‌ಗಳನ್ನು ವಿಸಿಟ್ ಮಾಡುತ್ತಿದ್ದಾರೆ ಎನ್ನುವುದನ್ನು ನೀವು ಅರಿತುಕೊಳ್ಳಲೇ ಬೇಕು. ಎಷ್ಟೋ ಬಾರಿ ಮುಗ್ಧ ಮಕ್ಕಳು ಹಲವಾರು ಪ್ರಚೋದನೆಗಳಿಗೆ ಒಳಗಾಗಿ ತೊಂದರೆಗಳಿಗೆ ಒಳಗಾವುದನ್ನು ನಾವು ನೋಡಬಹುದು.

ಒಂದು ವೇಳೆ ನಿಮ್ಮ ಮಕ್ಕಳಿಗೆ ಇಂಟರ್‌ನೆಟ್ ಮೂಲಕ ಯಾವುದಾರೂ ಸ್ಟಾಕರ್ ತೊಂದರೆ ಕೊಡುತ್ತಿದ್ದರೆ ಆ ಬಗ್ಗೆ ನಿಮ್ಮ ಬಳಿ ನಿಜವನ್ನು ಹೇಳಬೇಕೆಂದು ನಿಮ್ಮ ಮಗುವಿಗೆ ಕಲಿಸಿಕೊಡಬೇಕು. ನವೆಂಬರ್ 2000ರಲ್ಲಿ ಮುಂಬೈ ಪೊಲೀಸರು 16 ವರ್ಷದ ಬಾಲಕನೊಬ್ಬನನ್ನು ಇಂಟರ್‌ನೆಟ್ ಮೂಲಕ ಪೀಡಿಸುತ್ತಿದ್ದ ಮಹಿಳಾ ಸ್ಟಾಕರ್ ಒಬ್ಬಳನ್ನು ಪತ್ತೆ ಹಚ್ಚಿ ಬಂಧಿಸಿದ್ದಾರೆ. ತಮಗೆ ತೊಂದರೆ ಆಗುತ್ತಿರುವ ಬಗ್ಗೆ ನಿಮ್ಮ ಮಕ್ಕಳು ನಿಮಗೆ ತಿಳಿಸದಿದ್ದರೆ ಇಂತಹ ಪ್ರಕರಣಗಳು ಪತ್ತೆಯೇ ಆಗುವುದಿಲ್ಲ. ನಾವು ಚಿಕ್ಕ ಮಕ್ಕಳಿಗೆ ಅಪರಿಚಿತರೊಂದಿಗೆ ವ್ಯವಹರಿಸಬಾರದು ಎಂದು ಎಚ್ಚರಿಕೆಯನ್ನು ಹೇಗೆ ನೀಡುತ್ತಿದ್ದೆವೋ ಆ ಎಚ್ಚರಿಕೆಯ ಮಾತು ಸೈಬರ್ ವಾತಾವರಣಕ್ಕೂ ಚೆನ್ನಾಗಿಯೇ ಅನ್ವಯಿಸುತ್ತದೆ.

ಸ್ತ್ರೀಯರು ತಮಗೆ ಇಂಟರ್‌ನೆಟ್ ಮೂಲಕ ತೊಂದರೆ ಉಂಟಾಗುತ್ತಿದ್ದಲ್ಲಿ ಅಂತಹ ವಿಷಯವನ್ನು ತಮ್ಮ ತಂದೆತಾಯಿಗಳಿಗೆ ಅಥವಾ ಮದುವೆ ಆಗಿದ್ದಲ್ಲಿ ತಮ್ಮ ಗಂಡನಿಗೆ ತಿಳಿಸುವುದು ಉಚಿತ.

ಲೈಂಗಿಕ ಕಿರುಕುಳಕ್ಕೆ ಅಲ್ಲದೆಯೋ ಮೋಸ ಮಾಡುವುದಕ್ಕಾಗಿಯೂ ಇಂಟರ್‌ನೆಟ್‌ನ್ನು ವ್ಯಾಪಕವಾಗಿ ಕೆಲವರು ಬಳಸಿಕೊಳ್ಳುತ್ತಿದ್ದಾರೆ. ನಿಮ್ಮ ಇ–ಮೇಲ್ ನ ಇನ್‌ಬಾಕ್ಸ್ ನಲ್ಲಿ ಒಂದು ಪತ್ರ ಬಂದು ಬ್ರಿಟಿಷ್ ಅಥವಾ ಸ್ಪೈನ್ ದೇಶದ ಲಾಟರಿಯಲ್ಲಿ ನೀವು ಒಂದು ದಶಲಕ್ಷ ಡಾಲರ್‌ಗಳನ್ನು ಗೆದ್ದಿದ್ದೀರಿ. ಶುಭಾಶಯಗಳು ಎಂದು ಅದರಲ್ಲಿ ತಿಳಿಸಲಾಗುತ್ತದೆ.

ಪತ್ರವನ್ನು ಬರೆದವರನ್ನು ಬಹುಮಾನದ ಬಗ್ಗೆ ಸಂಪರ್ಕಿಸಿದರೆ, ನೀವು ಬೇರೆ ದೇಶದಲ್ಲಿ ಇರುವುದರಿಂದ ಈ ಭಾರಿ ಮೊತ್ತವನ್ನು ನಿಮಗೆ ಕಳುಹಿಸಲು ಸಂಸ್ಕರಣ ಶುಲ್ಕ ಕೊಡಬೇಕಾಗುತ್ತದೆ. ಹೀಗಾಗಿ 500 ಡಾಲರ್‌ಗಳ ಡಿಮಾಂಡ್ ಡ್ರಾಫ್ಟ್ ಕಳಿಸಿ ಒಂದು ಮಿಲಿಯನ್ ಡಾಲರ್ ಹಣ ನಿಮ್ಮ ಬ್ಯಾಂಕ್ ಅಕೌಂಟ್‌ಗೆ ಜಮಾ ಮಾಡುತ್ತೇವೆ ಎಂದು ತಿಳಿಸುತ್ತಾರೆ. ಒಂದು ವೇಳೆ ಹಣ ಕಟ್ಟಿದರೆ ನಮ್ಮ ಹಣ ಕೈಬಿಟ್ಟಂತೆಯೇ. ಮೊನ್ನೆ ಇದೇ ರೀತಿ ಪ್ರಕರಣವು ರಾಜ್ಯದ ಮಹಿಳಾ ಆಯೋಗದ ಕಚೇರಿಗೆ ಬಂದಿತ್ತು. ಅಪರ್ಣ ಎನ್ನುವ ಪದವೀಧರೆಗೆ ಇಂಟರ್‌ನೆಟ್‌ನಲ್ಲಿ ಬಹುಮಾನ ಗೆದ್ದ ಬಗ್ಗೆ ಮಾಹಿತಿ ಬಂದ ಕೂಡಲೇ ಆಕೆ ಇ-ಮೇಲ್ ಕಳುಹಿಸಿದವರು ತಿಳಿಸಿದ ವಿಳಾಸಕ್ಕೆ ಹಣ ಕಳಿಸಿದಳು. ನಂತರ ಪದೇ ಪದೇ ಇನ್ನೂ ಹಣ ಕೊಡಿ, ಇನ್ನೂ ಹಣ ಕೊಡಿ ಎಂದು ಒತ್ತಾಯ ಬಂದಾಗ ಆಕೆಗೆ ಅನುಮಾನ ಬಂದು ಮಹಿಳಾ ಆಯೋಗಕ್ಕೆ ದೂರಿತ್ತಳು. ಆಕೆಯನ್ನು ವಿಚಾರಿಸಿದಾಗ, ಆಕೆ ಸುಮಾರು ಒಂದೂವರೆ ಲಕ್ಷ ರೂ.ಗಳನ್ನು ಇಂಗ್ಲೆಂಡ್‌ನಲ್ಲಿರುವ ವ್ಯಕ್ತಿಯೊಬ್ಬನಿಗೆ ಕಳಿಸಿ ಕೈಸುಟ್ಟುಕೊಂಡಿದ್ದಳು. ಹೀಗೆ ಮೋಸ ಹೋದಾಗ ನಾವು ಕಳೆದುಕೊಂಡ ಹಣ ವಾಪಸ್ಸು ಬರುವುದು ದುಸ್ತರ.

ಇ-ಮೇಲ್ ಮೂಲಕ ಇದೇ ರೀತಿ ಬೇರೆ ಬೇರೆ ರೀತಿಯ ಪತ್ರಗಳು ಬಂದು ನಾವು ಹಣವನ್ನು ಕಳಿಸುವಂತೆ ಮಾಡುವಂತೆ ಪುಸಲಾಯಿಸಲಾಗುತ್ತದೆ. ಗಮನಿಸಬೇಕಾದ ಅಂಶವೆಂದರೆ ವಿನಾಃಕಾರಣ ಯಾರೂ ನಮಗೆ ಅಪಾರ ಪ್ರಮಾಣದ ಹಣವನ್ನು ನೀಡುವುದಿಲ್ಲ. ಈ ಮಾತನ್ನು ಅರ್ಥ ಮಾಡಿಕೊಂಡು ಇಂಟರ್‌ನೆಟ್ ಉಪಯೋಗ ಮಾಡುವವರು ಲಾಟರಿಯಲ್ಲಿ ಬಹುಮಾನ ಬಂದಿದೆ ಎಂಬಿತ್ಯಾದಿ ಮೆಸೇಜ್‌ಗಳನ್ನು ಕೂಡಲೇ ಡಿಲೀಟ್ ಮಾಡುವುದು ಉಚಿತ. ಹಣ ಕಳುಹಿಸಿದರೆ ಮೋಸ ಹೋದಂತೆಯೇ ಎಂದು ನಾವು ಅರಿಯಲೇಬೇಕು.

ಇಂಟರ್‌ನೆಟ್ ಮೂಲಕ ಬ್ಲೂ ಫಿಲಂಗಳನ್ನು ಹಾಗೂ ಲೈಂಗಿಕ ಪ್ರಚೋದಕ ಔಷಧಿಗಳಾದ ವಯಾಗ್ರಾ ಮುಂತಾದವುಗಳನ್ನು ವ್ಯಾಪಕವಾಗಿ ಮಾರಾಟ ಮಾಡಲಾಗುತ್ತದೆ. ಮಾರಾಟಗಾರರ ಮಾತುಗಳಿಗೆ ಮರುಳಾಗಿ ಒಮ್ಮೆ ಇಂತಹ ವಸ್ತುಗಳನ್ನು ಖರೀದಿ ಮಾಡಿದರೆ ಪದೇ ಪದೇ ತೊಂದರೆಗೆ ಒಳಗಾಗುವುದು ಖಚಿತವಾದದ್ದು. ಇದಲ್ಲದೆ ಅಫೀಮು, ಗಾಂಜಾ ಮುಂತಾದ ಮಾದಕ ದ್ರವ್ಯಗಳ ವ್ಯವಹಾರಕ್ಕೂ ಇಂಟರ್‌ನೆಟ್ ಬಳಕೆಯಾಗುತ್ತದೆ.

2000-06 ರ ಅವಧಿಯ ಆರು ವರ್ಷಗಳ ಅಂಕಿಅಂಶಗಳ ಪ್ರಕಾರ ಇಂಟರ್‌ನೆಟ್ ತೊಂದರೆಗೆ ಒಳಗಾಗಿರುವ ವ್ಯಕ್ತಿಗಳಲ್ಲಿ ಶೇಕಡ 74 ರಷ್ಟು ಸ್ತ್ರೀಯರೇ. ಇಂಟರ್ ನೆಟ್ ಮೂಲಕ ತೊಂದರೆ ಕೊಡುವವರಲ್ಲಿ ಶೇಕಡ 52 ರಷ್ಟು ಪುರುಷರು ಇದ್ದರೆ; ಶೇಕಡ 28 ರಷ್ಟು ಸ್ತ್ರೀಯರೂ ಇರುವುದು ಗಮನಾರ್ಹ. ತೊಂದರೆಗೆ ಒಳಗಾಗುವ ವ್ಯಕ್ತಿಗಳಲ್ಲಿ ಶೇಕಡ 46 ರಷ್ಟು ಜನ 18 ರಿಂದ 30 ವಯಸ್ಸಿನ ಒಳಗೆ ಇದ್ದರೆ; ಶೇಕಡ 28 ರಷ್ಟು ಜನ 31 ರಿಂದ 40 ವರ್ಷ ವಯಸ್ಸಿನ ಒಳಗಡೆ ಇದ್ದಾರೆ. ತೊಂದರೆಗೆ ಒಳಗಾದ ಸ್ತ್ರೀಯರಲ್ಲಿ ಶೇಕಡ 35 ರಷ್ಟು ಅವಿವಾಹಿತರಿದ್ದರೆ ಶೇಕಡ 8 ರಷ್ಟು ವಿವಾಹ ವಿಚ್ಛೇದನ ಪಡೆದವರಾಗಿರುತ್ತಾರೆ. ಮದುವೆಯಾದ ಮಹಿಳೆಯರ ಸಂಖ್ಯೆ ಶೇಕಡ ೨೫ ರಷ್ಟು. ಇಂಟರ್‌ನೆಟ್ ಮೂಲಕ ತೊಂದರೆ

ಕೊಡುವ ವ್ಯಕ್ತಿಗಳಲ್ಲಿ ಶೇಕಡ ೫೦ ರಷ್ಟು ಜನ ತೊಂದರೆ ಕೊಟ್ಟ ವ್ಯಕ್ತಿಗೆ ಪರಿಚಯ ಇರುವವರೇ ಆಗಿರುತ್ತಾರೆ. ಮೇಲ್ಕಾಣಿಸಿದ ಈ ಅಂಕಿಅಂಶಗಳು ಅಮೇರಿಕಾ ದೇಶಕ್ಕೆ ಸಂಬಂಧಿಸಿದ್ದೇ ಆದರೂ ನಮ್ಮ ದೇಶಕ್ಕೂ ಅನ್ವಯವಾಗುತ್ತದೆ ಎನ್ನಬಹುದು.

ಇಂಟರ್‌ನೆಟ್ ಮೂಲಕ ಪೀಡಿಸುವ ಅಪರಾಧಗಳನ್ನು ತಡೆಗಟ್ಟಬೇಕಾದರೆ ಈ ಕೆಳಕಂಡ ಅಂಶಗಳನ್ನು ನೆನಪಿನಲ್ಲಿಟ್ಟುಕೊಳ್ಳಲೇ ಬೇಕು.

ಇಂಟರ್‌ನೆಟ್ ಮೂಲಕ ನಾವು ಸಂಧಿಸುವವರು ಅಪರಿಚಿತರು ಎಂದು ಭಾವಿಸಬೇಕು ಅವರುಗಳು ನಮ್ಮ ಜೊತೆ ಗೆಳೆತನಕ್ಕಾಗಿ ಬಂದರೆ ಸಂಶಯದಿಂದ ನೋಡಬೇಕು

ಇಂಟರ್‌ನೆಟ್ ಉಪಯೋಗ ಮಾಡುವಾಗ ಅಡ್ಡ ಹೆಸರು ಅಥವಾ ಬೇರೆ ಹೆಸರಿನಲ್ಲಿ ವ್ಯವಹಾರ ಮಾಡಬೇಕು. ಯಾವುದೇ ಕಾರಣಕ್ಕಾಗಿಯೂ ನಮ್ಮ ನಿಜ ನಾಮದೇಯ ಹಾಗೂ ಇತರ ವೈಯಕ್ತಿಕ ವಿವರಗಳನ್ನು ಕೊಡಬಾರದು.

ಯಾರಾದರೂ ಇಂಟರ್‌ನೆಟ್ ಮೂಲಕ ಗೆಳತನ ಬೆಳೆಸಿ ನಿಮ್ಮನ್ನು ವೈಯಕ್ತಿಕ ಭೇಟಿ ಮಾಡಲು ಹೇಳಿದಾಗ ಅಂತಹವರನ್ನು ಒಬ್ಬಂಟಿಗರಾಗಿ ಎಂದಿಗೂ ಭೇಟಿ ಆಗಬಾರದು

ಪ್ರೈವೇಟ್ ಚಾಟ್ ರೂಮ್‌ಗಳಿಗೆ ಹೋಗಲೇಬಾರದು.

ಅಪರಿಚಿತರಿಂದ ಬಂದಂತಹ ಇ-ಮೇಲ್ ಗಳನ್ನು ತೆರೆಯಲೇ ಬಾರದು. ಎಷ್ಟೋ ಬಾರಿ ಈ ಇ-ಮೇಲ್‌ಗಳಲ್ಲಿ ವೈರಸ್‌ಗಳು ಇರಬಹುದು ಅಥವಾ ಬೇರಿತರ ಕೆಟ್ಟ ವಿಷಯಗಳು ಇರಬಹುದು

ಒಂದು ವೇಳೆ ಇಂಟರ್‌ನೆಟ್ ಮೂಲಕ ತೊಂದರೆಗೆ ಒಳಗಾದರೆ ಕೂಡಲೇ ಆ ಬಗ್ಗೆ ಗೆಳೆಯರೊಡನೆ ಮಾತನಾಡಿ ಪರಿಹಾರ ಕಂಡುಕೊಳ್ಳಬೇಕು.

ಇ-ಮೇಲ್‌ಗಳನ್ನು ತೆರೆಯುವಾಗ ಇ-ಮೇಲ್‌ಗಳಲ್ಲಿ ಕಂಪ್ಲೀಟ್ ಹೆಡರ್ ಅನ್ನು ನೋಡಬೇಕು.

ತೀವ್ರ ತೊಂದರೆಗೆ ಒಳಗಾಗುವವರು ಕೂಡಲೇ ಹತ್ತಿರದ ಪೋಲೀಸರನ್ನು ಸಂಪರ್ಕಿಸಬೇಕು.

ಒಂದು ವೇಳೆ ಈ ಮೇಲ್ ನಿಜವಾದ ವಿಳಾಸ ನೋಡಬೇಕಾದರೆ ಈ ಮೇಲ್ ಬಲಗಡೆ ಇರುವ  ಕಂಪ್ಲೀಟ್ ಹೆಡರ್ ನೋಡಿದರೆ ಅದರಲ್ಲಿ ಎಲ್ಲಿಂದ ನಿಮಗೆ ಇ-ಮೇಲ್ ಬಂದಿದೆ ಎನ್ನುವ ವಿವರಗಳು ಲಭ್ಯವಾಗುತ್ತದೆ.  ಪೋಲೀಸರಿಗೆ ದೂರು ನೀಡುವಾಗ ಪೂರ್ಣ ಹೆಡರ್ ವಿವರಗಳು ತುಂಬಾ ಉಪಯೋಗಕ್ಕೆ ಬರುತ್ತದೆ.

ಕಚೇರಿಗಳಲ್ಲಿ ಕೆಲಸ ಮಾಡುವ ಸ್ತ್ರೀಯರು ತೊಂದರೆಗಳಿಗೆ ಒಳಗಾಗುವುದನ್ನು ತಪ್ಪಿಸಲು ಆಯಾ ಕಚೇರಿಗಳ ಸಿಸ್ಟಂ ಅಡ್ಮಿನಿಸ್ಟ್ರೇಟರ್‌ಗಳು ಕೆಲವೊಂದು ನೀತಿ ನಿಯಮಗಳನ್ನು ಅಳವಡಿಸಿಕೊಳ್ಳಬಹುದು. Women Halting On-line abuse [WHOA] ಎನ್ನುವ ವೆಬ್‌ಸೈಟ್ ಸ್ತ್ರೀಯರು ಯಾವ ರೀತಿ ತಮಗಾಗುವ ಕಿರುಕುಳವನ್ನು ತಡೆಗಟ್ಟಬಹುದು ಎಂಬ ಸೂಚನೆಗಳನ್ನು

ನೀಡುತ್ತದೆ. ಈ ವೆಬ್‌ಸೈಟ್ ಮೂಲಕ System Administrators ಗಳು ತಮಗೆ ಅನುಕೂಲವಾಗುವಂತಹ ನೀತಿ ನಿಯಮಗಳನ್ನು ಅಳವಡಿಸಿಕೊಳ್ಳಬಹುದು.

ಲೈಂಗಿಕ ಕಿರುಕುಳವನ್ನು ತಪ್ಪಿಸುವ ಉದ್ದೇಶದಿಂದ ಹೆಣ್ಣುಮಕ್ಕಳು ತಮ್ಮದೇ ಆದ ವೆಬ್‌ಸೈಟ್‌ಗಳು, ಸಮಾಚಾರ ತಂಡಗಳು, ಚಾಟ್ ಚಾನೆಲ್‌ಗಳನ್ನು ರೂಪಿಸಿಕೊಳ್ಳುತ್ತಿದ್ದಾರೆ.

ತಮ್ಮನ್ನು ತಾವು ಸೈಬರ್ ವಾತಾವರಣದ ಅಪಾಯದಿಂದ ರಕ್ಷಿಸಿಕೊಳ್ಳಬೇಕಾದಲ್ಲಿ ಸ್ತ್ರೀಯರು ಸೈಬರ್ ಪ್ರಪಂಚದ ಅಪಾಯಗಳನ್ನು ಅರಿಯುವುದು ಅತಿ ಮುಖ್ಯ. ಇಂತಹ ಅರಿವಿನಿಂದಲೇ ಅಪರಾಧಗಳ ತಡೆ ಸಾಧ್ಯ.

# 13

## ಶಾಲೆಗಳಿಗೂ ಬರುತ್ತಿರುವ ಬಂದೂಕು ಸಂಸ್ಕೃತಿ

ಫೆಬ್ರವರಿ 2 ರಂದು ಬೆಂಗಳೂರಿನಲ್ಲಿ ಶಾಲಾ ಬಾಲಕನೊಬ್ಬ ತನ್ನ ಮನೆಯ ಮಾಳಿಗೆಯ ಮೇಲೆ ನಿಂತು ಏರ್‌ಗನ್ ಸಹಾಯದಿಂದ ತನ್ನ ಇಬ್ಬರು ಸಹಪಾಠಿಗಳ ಮೇಲೆ ಗುಂಡು ಹಾರಿಸಿ ಅವರಿಗೆ ಗಾಯಗೊಳಿಸಿದ ಘಟನೆ ವರದಿಯಾಗಿದೆ. ದೆಹಲಿಯ ಪಕ್ಕದಲ್ಲೇ ಇರುವ ಗುಡಗಾಂವ್ ನಗರದ ಶಾಲೆಯೊಂದರಲ್ಲಿ ಇಂತಹದ್ದೇ ಘಟನೆ ಕೆಲವೇ ತಿಂಗಳುಗಳ ಹಿಂದೆ ನಡೆದಿದ್ದನ್ನು ಇಲ್ಲಿ ಸ್ಮರಿಸಬಹುದು. ಗುಡಗಾಂವ್ ಘಟನೆಯಲ್ಲಿ 2007ರ ಡಿಸೆಂಬರ್ 11 ರಂದು ಅಭಿಷೇಕ್ ತ್ಯಾಗಿ ಎನ್ನುವ 8ನೇ ತರಗತಿಯ ವಿದ್ಯಾರ್ಥಿಯ ಮೇಲೆ ಅವನ ಇಬ್ಬರು ಸಹಪಾಠಿಗಳು ಹಲ್ಲೆ ನಡೆಸಿ ಆತನ ಅಮಾನುಷ ಹತ್ಯೆ ಮಾಡಿದ್ದರು. ಹಲ್ಲೆ ಮಾಡಿದ ಆಕಾಶ್ ಯಾದವ್ ತನ್ನ ಮನೆಯಿಂದ ತನ್ನ ತಂದೆಗೆ ಸೇರಿದ ಪರವಾನಗಿ ಪಡೆದ ರಿವಾಲ್ವರನ್ನು ತನ್ನ ಕಾಲುಚೀಲದಲ್ಲಿ ಮುಚ್ಚಿಟ್ಟುಕೊಂಡು ಶಾಲೆಗೆ ಬಂದು ಅದನ್ನು ಶಾಲೆಯ ಶೌಚಾಲಯದಲ್ಲಿ ಅಡಗಿಸಿ ಶಾಲೆ ಮುಗಿದ ನಂತರ ವಿದ್ಯಾರ್ಥಿಗಳು ಮನೆಗೆ ಹೊರಟಾಗ ಅಭಿಷೇಕ್‌ನ ಜೊತೆ ಜಗಳವಾಡಿ ನಾಲ್ಕು ಗುಂಡುಗಳನ್ನು ಅಭಿಷೇಕ್ ಮೇಲೆ ಹಾರಿಸಿ, ಅನಂತರ ರಿವಾಲ್ವರನ್ನು ತನ್ನ ಇನ್ನೊಬ್ಬ ಸಹಪಾಠಿಗೆ ನೀಡಿ ಇನ್ನೊಬ್ಬನೂ ಅಭಿಷೇಕ್ ತ್ಯಾಗಿಗೆ ಗುಂಡು ಹಾರಿಸಲು ಪ್ರಚೋದಿಸಿದ್ದ. ಈ ಘಟನೆ ಶಾಲೆಯಲ್ಲೇ ನಡೆಯಿತು. ಆರೋಪಿಗಳು ಈಗ ಬಂಧನದಲ್ಲಿದ್ದಾರೆ.

ಬೆಂಗಳೂರಿನಲ್ಲಿ ತನ್ನ ಸಹಪಾಠಿಗಳ ಮೇಲೆ ಗುಂಡು ಹಾರಿಸಿದ ಬಾಲಕ ತನ್ನ ಮನೆಯ ಮಾಳಿಗೆಯ ಮೇಲೆ ಟಾರ್ಗೆಟ್ ಒಂದನ್ನು ಇಟ್ಟು ಹೊಡೆಯುವುದಾಗಿ ಏರ್‌ಗನ್ ಮಾರಾಟ [illegible]

ಟಾರ್ಗೆಟ್‌ಗೆ ಗುಂಡುಗಳನ್ನು ಹಾರಿಸಿ ತನ್ನ ಗುರಿ ಚಲಾಯಿಸುವ ಕುಶಲತೆಯನ್ನು ಉತ್ತಮ ಪಡಿಸಿಕೊಂಡಿದ್ದಾನೆಂದು ಹೇಳಲಾಗಿದೆ. ಶಾಲೆಯಲ್ಲಿ ತನ್ನನ್ನು ಪೀಡಿಸುತ್ತಿದ್ದ ಇಬ್ಬರು ಸಹಪಾಠಿಗಳು ಶಾಲೆಯಿಂದ ಹೊರಬರುವ ಸಮಯವನ್ನು ಸಾಧಿಸಿ ಆರೋಪಿ ತನ್ನ ಮನೆಯ ಮಾಳಿಗೆಯಿಂದ ಅವರಿಬ್ಬರ ಮೇಲೂ ಗುರಿ ಇಟ್ಟು ಗುಂಡು ಹಾರಿಸಿದನೆಂದು ವರದಿಯಾಗಿದೆ. ಬಾಲಕ ಉಪಯೋಗಿಸಿದ ಅಸ್ತ್ರವು ಏರ್‌ಗನ್ ಆದ್ದರಿಂದ ಈ ಘಟನೆಯಲ್ಲಿ ಸಾವು ಸಂಭವಿಸದೇ ಕೇವಲ ಗಾಯಗಳಾದವು. ಏರ್‌ಗನ್ ಉಪಯೋಗಿಸಲು ಯಾವುದೇ ಪರವಾನಗಿ ಅವಶ್ಯಕತೆ ಇಲ್ಲದ್ದರಿಂದ ಬಾಲಕನ ಕೃತ್ಯ ಯಾವುದೇ ಅಪರಾಧವಾಗುವುದಿಲ್ಲವೆಂದು ಮೊದಲಿಗೆ ಸ್ಥಳೀಯ ಪೊಲೀಸರು ದೂರು ದಾಖಲಿಸಿರಲಿಲ್ಲವೆಂದು ವರದಿಯಾಗಿದೆ. ಇದು ಆಶ್ಚರ್ಯಕರ.

ಹದಿಹರೆಯದ ಶಾಲಾ ವಿದ್ಯಾರ್ಥಿಗಳು ಬಂದೂಕು ಉಪಯೋಗಿಸಿ ತಮ್ಮ ಸಹಪಾಠಿಗಳನ್ನಾಗಲೀ ಅಥವಾ ಶಿಕ್ಷಕ ಶಿಕ್ಷಕಿಯರನ್ನಾಗಲೀ ಕೊಲ್ಲುವಂತಹ ಪ್ರಕರಣಗಳು ಈ ಹಿಂದೆ ಅಮೇರಿಕಾ ದೇಶದಿಂದ ಹೆಚ್ಚಾಗಿ ವರದಿಯಾಗುತ್ತಿದ್ದವು. ಇಂತಹ ಪ್ರಕರಣಗಳು ನಮ್ಮ ಮನೆಯ ಬಾಗಿಲಿಗೇ ಬಂದಿರುವುದು ಆತಂಕದ ವಿಷಯ.

ಪ್ರಪಂಚ ಚಿಕ್ಕದಾಗುತ್ತಿರುವುದಕ್ಕೆ ಒಂದು ನಿದರ್ಶನ ಎಂದು ಭಾವಿಸಿ ನಾವು ಆತಂಕ ಪಡಬೇಕಾದ ಕಾಲ ಬಂದಿದೆ. ಶ್ರೀಮಂತ ಹಾಗೂ ವಿದ್ಯಾವಂತ ಕುಟುಂಬಗಳಿಗೆ ಇಂತಹ ಪ್ರಕರಣಗಳ ಆರೋಪಿಗಳು ಸೇರಿರುವುದು ಗಮನಾರ್ಹ.

ಹಲವಾರು ಬಾಲಕರು ಶಾಲೆಯನ್ನು ಮಧ್ಯದಲ್ಲೇ ತೊರೆದು ರೌಡಿಗ್ಯಾಂಗ್‌ಗಳಿಗೆ ಸೇರಿ ಕಳ್ಳತನ, ದರೋಡೆ, ಕೊಲೆ, ಅತ್ಯಾಚಾರ ಮುಂತಾದ ಅಪರಾಧ ಮಾಡುವುದು ಸಾಮಾನ್ಯವಾಗಿ ಬಿಟ್ಟಿವೆ. ಆದರೆ ಶಾಲೆಗಳಲ್ಲಿ ಬಂದೂಕನ್ನು ಉಪಯೋಗಿಸುವ ಸಂಸ್ಕೃತಿ ಇತ್ತೀಚೆಗಷ್ಟೇ ಬೆಳೆಯುತ್ತಿದ್ದು, ಇದನ್ನು ಎಲ್ಲರೂ ಸೇರಿ ನಿಗ್ರಹಿಸಬೇಕಾಗಿದೆ.

ಇಂತಹ ಕೃತ್ಯಗಳನ್ನು ನಡೆಸುವ ಬಾಲಕ ಬಾಲಕಿಯರು ಮಾನಸಿಕ ಒತ್ತಡಗಳಿಗೆ ಬಲಿಯಾಗಿರುತ್ತಾರೆ ಹಾಗೂ ಅವರ ಮನೆಗಳಲ್ಲಿ ಅವರಿಗೆ ಸಿಗಬೇಕಾದ ಗಮನ ಹಾಗೂ ಪ್ರೀತಿ ದೊರೆತಿರುವುದಿಲ್ಲ ಎನ್ನುವುದು ನಿರ್ವಿವಾದ. ಇಂದಿನ ದಿನಗಳಲ್ಲಿ ಕುಟುಂಬದ ಸದಸ್ಯರುಗಳ ಸಂಖ್ಯೆ ಕಡಿಮೆಯಾಗುತ್ತಿದ್ದು, ತಂದೆ ತಾಯಿಗಳು ಇಬ್ಬರೂ ನೌಕರಿ ಮಾಡುತ್ತಿದ್ದು ಮಕ್ಕಳ ವಿದ್ಯಾಭ್ಯಾಸ ಹಾಗೂ ಅವರ ಬೆಳವಣಿಗೆ ಮೇಲೆ ಸಾಕಷ್ಟು ಗಮನ ಹರಿಸಲು ಸಾಧ್ಯವಿಲ್ಲದೆ, ಕೆಲವು  ಮಕ್ಕಳು ಅಡ್ಡದಾರಿ ಹಿಡಿಯುತ್ತಿದ್ದಾರೆ. ತಂದೆ ತಾಯಿಗಳು ಶಾಲೆಯಲ್ಲಿ ನಿಯಮಿತವಾಗಿ ನಡೆಯುವ ಪೋಷಕ/ಶಿಕ್ಷಕ ಸಭೆಗಳಿಗೆ ಹಾಜರಾದಾಗ ಅವರು ತಮ್ಮ ಮಕ್ಕಳು ಶಾಲೆಯಲ್ಲಿ ಯಾವ ರೀತಿ ನಡೆದುಕೊಳ್ಳುತ್ತಿದ್ದಾರೆನ್ನುವ ವಿಷಯ ತಿಳಿಯಬಹುದು. ಎಷ್ಟೋ ಬಾರಿ ಮನೆಯಲ್ಲಿ ಒಳ್ಳೆಯ ನಡವಳಿಕೆ ಇರುವ ಮಕ್ಕಳು ಶಾಲೆಗಳಲ್ಲಿ ಕೆಟ್ಟ ನಡವಳಿಕೆ ಪ್ರದರ್ಶಿಸಬಹುದು. ಅದೇ ರೀತಿ ಶಾಲೆಯಲ್ಲಿ ಉತ್ತಮ ನಡವಳಿಕೆ ಹೊಂದಿರುವವರು ಮನೆಯಲ್ಲಿ ತಂದೆತಾಯಿಗಳಿಗೆ ಸವಾಲಾಗಬಹುದು. ಶಾಲಾ ಮಕ್ಕಳ ನಡವಳಿಕೆಯನ್ನು ಅತ್ಯಂತ ಸೂಕ್ಷ್ಮವಾಗಿ ಶಿಕ್ಷಕ ಶಿಕ್ಷಕಿಯರಲ್ಲದೇ ತಂದೆತಾಯಿಗಳು ಗಮನಿಸಲೇ ಬೇಕಾಗಿದೆ.

ಬಾಲಕರುಗಳಲ್ಲಿ ಹೆಚ್ಚುತ್ತಿರುವ ಅಪರಾಧ ಪ್ರವೃತ್ತಿಗೆ ಮಾಧ್ಯಮಗಳು ಕಾರಣವೆಂದು ಹಲವಾರು ಶಿಕ್ಷಕರು ಭಾವಿಸುತ್ತಾರೆ. ಇಂದಿನ ಸಿನಿಮಾಗಳಲ್ಲಿ ಕ್ರೌರ್ಯದ ವೈಭವೀಕರಣವಾಗುತ್ತಿರುವಾಗ, ಟಿವಿ ಚಾನಲ್‌ಗಳಲ್ಲಿ ಕ್ರೌರ್ಯದ ವಿವಿಧ ಮುಖಗಳನ್ನು ಎಳೆ ಎಳೆಯಾಗಿ ಬಿಡಿಸಿ ತೋರಿಸುತ್ತಿರುವಾಗ, ಒಂದು ಅಪರಾಧ ಹೇಗೆ ನಡೆಯಿತು ಎಂದು ಬಣ್ಣ ಬಣ್ಣದ ವರದಿಗಳು ಮಾಧ್ಯಮಗಳಲ್ಲಿ ಬಂದಾಗ ಹದಿಹರೆಯದ ಮಕ್ಕಳು ಅವುಗಳ ಪ್ರಭಾವಕ್ಕೆ ಒಳಪಡುತ್ತಾರೆ. ಹೀಗಾಗಿ ಮಾಧ್ಯಮಗಳು ತಾವೇ ತಾವಾಗಿ ಇಂತಹ ವರದಿಗಳನ್ನು ಪ್ರಸಾರ ಮಾಡುವ ಮುನ್ನ ಸ್ವಯಂಕಡಿವಾಣ ಹಾಕಿಕೊಳ್ಳಬೇಕಾದ ಅವಶ್ಯಕತೆ ತೋರಿಬರುತ್ತಿದೆ.

ಮಕ್ಕಳು ಆಟಿಕೆಯನ್ನು ಕೊಡಿಸು ಎಂದು ಕೇಳಿದಾಗ ತಂದೆತಾಯಂದಿರು ಆಟದ ಬಂದೂಕುಗಳನ್ನು ಕೊಡಿಸುತ್ತಾರೆ. ಇದು ತಪ್ಪು. ಅಂತೆಯೇ ತಮ್ಮ ಮನೆಗಳಲ್ಲಿ ಶಸ್ತ್ರಾಸ್ತ್ರ ಹೊಂದಿರುವವರು ಶಸ್ತ್ರಾಸ್ತ್ರದ ಪರವಾನಗೆ ಕೊಡುವಾಗ ಪಾಲಿಸಬೇಕಾದ ಜವಾಬ್ದಾರಿಗಳನ್ನು ಅನುಸರಿಸಲೇ ಬೇಕು. ಪರವಾನಗಿ ಹೊಂದಿದ ಆಯುಧಗಳನ್ನು ಮಕ್ಕಳ ಕೈಗೆ ಸಿಗದಂತಹ ಸ್ಥಳಗಳಲ್ಲಿ ಇಡಬೇಕು. ಕೆಲವು ಪಾಲಕರು ತಮ್ಮ ಮಕ್ಕಳ ಕೈಗೆ ನಿಜವಾದ ಶಸ್ತ್ರಾಸ್ತ್ರಗಳನ್ನು ಕೊಟ್ಟು ಅವುಗಳನ್ನು ಚಲಾಯಿಸುವುದು ಹೇಗೆ ಎಂದು ಹೇಳಿಕೊಡುವ ಸಂದರ್ಭಗಳನ್ನು ನಾವು ಗಮನಿಸಿದ್ದೇವೆ. ಬೆಂಗಳೂರಿನ ಪ್ರಕರಣವನ್ನೇ ತೆಗೆದುಕೊಳ್ಳುವುದಾದರೆ ತನ್ನ ಮನೆಯ ಮೇಲೆಯೇ ಟಾರ್ಗೆಟ್ ಅಭ್ಯಾಸ ಮಾಡುತ್ತಿದ್ದ ಬಾಲಕನನ್ನು ಆತನ ತಂದೆ ತಾಯಿಗಳು ಹದ್ದುಬಸ್ತಿನಲ್ಲಿ ಇಡದೇ ಹೋಗಿದ್ದು ಗಂಭೀರವಾದ ವಿಷಯ. ಬಾಲಕನ ಕೈಗೆ ಶಸ್ತ್ರಾಸ್ತ್ರಗಳು ಸುಲಭವಾಗಿ ದೊರಕುವಂತೆ ಮಾಡಿದ್ದು ಇನ್ನೂ ಗಂಭೀರವಾದ ವಿಷಯ.

ಹೀಗಾಗಿ ಈ ಅಪರಾಧದಲ್ಲಿ ತಂದೆ ತಾಯಿಗಳೂ ಆರೋಪಿಗಳಾಗುತ್ತಾರೆ. ಪರವಾನಗಿ ಹೊಂದಿದ ಶಸ್ತ್ರಾಸ್ತ್ರವನ್ನು ದುರುಪಯೋಗ ಮಾಡಿಕೊಂಡ ಆರೋಪದ ಮೇಲೆ ಪೊಲೀಸರು ಪರವಾನಗಿದಾರನ ಮೇಲೂ ಭಾರತದ ಶಸ್ತ್ರಾಸ್ತ್ರ ಅಧಿನಿಯಮದನ್ವಯ ಕ್ರಮ ತೆಗೆದುಕೊಳ್ಳಬಹುದು

ಇಂದಿನ ದಿನಗಳಲ್ಲಿ ಮಕ್ಕಳ ಸರ್ವತ್ರ ಬೆಳವಣಿಗೆಗಿಂತ ಪಠ್ಯಕ್ರಮವನ್ನು ಕಲಿಯುವುದರ ಬಗ್ಗೆಯೇ ಹೆಚ್ಚು ಒತ್ತು ನೀಡಲಾಗುತ್ತಿದೆ. ಮಕ್ಕಳಿಗೆ ಉತ್ತಮ ಗುಣಗಳನ್ನು ಕಲಿಸಲಾಗುತ್ತಿಲ್ಲ ಎನ್ನುವ ದೂರುಗಳೂ ಕೇಳಿ ಬರುತ್ತಿವೆ. ವಿದ್ಯಾರ್ಥಿಗಳ ಸಂಖ್ಯೆಯು ಗಮನಾರ್ಹವಾಗಿ ಬೆಳೆಯುತ್ತಿದ್ದು ಶಿಕ್ಷಕರಿಗೆ ತಮ್ಮ ಪ್ರತಿಯೊಬ್ಬ ವಿದ್ಯಾರ್ಥಿಯ ಮೇಲೂ ಗಮನ ಹರಿಸಲು ಅವಕಾಶವಾಗುತ್ತಿಲ್ಲ. ಶಾಲೆಗಳಲ್ಲಿ ವಿದ್ಯಾರ್ಥಿ ಹಾಗೂ ಶಿಕ್ಷಕರ ಮಧ್ಯೆ ಈಗಿರುವ ಅನುಪಾತವು ಕಂಡಿತವಾಗಿಯೂ ಬದಲಾಗಬೇಕಾಗಿದೆ.

ಬಾಲಕರಲ್ಲಿ ಮೂಡುತ್ತಿರುವ ಬಂದೂಕು ಸಂಸ್ಕೃತಿ ಹೋಗಬೇಕಾದಲ್ಲಿ ಬಂದೂಕು ಪರವಾನಗಿಯನ್ನು ನೀಡಬೇಕಾದಾಗ ಹೆಚ್ಚಿನ ಮುತುವರ್ಜಿಯನ್ನು ಪೊಲೀಸ್ ಇಲಾಖೆ ವಹಿಸಿಕೊಳ್ಳಬೇಕಾಗುತ್ತದೆ. ಲೈಸನ್ಸ್‌ದಾರ ಬಂದೂಕು/ರಿವಾಲ್ವರ್ ಖರೀದಿಸಿ ಅದನ್ನು ನೊಂದಾಯಿಸಲು ಪೊಲೀಸ್ ಠಾಣೆಗೆ ಬಂದಾಗ ಆಯುಧವನ್ನು ಹೇಗೆ ಎಚ್ಚರದಿಂದ ಇಟ್ಟುಕೊಳ್ಳಬೇಕು ಎನ್ನುವ ತಿಳುವಳಿಕೆಯನ್ನು ನೀಡಬೇಕು. ಎಷ್ಟೋ ಬಾರಿ ಆಯುಧಗಳನ್ನು,

ಸರಿಯಾಗಿ ಉಪಯೋಗಿಸದೆಯೇ ಲೈಸನ್ಸುದಾರ ಅಥವಾ ಅವನ ಕುಟುಂಬವರ್ಗ ಆಕಸ್ಮಿಕ ಫೈರಿಂಗ್‌ಗೆ ತುತ್ತಾಗಿರುವ ಪ್ರಕರಣಗಳು ನಮ್ಮ ಮುಂದಿವೆ. ಬಂದೂಕು ಒಂದು ಆಟಿಕೆಯಲ್ಲ ಎಂದು ಎಲ್ಲರೂ ತಿಳಿಯಬೇಕಾಗಿದೆ. ಯಾವುದೇ ಕಾರಣಕ್ಕೂ ಮಕ್ಕಳ ಕೈಗೆ ಆಯುಧಗಳು ಸಿಗದಂತೆ ಎಚ್ಚರಿಕೆ ವಹಿಸಬೇಕಾಗಿದೆ. ಎಲ್ಲಕ್ಕೂ ಮಿಗಿಲಾಗಿ ತಂದೆ ತಾಯಂದಿರು ತಮ್ಮ ಮಕ್ಕಳ ಜತೆ ಗುಣಮಟ್ಟದ ಸಮಯ ಕಳೆದರೆ ಮಕ್ಕಳು ಅಡ್ಡದಾರಿ ಹಿಡಿಯುವುದಿಲ್ಲ.

# 14

## ಆಸಿಡ್ ಎರಚುವುದು ಗುರುತರ ಅಪರಾಧ

ಈಗ ಸುಮಾರು 15 ವರ್ಷದ ಹಿಂದಿನ ಮಾತು. ಮಿತ್ರರೊಬ್ಬರ ಮಗಳು ತನ್ನ ಮನೆಯ ಮುಂದೆ ಗೆಳತಿಯೊಂದಿಗೆ ಮಾತನಾಡುತ್ತಾ ನಿಂತಿದ್ದಾಗ, ಯಾರೋ ವ್ಯಕ್ತಿ ಹಠಾತ್ತನೆ ಬಂದು ಆಕೆಯ ಮುಖದ ಮೇಲೆ ದ್ರವವೊಂದನ್ನು ಚೆಲ್ಲಿ ಮಾಯವಾಗಿದ್ದ. ಅತ್ಯಂತ ಸ್ಫುರದ್ರೂಪಿಯಾಗಿದ್ದ ಹದಿಹರೆಯದ ಆ ಯುವತಿ ವಿನಾಕಾರಣ ಆಸಿಡ್ ದಾಳಿಗೆ ತುತ್ತಾಗಿದ್ದಳು. ಆಕೆಯನ್ನು ಕೂಡಲೇ ಆಸ್ಪತ್ರೆಗೆ ಸೇರಿಸಿ ಉತ್ತಮ ಚಿಕಿತ್ಸೆಯನ್ನು ಕೊಡಿಸಿದರೂ ಆಕೆಯ ಮುಂಚಿನ ಸೌಂದರ್ಯ ವಾಪಸ್ಸು ಬರಲಿಲ್ಲ. ಚಿಕಿತ್ಸೆಗಾಗಿ ಹಲವಾರು ವರ್ಷಗಳೇ ಬೇಕಾದವು. ಪ್ಲಾಸ್ಟಿಕ್ ಸರ್ಜರಿಗಳನ್ನು ಪದೇ ಪದೇ ಮಾಡಿದ್ದು ದುಬಾರಿ ಖರ್ಚನ್ನು ಆ ಗೆಳೆಯ ಹೊರಬೇಕಾಯಿತು. ಪೋಲೀಸರು ಪ್ರಕರಣ ದಾಖಲಿಸಿ ತನಿಖೆ ಕೈಗೊಂಡಾಗ ಆ ಯುವತಿಯ ಮೇಲೆ ಅನುರಕ್ತನಾಗಿದ್ದ, ಆಕೆಗೆ ಪರಿಚಿತನಾಗಿದ್ದ ಯುವಕನೊಬ್ಬ ಈ ಕೃತ್ಯ ಮಾಡಿದ್ದ ಎಂದು ಗೊತ್ತಾಯಿತು. ಹಲವಾರು ವರ್ಷಗಳ ಕಾಲ ಕೋರ್ಟಿನಲ್ಲಿ ಕೇಸು ನಡೆದು ಆ ಯುವಕನ ಮೇಲೆ ಅಪರಾಧ ಸಾಬೀತಾದ ಮೇಲೆ ಶಿಕ್ಷೆ ನೀಡಲಾಯಿತು. ಆ ಯುವತಿ ಅನುಭವಿಸಿದ ಕಷ್ಟವನ್ನು ನೋಡಿದರೆ ಆರೋಪಿಗೆ ಕೊಟ್ಟಂತಹ ಶಿಕ್ಷೆ ಬಹಳ ಕಡಿಮೆ ಎಂದು ಪೋಲೀಸ್ ಅಧಿಕಾರಿಯಾದ ನನಗೆ ಸಹಜವಾಗಿ ಅನಿಸಿತ್ತು.

ವ್ಯಕ್ತಿಯೊಬ್ಬನ ಮೇಲೆ ಆಸಿಡ್ ದಾಳಿ ನಡೆದಾಗ ಆ ಕೃತ್ಯವನ್ನು ಭಾರತೀಯ ದಂಡ ಸಂಹಿತೆಯ ಯಾವ ಕಂಡಿಕೆಯನ್ವಯ ಅಪರಾಧವೆಂದು ಪರಿಗಣಿಸಬೇಕು ಎನ್ನುವ ಬಗ್ಗೆ

ಪೊಲೀಸ್ ಅಧಿಕಾರಿಗಳಲ್ಲಿ ಮೂಡಿದೆ. ಸಾಮಾನ್ಯವಾಗಿ ಆಸಿಡ್ ದಾಳಿಯ ಪರಿಣಾಮವಾಗಿ ಮನುಷ್ಯನ ದೇಹವು ವಿರೂಪಗೊಳ್ಳುವ ಕಾರಣದಿಂದ ಆಸಿಡ್ ಎರಚಿ ಉಂಟುಮಾಡುವ ಗಾಯಗಳಿಗೆ ಸಂಬಂಧಿಸಿದ ಅಪರಾಧಗಳನ್ನು ಭಾರತೀಯ ದಂಡ ಸಂಹಿತೆಯ ಕಲಂ 326ರನ್ವಯ ಪರಿಗಣಿಸಲಾಗುತ್ತದೆ. (ಕಲಂ 326 ಆಯುಧವನ್ನು ಬಳಸಿ ಭಾರೀ ಗಾಯ ಉಂಟುಮಾಡುವ ಅಪರಾಧ ಎಂದು - ಆಸಿಡ್ ಅನ್ನು ಆಯುಧ ಎಂದು ಹೇಗೆ ಪರಿಗಣಿಸಬಹುದು ಎನ್ನುವ ಜಿಜ್ಞಾಸೆಯೂ ಮೂಡಿದೆ). ಈ ಅಪರಾಧ ಎಸಗಿದ ವ್ಯಕ್ತಿಗೆ ೧೦ ವರ್ಷಗಳ ಕಾಲ ಜೈಲು ಶಿಕ್ಷೆ ವಿಧಿಸಿ ದಂಡವನ್ನೂ ಹಾಕಬಹುದಾಗಿದೆ. ಆದರೆ ಹಲವಾರು ಬಾರಿ ಆರೋಪಿತರ ಪರ ವಕೀಲರು ವಾದವನ್ನು ಮಂಡಿಸಿ, ಆಸಿಡ್ ಗಾಯವು ಭಾರಿ ಗಾಯ ಅಲ್ಲವೆಂದು ವಾದಿಸಿ ಶಿಕ್ಷೆಯ ಪ್ರಮಾಣವನ್ನು ಸಾಕಷ್ಟು ತಗ್ಗಿಸುವುದರಲ್ಲಿ ಸಫಲರಾಗುತ್ತಾರೆ.

ಹೀಗಾಗಿ ಆಸಿಡ್‌ನ್ನು ಎರಚಿ ಹೆಣ್ಣುಮಕ್ಕಳನ್ನು ವಿರೂಪಗೊಳಿಸುವಂತಹ ಅಪರಾಧಗಳಿಗೆ ಸೂಕ್ತ ಶಿಕ್ಷೆ ದೊರೆಯುತ್ತಿರಲಿಲ್ಲ.

## ಹಸೀನಾ ಪ್ರಕರಣ

ಇತ್ತೀಚೆಗೆ ಅಂದರೆ 2006ರ ಆಗಸ್ಟ್‌ನಲ್ಲಿ ನ್ಯಾಯಮೂರ್ತಿ ಎಸ್.ಆರ್. ಬನ್ನೂರ್ ಮಠ್ ಹಾಗೂ ನ್ಯಾಯಮೂರ್ತಿ ಸುಭಾಷ್ ಬಿ. ಆಡಿ ಇವರುಗಳನ್ನೊಳಗೊಂಡ ಕರ್ನಾಟಕ ಹೈಕೋರ್ಟ್‌ನ ವಿಭಾಗೀಯ ಪೀಠ ಆಸಿಡ್ ಎರಚುವ ಕೇಸುಗಳಲ್ಲಿ ಮಹತ್ವದ ತೀರ್ಪು ಕೊಟ್ಟಿದೆ. ಈ ತೀರ್ಪಿನನ್ವಯ ಆಸಿಡ್ ದಾಳಿಯನ್ನು ಕೊಲೆ ನಡೆಸುವ ಪ್ರಯತ್ನ ಎಂದು ಪರಿಗಣಿಸಿ, ಕಲಂ 307 ಐಪಿಸಿ ಅನ್ವಯ ಆರೋಪಿಯನ್ನು ಜೀವಾವಧಿ ಶಿಕ್ಷೆಗೆ ಗುರಿಪಡಿಸಿದ್ದೂ ಅಲ್ಲದೇ 2,00,000 ರೂ. ನಷ್ಟ ಪರಿಹಾರ ಕೊಡಬೇಕೆಂದು ಆದೇಶಿಸಿದ್ದು, ಈ ಪ್ರಕರಣ ಹಸೀನಾ ಆಸಿಡ್ ಪ್ರಕರಣ ಎಂದು ಹೆಸರುವಾಸಿಯಾಗಿದೆ.

ಹಸೀನಾ ಮೊದಲನೇ ವರ್ಷದ ಬಿ.ಕಾಂ. ಪರೀಕ್ಷೆ ಪಾಸು ಮಾಡಿದ 20 ವರ್ಷ ವಯಸ್ಸಿನ ಯುವತಿ. ಈಕೆ ಕಂಪ್ಯೂಟರ್ ಪರಿಜ್ಞಾನ ಪಡೆದಿದ್ದು, ಬೆಂಗಳೂರಿನ ನೇಹಾ ಕಂಪ್ಯೂಟರ್ ಎಂಬ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದಳು. ಈ ಸಂಸ್ಥೆ ನಷ್ಟದಲ್ಲಿ ಇದ್ದುದರಿಂದ ಸುಮಾರು 1 ವರ್ಷ 8 ತಿಂಗಳು ಕೆಲಸ ಮಾಡಿದ ನಂತರ ಹಸೀನಾ ಹೆಚ್.ಎಂ.ಟಿ. ಲೇಔಟ್‌ನಲ್ಲಿರುವ ಇನ್ನೊಂದು ಸಂಸ್ಥೆಗೆ ಕೆಲಸಕ್ಕೆ ಸೇರಿದ್ದಳು. ನೇಹಾ ಕಂಪ್ಯೂಟರ್ಸ್ ಮಾಲೀಕ ಜೋಸೆಫ್ ರಾಡ್ರಿಗ್ಸ್ ಹಸೀನಾ ಕೆಲಸಕ್ಕೆ ಸೇರಿದ ಹೊಸ ಜಾಗಕ್ಕೆ ಬಂದು, ''ನೀನು ಮತ್ತೆ ನನ್ನ ಜೊತೆ ಕೆಲಸ ಮಾಡಬೇಕು. ನೀನು ಮನೆಯಲ್ಲಿಯೇ ಕೆಲಸ ಮಾಡಬಹುದು. ನಿನಗೆ ಒಂದು ಕಂಪ್ಯೂಟರನ್ನು ಕೊಡಿಸುತ್ತೇನೆ'' ಎಂದು ಪುಸಲಾಯಿಸಿದ. ಹಸೀನಾ ಇವನ ಮಾತನ್ನು ಒಪ್ಪಲಿಲ್ಲ. ಇದರಿಂದ ಕುಪಿತಗೊಂಡ ರಾಡ್ರಿಗ್ಸ್ ದಿನಾಂಕ 20-4-1999ರ ಮುಂಜಾನೆ ಹಸೀನಾ ಕೆಲಸ ಮಾಡುತ್ತಿದ್ದ ಕಚೇರಿಯ ಬಳಿ ಮೋಟಾರ್ ಬೈಕ್‌ನಲ್ಲಿ ಬಂದು ತನ್ನ ಕೈಯಲ್ಲಿದ್ದ ಪ್ಲಾಸ್ಟಿಕ್ ಜಗ್ ಒಂದರಲ್ಲಿ ತುಂಬಿದ್ದ ದ್ರವವೊಂದನ್ನು ಅವಳ ಮೇಲೆ ಎಸೆದ. ಈ ದ್ರವ

ರಂಜಕಾಮ್ಲವಾಗಿದ್ದರಿಂದ ಹಸೀನಾಳ ಮುಖ, ಕಣ್ಣು, ಕತ್ತು, ಎದೆ ಹಾಗೂ ಕಾಲುಗಳ ಮೇಲೆ ತೀವ್ರ ಗಾಯಗಳಾಗಿ ಆಕೆ ವಿಲವಿಲ ಒದ್ದಾಡತೊಡಗಿದಳು. ಸ್ಥಳದಲ್ಲಿದ್ದ ದಾರಿಹೋಕರು ಕೂಡಲೇ ಅವಳನ್ನು ಹತ್ತಿರದಲ್ಲಿ ಆಸ್ಪತ್ರೆಗೆ ಸೇರಿಸಿದರು. ಅದೇ ದಿನ ಹಸೀನಾಳ ಹೇಳಿಕೆಯ ಮೇರೆಗೆ ರಾಡ್ರಿಗ್ಸ್‌ನ ವಿರುದ್ಧ ''ಕೊಲೆಯ ಯತ್ನ''ದ ಅಪರಾಧವೊಂದು ಜಾಲಹಳ್ಳಿ ಪೋಲೀಸ್ ಠಾಣೆಯಲ್ಲಿ ದಾಖಲಾಗಿ ತನಿಖೆಯ ನಂತರ ನ್ಯಾಯಾಲಯಕ್ಕೆ ಪ್ರಕರಣ ಹೋಯಿತು. ನ್ಯಾಯಾಲಯವು ಜೋಸೆಫ್ ರಾಡ್ರಿಗ್ಸ್‌ನನ್ನು ತಪ್ಪಿತಸ್ಥನೆಂದು ಒಪ್ಪಿದರೂ ಆತನ ಕೃತ್ಯ ಕಲಂ 307 ಐಪಿಸಿಯ ವ್ಯಾಪ್ತಿಗೆ ಬರದೆ ಕಲಂ 326 ಐಪಿಸಿ ಅಡಿ ಬರುತ್ತದೆ ಎಂದು ತೀರ್ಮಾನಿಸಿ ಆರೋಪಿಗೆ 5 ವರ್ಷ 3 ತಿಂಗಳ ಸಜೆ ವಿಧಿಸಿ, ಸಜೆಗೆ ತಪ್ಪಿದಲ್ಲಿ 3,00,000 ರೂ. ಜುಲ್ಮಾನೆ ವಿಧಿಸಿತ್ತು.

## 'ನರಕ ಸದೃಶ'

ಸೆಷನ್ಸ್ ನ್ಯಾಯಾಲಯದ ಈ ತೀರ್ಪಿನ ವಿರುದ್ಧ ಆರೋಪಿ ಹಾಗೂ ಪ್ರಾಸಿಕ್ಯೂಷನ್ ಹೈಕೋರ್ಟಿನಲ್ಲಿ ಮೇಲ್ಮನವಿ ಸಲ್ಲಿಸಿದರು. ಆರೋಪಿಯ ಪರ ವಕೀಲರು ಕಲಂ 307 ಐಪಿಸಿಯ ಆರೋಪ ಸಾಬೀತಾಗಬೇಕಾದಲ್ಲಿ ಆರೋಪಿಗೆ ಕೊಲೆ ಮಾಡುವ ಉದ್ದೇಶವಿರಬೇಕು, ಆತ ಕೊಲೆ ಮಾಡುವ ತಯಾರಿ ನಡೆಸಿರಬೇಕು ಹಾಗೂ ಆತ ಮಾಡಿದ ಕೃತ್ಯ ಕೊಲೆಗೆ ಅತಿ ಸಮೀಪ ಬರಲೇಬೇಕು ಎಂದು ವಾದಿಸಿ ಈ ಪ್ರಕರಣದಲ್ಲಿ ಹಸೀನಾಗೆ ಪ್ರಾಣ ಹೋಗುವಂತಹ ಗಾಯಗಳಾಗಿರಲಿಲ್ಲ ಎಂದಿದ್ದರು.

ಆದರೆ ಈ ವಾದವನ್ನು ಹೈಕೋರ್ಟ್ ಒಪ್ಪಲಿಲ್ಲ. ಆರೋಪಿಯು ಹಸೀನಾಗೆ ಬೆದರಿಕೆಯನ್ನು ಒಡ್ಡಿದ್ದಲ್ಲದೆ ಆಕೆಯ ಮೈಮೇಲೆ ಎರಚಲು ಭಾರೀ ಪ್ರಮಾಣದ ಆಸಿಡ್ ಖರೀದಿಸಿದ್ದ. ಈ ಪ್ರಮಾಣದ ಗಂಧಕಾಮ್ಲವನ್ನು ಯಾವುದೇ ವ್ಯಕ್ತಿಯ ಮೈಮೇಲೆ ಸುರಿದರೆ ಆ ವ್ಯಕ್ತಿ ಸಾಯುವುದು ಖಚಿತ ಎಂದು ಯಾರಾದರೂ ತಿಳಿಯಬಹುದಾಗಿದೆ. ಆಸಿಡ್ ಗಾಯಗಳು ಸುಟ್ಟ ಗಾಯಗಳಾದ್ದರಿಂದ ಇಂತಹ ಗಾಯಗಳಿಂದ ವ್ಯಕ್ತಿಗಳು ಬದುಕುವುದು ದುರ್ಲಭ. ಒಂದು ವೇಳೆ ಸರಿಯಾದ ಶುಶ್ರೂಷೆಯಿಂದ ಬದುಕಿದರೂ ಅಂಗಹೀನರಾಗಿ, ಕುರೂಪಿಗಳಾಗಿ ನರಕಸದೃಶ ಜೀವನಕ್ಕಿಂತ ಸಾವೇ ಮೇಲು ಎಂದು ಅವರಿಗೆ ಅನಿಸುತ್ತದೆ. ಹೀಗಾಗಿ ಆರೋಪಿಗೆ ಕೃತ್ಯ ನಡೆಸುವ ಮುನ್ನ ಇದ್ದ ಇರಾದೆ ಹಾಗೂ ಆತ ನಡೆಸಿದ ಪೂರ್ವ ತಯಾರಿ ಪರಿಗಣಿಸಿ ಆಸಿಡ್ ಎರಚುವ ಕೃತ್ಯವನ್ನು ಕಲಂ 307 ಅಥವಾ ಕಲಂ 326 ಐಪಿಸಿ ಅನ್ವಯ ತೀರ್ಮಾನಿಸಬೇಕಾಗುತ್ತದೆ ಎಂದು ಹೇಳಿತು.

ಇದೇ ತೀರ್ಪಿನಲ್ಲಿ ಘನ ನ್ಯಾಯಾಲಯ ವಿವಿಧ ನ್ಯಾಯಾಲಯಗಳ ತೀರ್ಪುಗಳನ್ನು ಉದಾಹರಿಸಿ ಯಾವುದಾದರೊಂದು ಕೃತ್ಯ ಇಡೀ ಸಮಾಜಕ್ಕೆ ಅಘಾತಕಾರಿಯಾದರೆ ಅಂತಹ ಕೃತ್ಯಕ್ಕೆ ಸರಿಯಾದ ಶಿಕ್ಷೆ ಅಗತ್ಯ ಎಂದು ಸಮಾಜ ಭಾವಿಸುತ್ತದೆ. ಸಮಾಜದಲ್ಲಿ ಅರಾಜಕತೆ ಉಂಟಾಗದಿರಬೇಕಾದರೆ ಹಾಗೂ ಸಮಾಜಘಾತಕ ಶಕ್ತಿಗಳನ್ನು ಹದ್ದುಬಸ್ತಿನಲ್ಲಿ ಇಡಬೇಕಾದರೆ ಅಪರಾಧಿಗಳಿಗೆ ಕೊಡುವ ಶಿಕ್ಷೆ ಸೂಕ್ತ ಪ್ರಮಾಣದಲ್ಲಿರಬೇಕು. ಕ್ರಿಮಿನಲ್ ಕಾನೂನು ಸಮಾಜದ

ಸಾಮಾಜಿಕ ಚಿಂತನೆಯ ಪ್ರತಿಬಿಂಬಿಸುವಂತೆ ಇರಬೇಕಾಗಿದ್ದು, ಕಾನೂನಿನ ಬಗ್ಗೆ ಸಮಾಜಕ್ಕೆ ವಿಶ್ವಾಸ ಮೂಡಬೇಕಾದ್ದಲ್ಲಿ ಪ್ರತಿಯೊಂದು ಅಪರಾಧಕ್ಕೂ ಸರಿಯಾದ ಪ್ರಮಾಣದ ಶಿಕ್ಷೆ ವಿಧಿಸಬೇಕಾಗುತ್ತದೆ. ಅಪರಾಧಿಗಳಿಗೆ ಕಡಿಮೆ ಪ್ರಮಾಣದ ಶಿಕ್ಷೆ ವಿಧಿಸಿದಲ್ಲಿ ನ್ಯಾಯಾಂಗದ ಮೇಲೆ ಸಮಾಜಕ್ಕೆ ವಿಶ್ವಾಸ ಮೂಡುವುದಿಲ್ಲ ಎಂದು ಉಲ್ಲೇಖಿಸಿ ಆರೋಪಿಸಿ ಆರೋಪಿಗೆ ಜೀವಾವಧಿ ಶಿಕ್ಷೆ ನೀಡಿತು.

## ವಿಶೇಷ ಪ್ಯಾಕೇಜ್

ಇದಲ್ಲದೆ ಈ ರೀತಿ ಆಸಿಡ್ ದಾಳಿಗೆ ತುತ್ತಾದ ಅಮಾಯಕ ವ್ಯಕ್ತಿಗಳಿಗೆ ಸರ್ಕಾರ ವಿಶೇಷ ನೆರವನ್ನು ನೀಡಬೇಕಾಗಿರುತ್ತದೆ. ನೊಂದ ವ್ಯಕ್ತಿಗಳಿಗೆ ವಿಶೇಷ ಪುನರ್ವಸತಿ ಬೇಕಾಗಿರುತ್ತದೆ. ಹೀಗಾಗಿ ರಾಜ್ಯ ಸರ್ಕಾರ ಇಂತಹ ಪ್ರಕರಣಗಳ ಬಗ್ಗೆ ತನ್ನ ನೆರವಿನ ನೀತಿಯನ್ನು ಘೋಷಿಸಬೇಕು ಎಂದೂ ತೀರ್ಪು ನೀಡಿತು. ಇದರನ್ವಯ ರಾಜ್ಯ ಸರ್ಕಾರ ಒಂದು ವಿಶೇಷ ನೆರವಿನ ಪ್ಯಾಕೇಜನ್ನು ಘೋಷಿಸಿದೆ.

ಸಾಮಾನ್ಯವಾಗಿ ಆಸಿಡ್ ಎರಚುವ ಪ್ರಕರಣಗಳಲ್ಲಿ ಆರೋಪಿಗಳು ಪುರುಷರಾಗಿದ್ದು, ಬಲಿಗೊಳಗಾಗುವವರು ಹೆಣ್ಣು ಮಕ್ಕಳೇ ಆಗಿರುತ್ತಾರೆ. ಇಂತಹ ಪ್ರಕರಣಗಳಿಗೆ ತುತ್ತಾಗುವ ಬಹುತೇಕ ಹೆಣ್ಣುಮಕ್ಕಳಿಗೆ ಆರೋಪಿಯ ಪರಿಚಯ ಇದ್ದೇ ಇರುತ್ತದೆ. ಇಬ್ಬರ ಮಧ್ಯೆ ಪ್ರೇಮವೂ ಇರಬಹುದು. ಈ "ಪ್ರೇಮ" ಏಕಮುಖದ್ದಾದಾಗ ಅಥವಾ ಹೆಣ್ಣು ಬೇರೊಬ್ಬ ವ್ಯಕ್ತಿಯ ಜತೆ ಹೋಗಲು ಆರಂಭಿಸಿದಾಗ ಆರೋಪಿ ಆಕೆಯನ್ನು ವಿರೂಪಗೊಳಿಸುವ ಕೃತ್ಯಕ್ಕೆ ಕೈಹಾಕಬಹುದು. ಆದ್ದರಿಂದ ಹೆಣ್ಣು ಮಕ್ಕಳು ಎಚ್ಚರಿಕೆಯಿಂದ ಇರುವ ಅಗತ್ಯ ಸಾಕಷ್ಟಿದೆ.

ಆಸಿಡ್‌ಗಳನ್ನು ಸುಲಭವಾಗಿ ಮಾರಾಟ ಮಾಡುವ ವ್ಯವಸ್ಥೆಗೆ ಕಡಿವಾಣ ಹಾಕಲೇಬೇಕಾಗಿದೆ. ಆಸಿಡ್ ತಯಾರಿಕೆ ಹಾಗೂ ವಿತರಣೆಯ ನಿಯಂತ್ರಣವನ್ನು ಕಟ್ಟುನಿಟ್ಟಾಗಿ ಮಾಡಿದಲ್ಲಿ ಆಸಿಡ್ ಸುಲಭಸಾಧ್ಯವಾಗಿ ಲಭಿಸುವುದನ್ನು ತಪ್ಪಿಸಬಹುದಾಗಿದೆ.

ಎಲ್ಲಕ್ಕಿಂತ ಮಿಗಿಲಾಗಿ ಹಸೀನಾ ಪ್ರಕರಣದಲ್ಲಿ ಕರ್ನಾಟಕ ಹೈಕೋರ್ಟ್ ನೀಡಿರುವ ತೀರ್ಪಿನ ಪರಿಣಾಮವಾಗಿ ಆಸಿಡ್ ಉಗ್ಗುವ ಪ್ರಕರಣಗಳು ಸಾಕಷ್ಟು ಕಡಿಮೆ ಆಗುವ ಸಾಧ್ಯತೆಗಳಿವೆ. ಈ ಕಾರಣದಿಂದ ಹೈಕೋರ್ಟ್‌ನ ಈ ತೀರ್ಪು ಐತಿಹಾಸಿಕ ಎನ್ನಬಹುದಾಗಿದೆ.

# 15

## ನೊಯಿಡಾ ಮಕ್ಕಳ ಹತ್ಯೆ: ಪೊಲೀಸರು ಎಡವಿದ್ದೆಲ್ಲಿ?

ರಾಷ್ಟ್ರದ ರಾಜಧಾನಿ ದೆಹಲಿಗೆ ಹೊಂದಿಕೊಂಡಿರುವ ನೊಯಿಡಾದ ಸೆಕ್ಟರ್- 31 ರ ಪಕ್ಕದಲ್ಲಿರುವ ನಿತಾರಿ ಹಳ್ಳಿಯ 30 ಕ್ಕೂ ಹೆಚ್ಚು ಮಕ್ಕಳನ್ನು ಮೊಹಿಂದರ್‌ಸಿಂಗ್ ಪಂಧೇರ್ ಎನ್ನುವ ವ್ಯಕ್ತಿ ತನ್ನ ಸೇವಕ ಸುರೇಂದ್ರನ ಸಹಾಯದಿಂದ ಅಪಹರಿಸಿ ಅವರ ಮೇಲೆ ಅತ್ಯಾಚಾರ ಎಸಗಿ ನಂತರ ಕೊಲೆ ಮಾಡಿ ಅವರ ಅಂಗಾಂಗಗಳನ್ನು ಕತ್ತರಿಸಿ ಅವನ್ನು ಚೀಲಗಳಲ್ಲಿ ತುಂಬಿ ಮೋರಿಯೊಂದರಲ್ಲಿ ಎಸೆದ ಹೃದಯ ವಿದ್ರಾವಕ ವರದಿ ಇಡೀ ದೇಶ ತಲ್ಲಣಗೊಳ್ಳುವಂತ ಮಾಡಿದೆ. ಉತ್ತರ ಪ್ರದೇಶದ ಪೊಲೀಸರು ಕ್ಷಿಪ್ರ ಕಾರ್ಯಾಚರಣೆ ನಡೆಸಿ ಆರೋಪಿಗಳನ್ನು ಬಂಧಿಸಲು ಸಫಲರಾಗಿದ್ದರೂ ಅವರ ಬಗ್ಗೆ ಹಲವಾರು ಟೀಕೆ ಟಿಪ್ಪಣಿಗಳು ಜನಸಾಮಾನ್ಯರಿಂದ ಕೇಳಿ ಬರುತ್ತಲೇ ಇವೆ.

ಸುಮಾರು 2-3 ವರ್ಷಗಳಿಂದ ತಮ್ಮ ಹಳ್ಳಿಯ ಬಾಲಕ ಬಾಲಕಿಯರು ನಾಪತ್ತೆ ಆಗುತ್ತಿದ್ದಾರೆ ಎಂಬ ದೂರನ್ನು ನೀಡಿದ್ದರೂ ನೊಯಿಡಾದ ಪೊಲೀಸರು ಸರಿಯಾದ ತನಿಖೆಯನ್ನು ನಡೆಸದೇ ದೂರುಗಳನ್ನು ಮೂಲೆಗುಂಪು ಮಾಡಿದರು ಎನ್ನುವುದು ನಿತಾರಿಯ ನಿವಾಸಿಗಳ ದೂರು. ಪಂಧೇರ್‌ನ ಮನೆಯ ಪಕ್ಕದಲ್ಲಿರುವ ಮೋರಿಯಿಂದ ದುರ್ವಾಸನೆ ಬರುತ್ತಿದೆ ಎಂದು ನಾಗರಿಕರು ಪೊಲೀಸರಿಗೆ ತಿಳಿಸಿದಾಗಲೂ ಅವರು ಅವನ್ನು ತಲೆಗೆ ಹಚ್ಚಿಕೊಳ್ಳದೇ ಯಾವುದಾದರೂ ಕೊಳೆತ ವಸ್ತು ಅಲ್ಲಿ ಇರಬೇಕು ಎಂದು ಮುಖ ತಿರುವಿದ್ದರು ಎಂದೂ ವರದಿಯಾಗಿದೆ. ಸಮಾಜದ ಪ್ರಬಲ ವರ್ಗದವರು ದೂರು ನೀಡಿದರೆ ಚುರುಕಿನಿಂದ

ಕೆಲಸ ಮಾಡುವ ಪೊಲೀಸರು ದುರ್ಬಲ ವರ್ಗದವರ ಅಹವಾಲುಗಳನ್ನು ಆಲಿಸುವುದರಲ್ಲಿ ಆಸಕ್ತಿಯನ್ನು ತೋರಿಸುವುದಿಲ್ಲ ಎನ್ನುವುದು ಸಾರ್ವಜನಿಕರ ಅನಿಸಿಕೆಯಾಗಿದೆ.

ಮಕ್ಕಳ ಮೇಲೆ ನಡೆದ ಮೊದಲನೆ ಅತ್ಯಾಚಾರ ಪ್ರಕರಣ ಇದಲ್ಲ. ವಿದೇಶಿ ನಾಗರಿಕನೊಬ್ಬ ತನ್ನ ಪತ್ನಿಯ ಜೊತೆ ಮುಂಬೈನ ಪಂಚತಾರಾ ಹೋಟೆಲೊಂದರಲ್ಲಿ ಅಮಾಯಕ ಬೀದಿ ಮಕ್ಕಳನ್ನು ಪುಸಲಾಯಿಸಿ ತನ್ನ ರೂಮಿಗೆ ಕರೆತಂದು ಅವರನ್ನು ಬೆತ್ತಲೆ ಮಾಡಿ ಫೋಟೋ ತೆಗೆದು ಮಾರಾಟ ಮಾಡುತ್ತಿದ್ದ ಘಟನೆಯ ವರದಿಯ ನಂತರ ಬ್ರಿಟನ್‌ನ ನಾಗರಿಕನೊಬ್ಬ ಗೋವಾದಲ್ಲಿ ಮಕ್ಕಳ ಮೇಲೆ ಲೈಂಗಿಕ ಅತ್ಯಾಚಾರ ನಡೆಸಿದ ಘಟನೆಯೂ ವರದಿಯಾಗಿದೆ. ಪೀಡೋಫಿಲಿಯಾ ಎಂದು ಕರೆಯಲಾಗುವ ವಿಕೃತ ಕಾಮದ ಉದಾಹರಣೆಗಳಿವು ಅಪ್ರಾಪ್ತ ವಯಸ್ಸಿನ ಬಾಲಕಿಯರನ್ನು, ಹಸುಗೂಸುಗಳನ್ನು ಮದುವೆ ಮಾಡಿಕೊಡುವ ಸಂಪ್ರದಾಯ ವಿರುವ ನಮ್ಮ ದೇಶದಲ್ಲಿ ಅಪಹರಣಕ್ಕೆ ಒಳಗಾಗುವ ಎಷ್ಟೋ ಅಮಾಯಕ ಮಕ್ಕಳು ವಿಕೃತ ಕಾಮಿಗಳಿಗೆ ಬಲಿಯಾದರೂ ನಮ್ಮಲ್ಲಿ ಅಚ್ಚರಿಯೇ ಮೂಡುವುದಿಲ್ಲ. ಹದಿಹರೆಯದ ಮಕ್ಕಳೊಡನೆ ಲೈಂಗಿಕ ಸಂಪರ್ಕ ಮಾಡಿದರೆ ಹಲವಾರು ಲೈಂಗಿಕ ಸಂಬಂಧಿ ರೋಗಗಳು ವಾಸಿ ಆಗುತ್ತವೆ ಎಂಬ ಮೂಢನಂಬಿಕೆ ಕೆಲ ಜನರಲ್ಲಿ ಇರುವುದರಿಂದ ಇಂದಿಗೂ ಹಲವಾರು ಹೆಣ್ಣು ಮಕ್ಕಳನ್ನು ಅಪಹರಿಸಿ ಇಲ್ಲವೆ ಖರೀದಿಸಿ ವೇಶ್ಯಾ ಗೃಹಗಳಿಗೆ ಸರಬರಾಜು ಮಾಡಲಾಗುತ್ತಿರುವುದು ದುರದೃಷ್ಟಕರ.

ನಮ್ಮ ದೇಶದಲ್ಲಿ ಮಕ್ಕಳ ರಕ್ಷಣೆಗೆ ಸಂಬಂಧಿಸಿದ ಹಲವಾರು ಕಾನೂನುಗಳಿವೆ. 16 ವರ್ಷದ ಕೆಳಗಿನ ಮಕ್ಕಳೊಡನೆ ಅತ್ಯಾಚಾರ ನಡೆಸಿದರೆ ಅದಕ್ಕೆ ಐಪಿಸಿ 376ನೇ ಕಲಂ ಅನ್ವಯ ಶಿಕ್ಷೆ ನೀಡಬಹುದಾಗಿದೆ. ಒಂದು ವೇಳೆ 12 ವರ್ಷಕ್ಕಿಂತ ಕಡಿಮೆ ವಯಸ್ಸಿನ ಹೆಣ್ಣು ಮಗುವಿನ ಮೇಲೆ ಅತ್ಯಾಚಾರ ಮಾಡಿದ ವ್ಯಕ್ತಿಗೆ 10 ವರ್ಷಕ್ಕಿಂತ ಹೆಚ್ಚು ಕಾಲ ಜೈಲು ಶಿಕ್ಷೆ ವಿಧಿಸಬಹುದಾಗಿದೆ. ಬಾಲಕರನ್ನು ಲೈಂಗಿಕವಾಗಿ ಬಳಸಿ ಕೊಂಡರೆ ಐಪಿಸಿ 377 ಕಲಂ ಅನ್ವಯ ಶಿಕ್ಷೆ ವಿಧಿಸಬಹುದಾಗಿದೆ. ಯಾವುದೇ ವಯಸ್ಸಿನ ಹೆಣ್ಣು ಮಕ್ಕಳ ಮಾನಭಂಗಕ್ಕೆ ಪ್ರಯತ್ನಿಸಿದರೆ ಐಪಿಸಿ 354ನೇ ಕಲಂ ಅನ್ವಯ ಶಿಕ್ಷೆ ವಿಧಿಸಬಹುದು. 18 ವರ್ಷದ ಕೆಳಗಿನ ಹೆಣ್ಣನ್ನು ಇನ್ನೊಬ್ಬರ ಜೊತೆ ಸಂಭೋಗಕ್ಕೆ ದೂಡುವ ಉದ್ದೇಶ ದಿಂದ ತಮ್ಮ ವಶಕ್ಕೆ ತೆಗೆದುಕೊಳ್ಳುವುದು ಕಲಂ 366 ಎ ಅನ್ವಯ ಅಪರಾಧ. ಅಪ್ರಾಪ್ತ ವಯಸ್ಸಿನ ಬಾಲಕ ಬಾಲಕಿಯರ ರಕ್ಷಣೆಗೆ ಕಾನೂನುಗಳು ರಚಿತವಾಗಿದೆ. ದುರದೃಷ್ಟವಶಾತ್ ಅಪ್ರಾಪ್ತ ಬಾಲಕಿಯರನ್ನು ಅಪಹರಿಸಿದ ವ್ಯಕ್ತಿಯೇ ಅವರ ಮೇಲೆ ಅತ್ಯಾಚಾರವೆಸಗಿದರೆ ಆ ಕೃತ್ಯಕ್ಕೆ ವಿಶೇಷ ಶಿಕ್ಷೆ ಇಲ್ಲ.

ನಿಠಾರಿಯಿಂದ ಮಕ್ಕಳು ಕಾಣೆಯಾಗಿದ್ದಾರೆಂದು ಪೊಲೀಸರ ಬಳಿ ಪಾಲಕರು ದೂರಿದಾಗ ಪೊಲೀಸರು ದೂರು ಸ್ವೀಕರಿಸಲಿಲ್ಲ ಎಂದು ವರದಿಯಾಗಿದೆ. ಕಾಣೆಯಾದ ವ್ಯಕ್ತಿಯ ಬಗೆಗಿನ ದೂರು ದಂಡ ಪ್ರಕ್ರಿಯಾ ಸಂಹಿತೆಯ ಅನ್ವಯ ವಿಚಾರಣೆಗೆ ತಕ್ಕುದಾದ ಅಪರಾಧವಾಗದೇ ಇರುವುದರಿಂದ ಇಂತಹ ಕೇಸುಗಳಲ್ಲಿ ಎಫ್‌ಐಆರ್ ದಾಖಲಾಗುವುದಿಲ್ಲ. ಆದರೆ ನಮ್ಮ ರಾಜ್ಯದಲ್ಲಿ ವಿಶೇಷ ಆದೇಶ ಹೊರಡಿಸಿ ಇಂತಹ ಕೇಸುಗಳನ್ನು

ದಾಖಲಿಸಿಕೊಳ್ಳಬೇಕೆಂಬ ನಿಯಮ ಇದೆ. ಹೀಗಿದ್ದರೂ ಸಾಮಾನ್ಯವಾಗಿ ಪೊಲೀಸ್ ಠಾಣೆಯಲ್ಲಿ ವ್ಯಕ್ತಿ ಕಾಣೆಯಾದ ಎನ್ನುವ ದೂರು ಬಂದಾಗ ಅಂತಹ ದೂರನ್ನು ದಾಖಲಿಸುವುದಿಲ್ಲ. ಯಾವುದೋ ಗೆಳೆಯರ ಜೊತೆ ಪಿಕ್‌ನಿಕ್‌ಗೆ ಹೋಗಿರಬಹುದು. 3 ದಿನ ಕಾದು ನೋಡಿ ನಂತರ ಬನ್ನಿ ಎನ್ನುವ ಉತ್ತರವೇ ಫಿರ್ಯಾದಿಗೆ ದೊರಕುತ್ತದೆ. ಫಿರ್ಯಾದಿ ಎಲ್ಲಾ ಕಡೆ ಹುಡುಕಾಡಿ ವಿಫಲನಾಗಿ ಮತ್ತೆ ಪೊಲೀಸ್ ಠಾಣೆಗೆ ಬಂದರೆ ಆಗಲೂ ದೂರು ಪಡೆಯಲು ಮೀನಾಮೇಷ ಎಣಿಸಲಾಗುತ್ತದೆ. ಪೊಲೀಸ್ ಠಾಣೆಗಳಲ್ಲಿ ದರೋಡೆ, ಕೊಲೆ, ಸುಲಿಗೆ, ಕನ್ನಕಳುವು ಮುಂತಾದ ಘೋರ ಅಪರಾಧಗಳ ಬಗ್ಗೆ ತನಿಖೆ ಮಾಡಲು ಪುರುಸೊತ್ತು ಇಲ್ಲದೇ ಹೋದಾಗ ಕಾಣೆಯಾದ ವ್ಯಕ್ತಿಗಳ ಬಗ್ಗೆ ದೂರು ದಾಖಲಾದರೂ ತನಿಖೆ ಮಂದಗತಿಯಲ್ಲಿ ಸಾಗುತ್ತದೆ.

ಸಿಬ್ಬಂದಿಯ ಕೊರತೆ ಇರುವುದರಿಂದ ಪೊಲೀಸ್ ಅಧಿಕಾರಿಗಳು ಕಾಣೆಯಾದ ವ್ಯಕ್ತಿಯನ್ನು ಹುಡುಕಿಕೊಂಡು ಹೋಗಲು ಸಾಧ್ಯವಾಗುವುದಿಲ್ಲ. ಕಾಣೆ ಯಾದ ವ್ಯಕ್ತಿಯ ಸಂಬಂಧಿಕರೇ ಈ ಬಗ್ಗೆ ಆಸಕ್ತಿ ವಹಿಸಿ ಪೊಲೀಸ್ ಅಧಿಕಾರಿಗಳಿಗೆ ಸುಳಿವು ನೀಡಿದಲ್ಲಿ ಅಂತಹ ಸುಳಿವನ್ನು ಅನುಸರಿಸಿ ಪೊಲೀಸರು ಕಾರ್ಯಪ್ರವೃತ್ತರಾಗುತ್ತಾರೆ. ಹೀಗಾಗಿ ತನಿಖೆಯು ಪ್ರಗತಿ ವೇಗದಲ್ಲಿ ಸಾಗುವುದಿಲ್ಲ.

ವಸ್ತುಸ್ಥಿತಿ ಹೀಗಿದ್ದರೂ ನೊಯಿಡಾದಲ್ಲಿ ಪೊಲೀಸರು ಚುರುಕಾಗಿ ಕಾರ್ಯ ಪ್ರವೃತ್ತರಾಗಬಹುದಾಗಿತ್ತು. 2 ವರ್ಷಗಳಿಂದ ಒಂದೇ ಹಳ್ಳಿಯಿಂದ ಸುಮಾರು 30 ಅಪ್ರಾಪ್ತ ಬಾಲಕ/ಬಾಲಕಿಯರು ಕಾಣೆಯಾಗಿದ್ದಾರೆಂದು ದೂರು ಬಂದಾಗ ಸಂಬಂಧಿಸಿದ ಠಾಣಾಧಿಕಾರಿ ಎಚ್ಚೆತ್ತು ಮಕ್ಕಳ ಸಾಗಾಟ ನಡೆಯುತ್ತಿದ್ದೆಯೇ ಎಂದು ಪರಿಶೀಲಿಸಬೇಕಾಗಿತ್ತು. ನಿಠಾರಿ ಹಳ್ಳಿಗೆ ಬೀಟ್ ಡ್ಯೂಟಿಗೆ ಹೋಗುವ ಕಾನ್‌ಸ್ಟೇಬಲ್‌ಗಳು ಕಾಣೆಯಾದ ಮಕ್ಕಳ ಪೋಷಕರನ್ನು ಭೇಟಿ ಆಗಿ ಹೆಚ್ಚಿನ ಮಾಹಿತಿಯನ್ನು ಪಡೆಯಬಹುದಾಗಿತ್ತು. ಆದರೆ ಪೊಲೀಸರು ನಿರ್ಲಿಪ್ತರಾಗಿದ್ದುದು ಸರಿಯಲ್ಲ.

ಆರೋಪಿ ಪಂಧೇರ್‌ನ ಮನೆಯ ಪಕ್ಕದ ಮೋರಿಯಿಂದ ಹೊಲಸು ವಾಸನೆ ಬರುತ್ತಿದೆ ಎಂಬ ದೂರು ಬಂದಾಗ ಪೊಲೀಸರು ಸ್ಥಳಕ್ಕೆ ಹೋಗಿ ವಾಸನೆಯ ಮೂಲವನ್ನು ಪತ್ತೆ ಹಚ್ಚಬೇಕಾಗಿತ್ತು. ಒಂದು ವೇಳೆ ಮೊದಲೇ ಈ ಕೆಲಸ ಮಾಡಿದ್ದರೆ ಹೆಚ್ಚಿನ ಸಂಖ್ಯೆಯ ಮಕ್ಕಳ ಮರಣವನ್ನು ತಪ್ಪಿಸಬಹುದಾಗಿತ್ತು.

ಈ ಪ್ರಕರಣದಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ಅತ್ಯಾಚಾರದ ನಂತರ ಮಕ್ಕಳನ್ನು ಕೊಲೆ ಮಾಡಿರುವುದು. ಕೊಲೆಗೆ ಎರಡು ಕಾರಣಗಳನ್ನು ನಾವು ಹುಡುಕಬಹುದು. ಮಕ್ಕಳನ್ನು ಹಾಗೆಯೇ ಬಿಟ್ಟರೆ ತಮ್ಮ ಗುರುತು ಪತ್ತೆ ಆಗಬಹುದೆಂದು ಆರೋಪಿಗಳು ಕೊಲೆ ಮಾಡಿರಬಹುದು. ಎರಡನೆಯದಾಗಿ ಕೆಲವು ವಿಕೃತ ಕಾಮಿಗಳು ಸಂಭೋಗದ ನಂತರ ಕೊಲೆ ಮಾಡುವ ಪ್ರವೃತ್ತಿ ಹೊಂದಿರುತ್ತಾರೆ. jack, the ripper ಎನ್ನುವ ಇಂಗ್ಲೆಂಡಿನ ಕುಖ್ಯಾತ ಸರಣಿ ಕೊಲೆಗಡುಕ ವೇಶ್ಯೆಯರ ಜೊತೆ ಲೈಂಗಿಕ ಕ್ರಿಯೆ ನಡೆಸಿ ಅವರನ್ನು ಕೊಲೆ

ಮಾಡಿದ್ದನ್ನು ಇಲ್ಲಿ ಸ್ಮರಿಸಬಹುದು. ಇತ್ತೀಚೆಗಷ್ಟೆ ಬ್ರಿಟನ್‌ನ ಸಫೋಕ್‌ನಲ್ಲಿ ಒಬ್ಬ ವ್ಯಕ್ತಿ ೫ ಜನ ವೇಶ್ಯೆಯರ ಸರಣಿ ಕೊಲೆ ನಡೆಸಿ ಸಿಕ್ಕಿಬಿದ್ದಿದ್ದಾನೆ.

ಪಂಧೇರ್ ಕೊಲೆ ಮಾಡಲು ಇನ್ನೊಂದು ಕಾರಣ ಇದೆಯೆಂದು ಹೇಳಲಾಗುತ್ತಿದೆ. ಕೊಲೆ ನಡೆಸಿದ ನಂತರ ಆತ ಮತ್ತು ಆತನ ಸೇವಕ ಹೆಣಗಳ ಅಂಗಾಂಗಗಳನ್ನು ಕತ್ತರಿಸುತ್ತಿದ್ದರೆಂದು ವರದಿಯಾಗಿದೆ. ಈ ರೀತಿ ಕತ್ತರಿಸಿದ ಅಂಗಾಂಗಗಳನ್ನು ಮಾರಾಟ ಮಾಡಿರುತ್ತಾರೆನ್ನುವ ದೂರು ಕೇಳಿಬಂದಿದೆ. ಇದು ಅತ್ಯಂತ ಘೋರ ಹಾಗೂ ಅಮಾನವೀಯ ಕೃತ್ಯ. ಒಂದು ವೇಳೆ ಅಂಗಾಂಗಗಳು ಮಾರಾಟವಾಗುತ್ತಿದ್ದರೆ ಈ ವಿಷಯ ಸ್ಥಳೀಯ ಪೊಲೀಸರ ಗಮನಕ್ಕೆ ಏಕೆ ಬರಲಿಲ್ಲ ಎನ್ನುವ ಪ್ರಶ್ನೆ ಉದ್ಭವಿಸುತ್ತದೆ.

ಈ ಪ್ರಕರಣದಲ್ಲಿ ಪೊಲೀಸರ ವೈಫಲ್ಯ ಎದ್ದು ಕಾಣುತ್ತಿದೆ. ಸಮಾಜದ ಕೆಳಸ್ತರಕ್ಕೆ ಸೇರಿದ ವ್ಯಕ್ತಿಗಳಿಂದ ಫಿರ್ಯಾದು ಬಂದಾಗ ಅಂಥ ಕೇಸುಗಳನ್ನು ದಾಖಲಿಸುವುದರಲ್ಲಿ ಪೊಲೀಸರು ಆಸಕ್ತಿ ತೋರಿಸಿಲ್ಲವೆನ್ನುವ ಕೂಗು ನಮ್ಮ ದೇಶದಲ್ಲಿ ಕೇಳಿ ಬರುತ್ತಿರುವ ಹಿನ್ನೆಲೆಯಲ್ಲಿ (ಎರಡು ತಿಂಗಳ ಹಿಂದೆ ಇದೇ ನೊಯಿಡಾದ ಹೆಸರಾಂತ ಉದ್ಯಮಿ ನರೇಶಗುಪ್ತನ ಮಗ ಅನಂತನ ಅಪಹರಣ ಆದಾಗ ಚುರುಕಾಗಿ ತನಿಖೆ ನಡೆಸಿದ ಪೊಲೀಸರು ಅನಂತನನ್ನು ಬಂಧಮುಕ್ತಗೊಳಿಸಿದ್ದರು) ಬಡ ಮಕ್ಕಳ ನೆರವಿಗೆ ಪೊಲೀಸರು ಬಾರದಿರುವುದು ಎದ್ದು ಕಾಣುತ್ತಿದೆ.

ಮಕ್ಕಳು ಮತ್ತು ವೃದ್ಧರು ಅಪರಾಧಗಳಿಗೆ ಹೆಚ್ಚು ಹೆಚ್ಚಾಗಿ ತುತ್ತಾಗುತ್ತಿರುವ ಇಂದಿನ ದಿನಗಳಲ್ಲಿ ನಾಗರಿಕರು ಮಕ್ಕಳು ಹಾಗೂ ವೃದ್ಧರ ರಕ್ಷಣೆಯ ಬಗ್ಗೆ ಸಾಕಷ್ಟು ಮುನ್ನೆಚ್ಚರಿಕೆಯ ಕ್ರಮಗಳನ್ನು ತೆಗೆದು ಕೊಳ್ಳಬೇಕಾದದ್ದು ಅನಿವಾರ್ಯ. ಮನೆ ಬಿಟ್ಟ ನಂತರ ನಮ್ಮ ಮಕ್ಕಳು ಏನು ಮಾಡುತ್ತಿದ್ದಾರೆ. ಶಾಲಾ ಕಾಲೇಜುಗಳಲ್ಲಿ ಅವರ ಸ್ನೇಹಿತರು ಯಾರು, ಅವರು ಯಾರೊಡನೆ ಹೆಚ್ಚಿನ ಸಂಪರ್ಕದಲ್ಲಿ ಇದ್ದಾರೆ? ಅವರ ಚಟುವಟಿಕೆಗಳು ಏನೇನು ಎನ್ನುವ ಬಗ್ಗೆ ತಂದೆ ತಾಯಿಗಳು ಹಾಗೂ ಪೋಷಕರು ತೀವ್ರ ನಿಗಾ ಇಡಬೇಕಾದ ಅಗತ್ಯ ಕಂಡುಬರುತ್ತಿದೆ. ನಮ್ಮ ಮಕ್ಕಳ ಬಗ್ಗೆ ನಾವು ಎಚ್ಚರ ವಹಿಸದಿದ್ದಲ್ಲಿ ಅನಾಹುತವಾಗಬಹುದು.

ಕಾಣೆಯಾದ ವ್ಯಕ್ತಿಗಳ ಬಗ್ಗೆ ಪ್ರಕರಣಗಳನ್ನು ದಾಖಲಿಸುವಲ್ಲಿ ಹಾಗೂ ತನಿಖೆ ಮಾಡುವಲ್ಲಿ, ಪೊಲೀಸರಿಗೆ ಏನೇ ತೊಂದರೆಗಳಿದ್ದರೂ ನೊಯಿಡಾದ ಪ್ರಕರಣ ಪೊಲೀಸರಿಗೆ ಶೋಭೆ ತರುವಂತಹದಲ್ಲ.

# 16

## ವಿದೇಶಿ ಸ್ತ್ರೀಯರ ಮೇಲೆ ಹೆಚ್ಚುತ್ತಿರುವ ದೌರ್ಜನ್ಯ

ಕಳೆದ ಎರಡು ವಾರಗಳ ಹಿಂದೆ ದೇಶದ ವಿವಿಧ ಭಾಗಗಳಲ್ಲಿ ವಿದೇಶಿ ಹೆಣ್ಣು ಮಕ್ಕಳು ದೌರ್ಜನ್ಯ ಕ್ಕೊಳಗಾದ ಪ್ರಕರಣಗಳು ನಡೆದಿವೆ. ಹೊಸ ವರ್ಷದ ದಿನ ಮುಂಬೈನಲಿ ಇಬ್ಬರು ಅನಿವಾಸಿ ಮಹಿಳೆಯರ ಮೇಲೆ ಜುಹು ಬೀಚ್ ಬಳಿ ಮಾನಭಂಗ ಮಾಡಲಾಯಿತು. ಅದೇ ದಿನವೇ ಕೊಚ್ಚಿಯಲ್ಲಿ ಸ್ವೀಡಿಷ್ ಯುವತಿ ಒಬ್ಬಳನ್ನು ಅವಳ ತಂದೆಯ ಸಮ್ಮುಖದಲ್ಲಿಯೇ ಮಾನಭಂಗ ಮಾಡಲಾಯಿತು. ಇದಾದ ಕೆಲವೇ ದಿನಗಳ ನಂತರ ಗೋವಾದಲಿ ಬ್ರಿಟಿಷ್ ಹಾಗೂ ರಷ್ಯದ ಮಹಿಳೆಯರಿಬ್ಬರ ಮೇಲೆ ಅತ್ಯಾಚಾರ ನಡೆಯಿತು. ರಾಜಸ್ತಾನದ ಪುಷ್ಕರ್‌ನಲ್ಲಿ ಅಮೆರಿಕದ ಪ್ರವಾಸಿಯೊಬ್ಬಳನ್ನು ಮಾನಭಂಗಕ್ಕೆ ಈಡು ಮಾಡಲಾಯಿತು. ಉದಯ ಪುರದ ಗೆಸ್ಟ್‌ಹೌಸ್‌ನಲ್ಲಿ ಅದರ ಮಾಲಿಕ ತನ್ನ ಗೆಸ್ಟ್ ಹೌಸ್‌ನಲ್ಲಿ ತಂಗಿದ್ದ ಬ್ರಿಟಿಷ್ ಮಹಿಳೆಯೊಬ್ಬಳ ಮೇಲೆ ಅತ್ಯಾಚಾರ ನಡೆಸಿದನೆಂದು ವರದಿಯಾಗಿದೆ.

2008ನೇ ವರ್ಷದ ಆದಿ ಭಾಗದಲ್ಲೇ ವಿವಿಧಕಡೆ ನಡೆದ ಇಂತಹ ಪ್ರಕರಣಗಳಿಂದ ಭಾರತದ ಹೆಸರಿಗೆ ಕಳಂಕ ಬಂದಿದೆ. ಈ ಪ್ರಕರಣಗಳಿಂದ ಅಂತರ್‌ರಾಷ್ಟ್ರೀಯ ಮಟ್ಟದಲಿ ಭಾರತದಲ್ಲಿ ವಿದೇಶಿಯರ ಸುರಕ್ಷತೆಯ ಬಗ್ಗೆ ಅನುಮಾನ ಬಂದು ಪ್ರವಾಸಿಗರ ಸಂಖ್ಯೆಯಲ್ಲಿ ಇಳಿಮುಖ ಆಗುವ ಸಾಧ್ಯತೆಯನ್ನು ತಳ್ಳಿಹಾಕಲಾಗದು.

ಕೇವಲ ವಿದೇಶಿ ಹೆಣ್ಣು ಮಕ್ಕಳಷ್ಟೇ ಅಲ್ಲ. ನಮ್ಮ ದೇಶದ ಯುವತಿಯರು ಹಾಗೂ ಮಹಿಳೆಯರು ಹೆಚ್ಚು ಹೆಚ್ಚಾಗಿ ಪುರುಷರಿಂದ ದೌರ್ಜನ್ಯಕ್ಕೊಳಗಾಗುತ್ತಿದ್ದಾರೆ. ರಾಷ್ಟ್ರೀಯ

ಅಪರಾಧ ದಾಖಲೆ ಭಾಗ ಇತ್ತೀಚೆಗಷ್ಟೇ ಬಿಡುಗಡೆ ಆಗಿದ್ದು, ಅದರ ಅಂಕಿಅಂಶಗಳನ್ವಯ ಪ್ರತಿ ಗಂಟೆಗೆ ಇಬ್ಬರು ಹೆಣ್ಣು ಮಕ್ಕಳ ಮೇಲೆ ಅತ್ಯಾಚಾರ ಆಗುತ್ತಿದೆ; ಇಬ್ಬರ ಅಪಹರಣ ನಡೆಯುತ್ತಿದೆ; 4 ಮಂದಿಯ ಮಾನಭಂಗ ಮಾಡಲಾಗುತ್ತಿದೆ ಹಾಗೂ 7 ಮಂದಿ ತಮ್ಮ ಪತಿಯಿಂದ ದೌರ್ಜನ್ಯಕ್ಕೆ ಒಳಗಾಗುತ್ತಿದ್ದಾರೆ. ರಾಷ್ಟ್ರದಲ್ಲಿ 2006 ರಲ್ಲಿ ಸುಮಾರು 165000 ಮಹಿಳೆಯರ ಮೇಲಿನ ದೌರ್ಜನ್ಯ ಪ್ರಕರಣಗಳು ದಾಖಲಾಗಿವೆ. 2005ಕ್ಕೆ ಹೋಲಿಸಿದರೆ ಈ ಪ್ರಕರಣಗಳ ಸಂಖ್ಯೆ ಶೇಕಡ 5 ರಷ್ಟು ಜಾಸ್ತಿಯಾಗಿದೆ. ದಿನೇ ದಿನೇ ಹೆಚ್ಚುತ್ತಿರುವ ಈ ಪ್ರಕರಣಗಳು ನಿಜಕ್ಕೂ ಆತಂಕಕಾರಿ.

ವಿದೇಶಿ ಮಹಿಳೆಯರು ಮುಂದುವರಿದವರು ಹಾಗೂ ಅವರುಗಳು ಲೈಂಗಿಕ ಸಂಬಂಧಗಳ ಬಗ್ಗೆ ಬಹಳ ಸ್ವೇಚ್ಛಾವರ್ತಿಗಳೆನ್ನುವ ಭಾವನೆ ನಮ್ಮ ಜನರ ಮನದಲ್ಲಿ ಆಳವಾಗಿ ಬೇರೂರಿದೆ. ಪುರುಷರನ್ನು ಯಾವುದೇ ರೀತಿಯ ಸಂಕೋಚವಿಲ್ಲದೆ ವಿದೇಶಿ ಮಹಿಳೆಯರು ಸಂಪರ್ಕಿಸುವುದರಿಂದ ಇವರುಗಳು ನಮಗೆ ಸುಲಭವಾಗಿ ಒಲಿಯುತ್ತಾರೆನ್ನುವ ತಪ್ಪು ಭಾವನೆಯು ಕೆಲವರಲ್ಲಿ ಇದೆ. ಇದಕ್ಕೆ ಪೂರಕ ಸ್ಥಳಗಳಿಗೆ ಬಂದಾಗ ಇಲ್ಲಿನ ಬಿಸಿಲನ್ನು ತಾಳದೇ ತುಂಡು ಉಡುಪುಗಳನ್ನು ಧರಿಸುವುದೂ ಕಾಮುಕರ ಚೇಷ್ಟೆಗೆ ಕಾರಣ ಇರಬಹುದು. ಕೆಲವೊಂದು ಬೀಚ್‌ಗಳಲ್ಲಿ ವಿದೇಶಿಯರು ನಗ್ನರಾಗುವುದೂ ಉಂಟು. ಇಂತಹ ಸಂದರ್ಭಗಳಲ್ಲಿ ಅವರುಗಳು ದೌರ್ಜನ್ಯಕ್ಕೆ ಒಳಗಾಗಬಹುದು.

ನಮ್ಮ ಪ್ರವಾಸಿ ತಾಣಗಳಲ್ಲಿ ಬರುವ ಪ್ರವಾಸಿಗರಿಗೆ ಹೆಚ್ಚಿನ ಭದ್ರತೆಯನ್ನು ಒದಗಿಸುವುದರಲ್ಲಿ ವ್ಯವಸ್ಥೆ ವಿಫಲವಾಗಿರುವುದೇ ಈ ರೀತಿಯ ಪ್ರಕರಣಗಳು ಹೆಚ್ಚಲು ಮುಖ್ಯ ಕಾರಣ. ನಮ್ಮ ಜನಸಂಖ್ಯೆಯ ಅನುಪಾತಕ್ಕಿಂತ ಪೊಲೀಸ್ ಸಿಬ್ಬಂದಿ ಇಲ್ಲವೆನ್ನುವುದು ನಿಜ. ಸುಮಾರು 1000 ಜನಸಂಖ್ಯೆಗೆ ಒಬ್ಬನೇ ಪೊಲೀಸ್ ಇರುವಾಗ ಹಾಗೂ ಈ ಪೊಲೀಸ್ ಸಿಬ್ಬಂದಿಯೂ ಬೇರೆ ಬೇರೆ ಕರ್ತವ್ಯಗಳನ್ನು ನಿರ್ವಹಿಸುತ್ತಿರುವಾಗ ಮತ್ತು ಇಲಾಖೆಯಲ್ಲಿ ಸಾಕಷ್ಟು ಹುದ್ದೆಗಳು ಖಾಲಿ ಇದ್ದು, ಪ್ರವಾಸಿಗರು ಬರುವ ಕಡೆಗಳಲ್ಲೆಲ್ಲಾ ಭದ್ರತೆ ಒದಗಿಸುವುದು ಕಷ್ಟಸಾಧ್ಯ. ಈ ಸಮಸ್ಯೆಯ ನಿವಾರಣೆಗೆ ಎರಡು ಮಾರ್ಗಗಳು ಇವೆ. ಮೊದಲನೆಯದು ಪೊಲೀಸ್ ಗಸ್ತು ವಾಹನಗಳನ್ನು ಹೆಚ್ಚಿಸಬೇಕು. ಪೊಲೀಸರು ಈ ಸ್ಥಳಕ್ಕೆ ಯಾವಾಗಲಾದರೂ ಬರಬಹುದು ಎನ್ನುವ ಹೆದರಿಕೆ ಇದ್ದರೆ ಜನರು ಅಪರಾಧ ಮಾಡಲು ಹಿಂಜರಿಯುತ್ತಾರೆ.

ಉತ್ತರ ಪ್ರದೇಶ ಮತ್ತಿತರ ರಾಜ್ಯಗಳಲ್ಲಿ ಟೂರಿಸ್ಟ್ ಪೊಲೀಸ್ ಎನ್ನುವ ವ್ಯವಸ್ಥೆ ಜಾರಿಯಲ್ಲಿದೆ. ಮುಖ್ಯ ಪ್ರವಾಸಿ ತಾಣಗಳಲ್ಲಿ ಈ ಪೊಲೀಸರನ್ನು ನೇಮಕ ಮಾಡಿ ಅವರುಗಳು ಪ್ರವಾಸಿಗರಿಗೆ ಸಹಕಾರಿಗಳಾಗುವಂತೆ ಮಾಡಲಾಗಿದೆ. ನಿವೃತ್ತ ಸೇನಾ ಸಿಬ್ಬಂದಿಯನ್ನು ಟೂರಿಸ್ಟ್ ಪೊಲೀಸ್ ಎಂದು ನೇಮಕ ಮಾಡಿ ಅವರಿಗೆ ತರಬೇತಿ ನೀಡಲಾಗಿದೆ. ಇಂತಹ ಟೂರಿಸ್ಟ್ ಪೊಲೀಸರು ಪ್ರವಾಸಿಗರಿಗೆ ರಕ್ಷಣೆಯ ಜೊತೆಗೆ ಪ್ರವಾಸಿ ತಾಣಗಳ ಬಗ್ಗೆ ಗೈಡ್‌ಗಳೂ ಆಗಿರುತ್ತಾರೆ. ಈ ರೀತಿಯ ವ್ಯವಸ್ಥೆ ಎಲ್ಲಾ ಕಡೆಯೂ ಜಾರಿಯಾದರೆ ಮಹಿಳಾ ಪ್ರವಾಸಿಗರ ಮೇಲೆ ದೌರ್ಜನ್ಯ ಕಡಿಮೆಯಾಗಲು ಸಹಕಾರಿ.

ಇಂತಹ ಪ್ರಕರಣಗಳು ನಡೆಯಲು ಇನ್ನೊಂದು ಪ್ರಕರಣಗಳು ನಡೆಯಲು ಇನ್ನೊಂದು ಕಾರಣ ತೊಂದರೆಗೀಡಾಗುವ ಮಹಿಳೆಯರು ತಮ್ಮನ್ನು ಗುರುತಿಸಲು ಸಾಧ್ಯವಾಗುವುದಿಲ್ಲ ಎನ್ನುವ ಆರೋಪಿಗಳ ನಂಬಿಕೆ. ಬೇರೆ ದೇಶದಿಂದ ಬಂದ ಪ್ರವಾಸಿಗರಿಗೆ ಅತ್ಯಾಚಾರ ಮಾಡಿದಂತಹ ವ್ಯಕ್ತಿ ಯಾರು ? ಅವನ ಚಹರೆ ಹೇಗಿದೆ ? ಮುಂತಾದ ವಿವರಗಳು ಸರಿಯಾಗಿ ಲಭ್ಯವಾಗದೇ ಇರುವುದರಿಂದ, ದೂರನ್ನು ಕೊಡುವಾಗ ಆರೋಪಿಯನ್ನುಗುರುತಿಸಲು ಸಾಧ್ಯವಾಗದೇ ಇರುವುದು ಸಹ ಈ ಕೃತ್ಯ ಎಸಗುವವರಿಗೆ ಪ್ರೇರಣೆ ಆಗುತ್ತದೆ.

ಅದೇ ರೀತಿ ವಿದೇಶಿ ಪ್ರವಾಸಿಗರು ನಮ್ಮ ದೇಶದಲ್ಲಿ ಕೆಲವೇ ದಿನಗಳು ಉಳಿಯುವುದರಿಂದ ಹಾಗೂ ಅವರುಗಳು ಭಾರತವನ್ನು ಬಿಟ್ಟು ಹೋಗುವಷ್ಟರಲಿ ಆರೋಪಿಗಳು ಪತ್ತೆಯಾಗದೇ ಇರುವುದರಿಂದ ಇಂತಹ ಪ್ರಕರಣಗಳು ಹೆಚ್ಚಾಗುತ್ತವೆ. ಫಿರ್ಯಾದಿ ವಿದೇಶಿ ಮಹಿಳೆ ಸ್ವದೇಶಕ್ಕೆ ವಾಪಸ್ಸು ಹೋದ ಮೇಲೆ ಈ ಪ್ರಕರಣ ಅಲ್ಲಿಗೆ ಮುಗಿಯಿತು. ಏಕೆಂದರೆ ದಾಖಲಾದ ಪ್ರಕರಣದ ಬಗ್ಗೆ ಪೊಲೀಸರು ಹೆಚ್ಚಿನ ಗಮನ ಹರಿಸುವುದಿಲ್ಲ.

ಕೆಲವು ಪ್ರಕರಣಗಳಲ್ಲಿ ಆರೋಪಿಗಳು ತಕ್ಷಣ ಸಿಕ್ಕಿಬಿದ್ದರೂ ಪ್ರಕರಣದ ವಿಚಾರಣೆ ತಡವಾಗುವುದರಿಂದ ಫಿರ್ಯಾದಿಯು ಕೋರ್ಟ್‌ಗೆ ಬಂದು ಆರೋಪಿಯನ್ನು ಗುರುತಿಸುವುದು ಕಷ್ಟ. ಆದ್ದರಿಂದ ಈ ಪ್ರಕರಣಗಳು ಖುಲಾಸೆ ಆಗುತ್ತವೆ. ಈ ಹಿಂದೆ ರಾಜಸ್ತಾನದಲ್ಲಿ ನಡೆದ ಒಂದು ಪ್ರಕರಣದಲ್ಲಿ ವಿದೇಶಿ ಮಹಿಳೆಯು ತನ್ನ ಮೇಲೆ ಅತ್ಯಾಚಾರ ಮಾಡಿದ ರಿಕ್ಷಾ ಚಾಲಕನ ವಿರುದ್ಧ ದೂರು ಕೊಟ್ಟ 24 ಗಂಟೆಗಳಲ್ಲೇ ಚಾಲಕನನ್ನು ಬಂಧಿಸಿ ಆ ಮಹಿಳೆ ತನ್ನದೇಶಕ್ಕೆ ಹೊರಡುವ ಮುನ್ನವೇ ನ್ಯಾಯಾಲಯದಲ್ಲಿ ಪ್ರಕರಣದ ತೀರ್ಪು ಬರುವಂತೆ ನೋಡಿಕೊಳ್ಳಲಾಯಿತು. ಸಾಮಾನ್ಯವಾಗಿ ಇಷ್ಟು ಕ್ಷಿಪ್ರ ಗತಿಯಲ್ಲಿ ಪ್ರಕರಣಗಳ ವಿಲೇವಾರಿ ಆಗದಿರುವುದೇ ಸಮಸ್ಯೆ ಹೆಚ್ಚಾಗಲು ಕಾರಣ.

ನಮ್ಮ ದೇಶಕ್ಕೆ ಬರುವ ಪ್ರವಾಸಿಗರಿಗೆ ಸಂಬಂಧಪಟ್ಟ ಪೊಲೀಸ್ ಅಧಿಕಾರಿಗಳು ಸರಿಯಾದ ಎಚ್ಚರಿಕೆಯನ್ನು ನೀಡಬೇಕು. ಯಾವ ಸಮಯದಲ್ಲಿ ಯಾವ ಜಾಗಗಳಲ್ಲಿ ಓಡಾಡಬಹುದು. ಎಂತಹ ತೊಂದರಗಳ ಬಗೆಗೆ ಜಾಗರೂಕರಾಗಿರಬೇಕು. ಅಪರಾಧಗಳಿಂದ ಪಾರಾಗಲು ಯಾವ ರೀತಿಯ ಮುಂಜಾಗರೂಕತಾ ಕ್ರಮಗಳನ್ನು ಅನುಸರಿಸಬೇಕು ಇತ್ಯಾದಿ ಬಗ್ಗೆ ಸೂಚನಾ ಪತ್ರಗಳನ್ನು ಸಿದ್ಧಪಡಿಸಬೇಕು. ಇವುಗಳನ್ನು ಪ್ರವಾಸಿಗರು ತಂಗುವ ಹೋಟೆಲ್‌ನಲ್ಲಿ ಇಟ್ಟು ವಿದೇಶಿಯರಿಗೆ ಮುನ್ನೆಚ್ಚರಿಕೆ ನೀಡಬಹುದು.

ಒಬ್ಬಂಟಿಯಾಗಿ ಜನದಟ್ಟಣೆಯಿರುವ ಪ್ರದೇಶಗಳಲ್ಲಿ ಓಡಾಡಬಾರದು, ಯಾವ ರೀತಿ ಉಡುಗೆ ತೊಡುಗೆಗಳನ್ನು ಧರಿಸಬೇಕು. ದೇವಾಲಯಗಳಲ್ಲಿ ಯಾವ ರೀತಿ ವರ್ತಿಸಬೇಕು. ಬೀಚ್‌ಗಳಲ್ಲಿ ಉಂಟಾಗುವ ತೊಂದರೆಗಳು ಏನು ಎಂಬ ಸಲಹೆ ಸೂಚನೆಗಳನ್ನು ಕರಪತ್ರಗಳಲ್ಲಿ ನೀಡಬಹುದು. ಪ್ರವಾಸಿಗರು ಬರುವಂತಹ ಜಾಗಗಳಲಿ ಹೋಟೆಲ್‌ಗಳ ಮಾಲೀಕರು, ವಿವಿಧ ವಸ್ತುಗಳನ್ನುಮಾರುವ ಅಂಗಡಿಗಳ ಮತ್ತು ರೆಸ್ಟೋರೆಂಟ್ ಮಾಲೀಕರು ಮತ್ತಿತರರನ್ನು

ಸಂಬಂಧಪಟ್ಟ ಪೊಲೀಸ್ ಸಿಬ್ಬಂದಿ ತಿಂಗಳಿಗ ಒಮ್ಮೆಯಾದರೂ ಸಭೆ ಸೇರಿಸಿ ಪ್ರವಾಸಿಗರ ಜೊತೆ ಯಾವ ರೀತಿ ವರ್ತಿಸಬೇಕು ಎಂಬ ಸಲಹೆ ಸೂಚನೆಗಳನ್ನು ನೀಡಬಹುದು. ಆಟೋ ರಿಕ್ಷಾ, ಸೈಕಲ್‌ರಿಕ್ಷಾ ಡ್ರೈವರ್‌ಗಳಿಗೂ ಸಹ ಈ ರೀತಿ ಸೂಚನೆ ಹಾಗೂ ಎಚ್ಚರಿಕೆ ನೀಡಬಹುದು. ಇವರೆಲ್ಲರಿಗೂ ಪರಿಚಯ ಪತ್ರಗಳನ್ನೂ ನೀಡಬಹುದು.

ಇಂತಹ ಪ್ರಕರಣಗಳು ಕಡಿಮೆ ಯಾಗಬೇಕಾದರೆ ಸ್ತ್ರೀಯರ ಬಗ್ಗೆ ಸಮಾಜದಲ್ಲಿ ಇರುವಂತಹ ಮನೋಭಾವನೆ ವ್ಯಾಪಕವಾಗಿ ಬದಲಾಗಬೇಕು. ಪೊಲೀಸ್ ವ್ಯವಸ್ಥೆಯೂ ಬದಲಾಗಬೇಕು. ಹೆಚ್ಚು ಹೆಚ್ಚಾಗಿ ಮಹಿಳಾ ಪೊಲೀಸರು ನೇಮಕ ಗೊಂಡಲ್ಲಿ ಇಂತಹ ಸಮಸ್ಯೆಗಳಿಗೆ ಸೂಕ್ತ ಪರಿಹಾರ ಸಿಗಬಹುದು.

ಹೆಣ್ಣು ಮಕ್ಕಳ ಮೇಲಿನ ದೌರ್ಜನ್ಯ ತಪ್ಪಬೇಕಾದರೆ ಹೆಚ್ಚಿನ ನೈತಿಕ ಶಿಕ್ಷಣದ ಅಗತ್ಯವಿದೆ. ಕಾನೂನುಗಳನ್ನು ಇನ್ನೂ ಬಿಗಿಯಾಗಿ ಜಾರಿಗೊಳಿಸಬೇಕಾಗಿದೆ. ಪೊಲೀಸರು ಠಾಣೆಗಳಿಗೆ ದೂರು ಕೊಡಲು ಅದರಲ್ಲೂ ವಿದೇಶಿ ಮಹಿಳೆಯರು ಬಂದಾಗ ಅವರ ಬಗ್ಗೆ ಹೆಚ್ಚಿನ ಅನುಕಂಪ ತೋರಿಸಬೇಕಾಗಿದೆ. ಕರ್ನಾಟಕ ರಾಜ್ಯದ ಪೊಲೀಸರಿಗೆ ಯುನಿಸೆಫ್ ಸಹಯೋಗದೊಂದಿಗೆ ಲಿಂಗ ಸಂವೇದಿ ಕಾರ್ಯಕ್ರಮವೊಂದನ್ನು ರೂಪಿಸಿ ಕಾಲ ಕಾಲಕ್ಕೆ ತರಬೇತಿಯನ್ನು ನೀಡಲಾಗುತ್ತಿದೆ. ಇದೇ ರೀತಿ ಕಾರ್ಯಕ್ರಮಗಳನ್ನು ಬೇರೆ ರಾಜ್ಯದ ಪೊಲೀಸರಿಗೂ ನೀಡುವ ಅವಶ್ಯಕತೆ ಇದೆ.

# 17

## ಮಹಿಳೆಯರ ಮೇಲಿನ ಬಲಾತ್ಕಾರಕ್ಕೆ ಕಾನೂನಿನಲ್ಲಿ ಕೊಡುವ ಶಿಕ್ಷೆ

ಮಹಿಳೆ ಅನಾದಿಕಾಲದಿಂದಲೂ ತುಳಿತಕ್ಕೆ ಒಳಗಾಗುತ್ತಾ ಬಂದಿದ್ದಾಳೆ. ಆಕೆಯ ಮೇಲೆ ನಿರಂತರವಾಗಿ ದೈಹಿಕ ಹಿಂಸೆ ನಡೆಯುತ್ತಲೆ ಇದೆ. ಬೆತ್ತಲೆ ಮೆರವಣಿಗೆ, ಸೀಮೆ ಎಣ್ಣೆಹಾಕಿ ಸುಡುವುದು. ಕೊಲೆ ಮಾಡುವುದೂ ಅಲ್ಲದೆ ಬಲಾತ್ಕಾರಗಳೂ ಆಗಿಂದಾಗ್ಗೆ ನಡೆಯುತ್ತಲೇ ಇವೆ. ಮಹಿಳೆಯರ ಮೇಲಿನ ದೌರ್ಜನ್ಯ ಪ್ರಕರಣಗಳು ಹೆಚ್ಚಾದಾಗ ಮಹಿಳೆಯರ ಅತ್ಯಾಚಾರಕ್ಕೆ ಸಂಬಂಧಿಸಿದ ಕಾನೂನುಗಳಲ್ಲಿ ಸಾಕಷ್ಟು ಬದಲಾವಣೆಗಳನ್ನು ತರಲಾಯಿತು.

ವೇಶ್ಯಾವೃತ್ತಿಗೆ ತಳ್ಳುವ ಉದ್ದೇಶದಿಂದ ಯುವತಿಯರನ್ನು ಅಪಹರಣ ಮಾಡಿ ಅವರನ್ನು ವೇಶ್ಯಾವಾಟಿಕೆಗೆ ಮಾರಾಟ ಮಾಡುವ ಪ್ರಕರಣಗಳು ಹಲವಾರು. ತಂದೆ ತಾಯಿಗಳೇ ಬಡತನದ ಬೇಗೆಯಿಂದ ತಮ್ಮ ಮಕ್ಕಳನ್ನು ವೇಶ್ಯಾವೃತ್ತಿಗೆ ತಳ್ಳಿದಂತಹ ನಿದರ್ಶನಗಳೂ ಇವೆ. ಭಾರತ ದಂಡ ಸಂಹಿತೆಯ ಕಲಂ 372 ರನ್ವಯ ಯಾವನೇ ವ್ಯಕ್ತಿಯು 18 ವರ್ಷ ವಯಸ್ಸಿನ ಒಳಗಿರುವ ಯುವತಿಯನ್ನು ವೇಶ್ಯಾವೃತ್ತಿಗೆ ಉಪಯೋಗ ಮಾಡಿಕೊಳ್ಳಬೇಕು ಎನ್ನುವ ದುರುದ್ದೇಶದಿಂದ ಮಾರಾಟ ಮಾಡಿದರೆ ಅಥವಾ ಆಕೆಯ ವೇಶ್ಯಾ ವೃತ್ತಿಯಿಂದ ತಾನು ಹಣ ಗಳಿಸಿದರೆ ಅಂತಹವನನ್ನು 10 ವರ್ಷಗಳ ಕಾಲ ಜೈಲಿಗೆ ಕಳುಹಿಸಿ ದಂಡವನ್ನೂ ವಿಧಿಸಬಹುದಾಗಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಯಾವುದಾದರೂ ಒಂದು ವೇಶ್ಯಾ ಗೃಹದಲ್ಲಿ 18 ವರ್ಷಕ್ಕಿಂತ ಕಡಿಮೆ ಇರುವ ಯುವತಿಯು ಕಂಡುಬಂದಲ್ಲಿ ಆ ವೇಶ್ಯಾ ಗೃಹದ ಮಾಲೀಕ ಕಲಂ 372 ರನ್ವಯ ಅಪರಾಧವನ್ನು ಮಾಡಿದ್ದಾನೆಂದು ಭಾವಿಸಲಾಗುವುದು. 18 ವರ್ಷ ವಯಸ್ಸಿನ ಒಳಗಿರುವ ತಮ್ಮ ಮಕ್ಕಳನ್ನೇ ಇನ್ನೊಬ್ಬರ ಜೊತೆ ಕಾನೂನು ಬಾಹಿರವಾಗಿ ಲೈಂಗಿಕ ಕ್ರಿಯೆಗೆ

ಪ್ರಚೋದನೆ ಮಾಡಿದರೆ ಅಂತಹ ತಂದೆತಾಯಿಗಳೂ ಈ ಅಪರಾಧವನ್ನು ಎಸಗಿದ್ದಾರೆಂದೇ ಭಾವಿಸಲಾಗುತ್ತದೆ.

ಭಾರತ ದಂಡ ಸಂಹಿತೆಯ ಕಲಂ 373 ರನ್ವಯ ಯಾವನಾದರೂ ವ್ಯಕ್ತಿಯು 18 ವರ್ಷ ವಯಸ್ಸಿನ ವ್ಯಕ್ತಿಯನ್ನು ವೇಶ್ಯಾವೃತ್ತಿಯ ಸಲುವಾಗಿ ಖರೀದಿಸಿದರೆ ಅಥವಾ ಬಾಡಿಗೆಗೆ ಪಡೆದುಕೊಂಡರೆ ಅಂತಹ ವ್ಯಕ್ತಿಗೆ 10 ವರ್ಷಗಳ ಕಾಲ ಜೈಲಿಗೆ ಕಳುಹಿಸಬಹುದಾಗಿದೆ. ಈ ಕಲಂನಲ್ಲಿ 18 ವರ್ಷ ವಯಸ್ಸಿನ ವ್ಯಕ್ತಿ ಎಂದೇ ನಮೂದಿಸಲಾಗಿರುವುದು ಗಮನಾರ್ಹ. ವ್ಯಕ್ತಿಯು ಪುರುಷನಾಗಿದ್ದರೂ ಈ ಕಲಂ ಜಾರಿಗೆ ಬರುತ್ತದೆ.

ಮಹಿಳೆಯರ ಮೇಲಿನ ಅಪರಾಧಗಳಲ್ಲಿ ಅತ್ಯಂತ ಭೀಕರವಾದ ಅಪರಾಧವನ್ನು ರೇಪ್ ಎಂದೇ ಪರಿಗಣಿಸಲಾಗಿದೆ. ದಂಡ ಸಂಹಿತೆಯ ಕಲಂ 375 ರೇಪ್ ಎಂದರೆ ಏನು ಎಂದು ವಿಶ್ಲೇಷಿಸಿದೆ. ಆರು ಸಂದರ್ಭಗಳಲ್ಲಿ ಒಬ್ಬ ಸ್ತ್ರೀಯ ಜೊತೆ ಸಂಭೋಗ ಮಾಡುವುದು ರೇಪ್ ಎಂದು ಪರಿಗಣಿಸಲ್ಪಡುತ್ತದೆ. ಅದರಲ್ಲಿ ಮೊದಲನೆಯದು ಆಕೆಯ ಇಚ್ಛೆಗೆ ವಿರುದ್ಧವಾಗಿ, ಎರಡನೆಯದು ಆಕೆಯ ಒಪ್ಪಿಗೆ ಇಲ್ಲದೆ, ಮೂರನೆಯದು ಆಕೆಗೆ ಜೀವಭಯ ಹಾಕಿ, ಅದರ ಪರಿಣಾಮವಾಗಿ ಸಂಭೋಗಕ್ಕೆ ಒಪ್ಪಿಗೆ ಪಡೆದಾಗ, ನಾಲ್ಕನೆಯದು ತಾನು ಆಕೆಯ ಗಂಡನಲ್ಲದಿದ್ದರೂ ಗಂಡನೆಂದೇ ನಂಬಿಕೆ ಹುಟ್ಟಿಸಿ ಸಂಭೋಗಕ್ಕೆ ಒಪ್ಪಿಸಿದಾಗ, ಐದನೆಯದು ಆಕೆಯ ಒಪ್ಪಿಗೆ ಪಡೆದೇ ಸಂಭೋಗ ಮಾಡುವುದು, ಇಲ್ಲವೇ ಒಬ್ಬ ಮಹಿಳೆಗೆ ಮಾದಕ ವಸ್ತುಗಳನ್ನು ಕೊಟ್ಟು ಅವಳ ಒಪ್ಪಿಗೆ ಪಡೆಯುವುದು, ಆರನೇದಾಗಿ ಹದಿನಾರು ವರ್ಷ ವಯಸ್ಸಿಗಿಂತ ಕಡಿಮೆ ಇರುವ ಯುವತಿಯ ಜೊತೆ ಅವಳ ಒಪ್ಪಿಗೆ ಪಡೆದೇ ಅಥವಾ ಪಡೆಯದೇ ಲೈಂಗಿಕ ಕ್ರಿಯೆಯಲ್ಲಿ ತೊಡಗುವುದನ್ನು ರೇಪ್ ಎಂದೇ ಪರಿಗಣಿಸಲಾಗುತ್ತದೆ.

ಒಬ್ಬ ವ್ಯಕ್ತಿ 15 ವರ್ಷ ವಯಸ್ಸಿನ ಒಳಗಡೆ ಇರುವ ತನ್ನ ಪತ್ನಿಯ ಜೊತೆ ಲೈಂಗಿಕ ಕ್ರಿಯೆ ನಡೆಸಿದರೂ ಅದನ್ನು ರೇಪ್ ಎಂದೇ ಪರಿಗಣಿಸಲಾಗುತ್ತದೆ.

ದಂಡ ಸಂಹಿತೆಯ ಕಲಂ 376ರಲ್ಲಿ ರೇಪ್ ಎನ್ನುವ ಅಪರಾಧಕ್ಕೆ ಯಾವ ಶಿಕ್ಷೆ ವಿಧಿಸಬಹುದು ಎಂದು ಹೇಳಲಾಗಿದೆ. ಈ ಕಲಂ ಎರಡು ವಿಧದ ಸಂದರ್ಭಗಳನ್ನು ಗುರುತಿಸುತ್ತದೆ. ಮೊದಲನೆಯದು ಸಾಮಾನ್ಯ ವ್ಯಕ್ತಿಗಳು ರೇಪ್ ಮಾಡಿದಾಗ ಹಾಗೂ ಎರಡನೆಯದು ಪೊಲೀಸ್ ಮತ್ತಿತರ ಸಾರ್ವಜನಿಕ ಅಧಿಕಾರಿಗಳು ರೇಪ್ ಮಾಡಿದಾಗ. ರೇಪ್ ಪ್ರಕರಣದಲ್ಲಿ ಸಾಮಾನ್ಯ ವ್ಯಕ್ತಿಯೊಬ್ಬ ಆರೋಪಿಯಾಗಿದ್ದು ಅವನ ಅಪರಾಧ ಸಾಬೀತಾದರೆ ಅವನಿಗೆ ಏಳು ವರ್ಷಗಳವರೆಗೆ ಜೈಲುವಾಸ ವಿಧಿಸಬಹುದು. ಆದರೆ ಪೊಲೀಸರು ಮತ್ತಿತರ ಸಾರ್ವಜನಿಕ ಅಧಿಕಾರಿಗಳು ರೇಪ್ ಮಾಡಿದರೆ ಅಂತಹವರಿಗೆ 10 ವರ್ಷಗಳ ಕಾಲ ಜೈಲು ಶಿಕ್ಷೆ ವಿಧಿಸಬಹುದು.

ಸಾಮಾನ್ಯವಾಗಿ ಸಾರ್ವಜನಿಕ ಸೇವಕರ ಸುಪರ್ದಿಯಲ್ಲಿ ಹಲವಾರು ಬಾರಿ ಹೆಣ್ಣು ಮಕ್ಕಳು ಇರಬೇಕಾದ ಅಥವಾ ಬರಬೇಕಾದ ಸಂದರ್ಭ ಒದಗುತ್ತದೆ. ಯಾವುದಾದರೊಂದು ಅಪರಾಧ ಪ್ರಕರಣದಲ್ಲಿ ಸ್ತ್ರೀಯೊಬ್ಬಳು ಆರೋಪಿಯಾಗಿ ಸಿಕ್ಕಿಹಾಕಿಕೊಂಡು ಪೊಲೀಸ್ ಠಾಣೆಗಾಗಲೀ ಅಥವಾ ಕಸ್ಟಂ ಅಧಿಕಾರಿಯ ಮುಂದಾಗಲೀ ಬರಬಹುದು. ಈ ರೀತಿ ಬಂಧನಕ್ಕೆ

ಹೆಣ್ಣುಮಕ್ಕಳು ಒಳಗಾದಾಗ ಅವಳ ಮೇಲೆ ಪೊಲೀಸರೇ ಅತ್ಯಾಚಾರ ನಡೆಸಿದ ಹಲವಾರು ಪ್ರಸಂಗಗಳು ಎದುರಾಗಿವೆ. ಈ ರೀತಿ ಕೃತ್ಯಗಳನ್ನು ಪತ್ತೆಹಚ್ಚಲು, ಸಾರ್ವಜನಿಕ ಸೇವಕರು ರೇಪ್ ಮಾಡಿದರೆ ಆ ಅಪರಾಧವು ಘೋರ ಎಂದು ಪರಿಗಣಿಸಲಾಗಿದೆ. ಈ ಅಪರಾಧವನ್ನು ಸಾರ್ವಜನಿಕ ಸೇವಕ ತನ್ನ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡು ಮಾಡಿರಬೇಕು.

ಎಷ್ಟೋ ಬಾರಿ ಪೊಲೀಸರು, ಎಕ್ಸೈಸ್ ಅಧಿಕಾರಿಗಳು, ರಿಮ್ಯಾಂಡ್ ಹೋಮ್ ಅಧಿಕಾರಿಗಳು ಸರ್ಕಾರಿ ಆಸ್ಪತ್ರೆಗಳಲ್ಲಿ ಕೆಲಸ ಮಾಡುವವರು ಇತ್ಯಾದಿ ಜನರ ಹಿಡಿತಕ್ಕೆ ಮಹಿಳೆಯರು ಬರಬಹುದು. ಕಳ್ಳಭಟ್ಟಿಸರಾಯಿ ಮಾಡಿದರೆಂದು ಎಕ್ಸೈಸ್ ಅಧಿಕಾರಿಗಳು ಬಂಧಿಸಬಹುದು. ಕಳ್ಳತನದ ಆರೋಪದ ಮೇಲೆ ಪೊಲೀಸರು ಠಾಣೆಗೆ ಮಹಿಳೆಯರನ್ನು ಕರೆತರಬಹುದು. ಭಿಕ್ಷೆ ಬೇಡುವವರು, ವೇಶ್ಯಾವೃತ್ತಿ ಮಾಡುವವರು ಇತ್ಯಾದಿ ಜನರನ್ನು ರಿಮ್ಯಾಂಡ್ ಹೋಮ್‌ಗೆ ಸೇರಿಸಿದಾಗ ಅವರು ಅಲ್ಲಿಯ ಅಧಿಕಾರಿಗಳ ನಿರ್ವಹಣೆಯಲ್ಲಿ ಬರಬಹುದು. ಈ ರೀತಿ ಅಮಾಯಕ ಹೆಣ್ಣುಮಕ್ಕಳು ತಮ್ಮ ಅಧೀನದಲ್ಲಿ ಬಂದಾಗ ಅಧಿಕಾರದ ದುರುಪಯೋಗ ಮಾಡಿಕೊಂಡು ಅವರ ಮೇಲೆ ಬಲಾತ್ಕಾರ ಆಗಬಹುದು. ಬಲವಂತವಾಗಿ ಅವರನ್ನು ಒಪ್ಪಿಸಿ ಅವರೊಡನೆ ಲೈಂಗಿಕ ಕ್ರಿಯೆ ನಡೆಸಬಹುದು.

ಕಲಂ 376(2)(1ಎ) ಅನ್ವಯ ಯಾವನಾದರು ಪೊಲೀಸ್ ಅಧಿಕಾರಿ ತಾನು ಕೆಲಸ ಮಾಡುವ ಠಾಣೆಯ ಸರಹದ್ದಿನಲ್ಲಿ ಅಥವಾ ಯಾವುದಾದರೂ ಪೊಲೀಸ್ ಠಾಣೆಯ ಆವರಣದಲ್ಲಿ ಅಥವಾ ತನಗಿಂತ ಕಿರಿಯ ಪೊಲೀಸ್ ಅಧಿಕಾರಿ ಒಬ್ಬನ ವಶದಲ್ಲಿರುವ ಮಹಿಳೆಯ ಮೇಲೆ ಅತ್ಯಾಚಾರ ಮಾಡಿದರೆ ಆತನಿಗೆ ಕಡಿಮೆ ಎಂದರೆ 10 ವರ್ಷಗಳ ಜೈಲುವಾಸ ವಿಧಿಸಿ ಜೀವಾವಧಿ ಶಿಕ್ಷೆಯನ್ನೂ ವಿಧಿಸಬಹುದು.

ಅದೇ ರೀತಿ ಕಲಂ 376(2)(ಬಿ) ಅನ್ವಯ ಯಾವನೇ ಸಾರ್ವಜನಿಕ ಸೇವಕನು ತನ್ನ ಅಧಿಕಾರದ ದುರುಪಯೋಗ ಮಾಡಿಕೊಂಡು ತನ್ನ ಸುಪರ್ದಿಯಲ್ಲಿರುವ ಅಥವಾ ತನ್ನ ಅಧೀನ ಅಧಿಕಾರಿಯ ಸುಪರ್ದಿಯಲ್ಲಿರುವ ಮಹಿಳೆಯ ಮೇಲೆ ಅತ್ಯಾಚಾರ ನಡೆಸಿದರೆ ಆತನಿಗೆ ಜೀವಾವಧಿ ಶಿಕ್ಷೆ ವಿಧಿಸಬಹುದಾಗಿದೆ. ಅದೇ ರೀತಿ ರಿಮ್ಯಾಂಡ್ ಹೋಮ್, ಜೈಲು ಮತ್ತಿತರ ಜಾಗಗಳಲ್ಲಿ ಕೆಲಸ ಮಾಡುವ ಸಾರ್ವಜನಿಕ ಸೇವಕರು ತಮ್ಮ ಅಧೀನದ ಜೈಲು/ರಿಮ್ಯಾಂಡ್ ಹೋಮ್‌ನಲ್ಲಿ ಬಂಧಿತರಾಗಿರುವವರ ಮೇಲೆ ಅತ್ಯಾಚಾರ ಮಾಡಿದರೆ ಇದೇ ಶಿಕ್ಷೆ ವಿಧಿಸಲಾಗುತ್ತದೆ.

ಕೆಲವು ಸಾರ್ವಜನಿಕ ಸೇವಕರು ತಮ್ಮ ಸುಪರ್ದಿಗೆ ಬರುವ ಮಹಿಳೆಯ ಮೇಲೆ ಬಲಾತ್ಕಾರ ಮಾಡುವುದಿಲ್ಲ. ತಮ್ಮ ಅಧಿಕಾರ ಬಲದಿಂದ ಅಂತಹ ಮಹಿಳೆಯ ಒಪ್ಪಿಗೆ ಪಡೆದೇ ಸಾರ್ವಜನಿಕ ಸೇವಕ ತನ್ನ ಕಾಮತೃಷೆ ತೀರಿಸಿಕೊಳ್ಳಬಹುದು. ಉದಾ: ಒಂದು ಪೊಲೀಸ್ ಠಾಣೆಗೆ ಒಬ್ಬ ವೇಶ್ಯೆಯನ್ನು ಕರೆತರಲಾಗಿರುತ್ತದೆ. ಆ ಠಾಣೆಯ ಕಾನ್ಸ್ಟೇಬಲ್ ಆ ವೇಶ್ಯೆಯನ್ನು ಪುಸಲಾಯಿಸಿ ಅವಳ ಒಪ್ಪಿಗೆ ಪಡೆದು ಆಕೆಯ ದೇಹ ಸುಖವನ್ನು ಅನುಭವಿಸಿದರೆ ಅದನ್ನು ಅಪರಾಧ ಎಂದೇ ಪರಿಗಣಿಸಿ, ಐದು ವರ್ಷಗಳ ಕಾಲ ಜೈಲುವಾಸ ವಿಧಿಸಲಾಗುತ್ತದೆ. ಅದೇರೀತಿ ಜೈಲು, ರಿಮ್ಯಾಂಡ್ ಹೋಮ್ ಮತ್ತಿತರ ಸಾರ್ವಜನಿಕ ಸ್ಥಳಗಳಲ್ಲಿ ದಾಖಲಾಗಿರುವ

ಮಹಿಳೆಯರ ಮೇಲೆ ಆ ಜೈಲಿನ ಸೂಪರಿಂಟೆಂಡೆಂಟ್ ಆಕೆಯ ಒಪ್ಪಿಗೆ ಪಡೆದೇ ಲೈಂಗಿಕ ಕ್ರಿಯೆ ನಡೆಸಿದರೂ ಐದು ವರ್ಷಗಳ ಶಿಕ್ಷೆ ವಿಧಿಸಬಹುದು. ಇದೇ ರೀತಿ ಆಸ್ಪತ್ರೆಯ ಅಧಿಕಾರಿಗಳ ಇಂತಹ ಕೃತ್ಯಕ್ಕೆ ಇದೇ ಶಿಕ್ಷೆ ವಿಧಿಸಬಹುದು.

ಕಲಂ 376(2)(ಡಿ) ಅನ್ವಯ ಒಂದು ಆಸ್ಪತ್ರೆಯ ಅಧಿಕಾರ ವರ್ಗದವರು ಇಲ್ಲವೇ, ನೌಕರರು ಆಸ್ಪತ್ರೆಯಲ್ಲಿ ದಾಖಲಾಗಿರುವ ಮಹಿಳೆಯ ಮೇಲೆ ಅತ್ಯಾಚಾರ ನಡೆಸಿದರೆ ಅಂತಹವರಿಗೂ ಜೀವಾವಧಿ ಶಿಕ್ಷೆ ವಿಧಿಸಬಹುದಾಗಿದೆ.

ಯಾವನಾದರೂ ವ್ಯಕ್ತಿಯು 12 ವರ್ಷ ವಯಸ್ಸಿನ ಒಳಗಿನ ಬಾಲಕ ಅಥವಾ ಗರ್ಭಿಣಿ ಸ್ತ್ರೀ ಮೇಲೆ ರೇಪ್ ಮಾಡಿದರೆ ಅವರಿಗೂ ಜೀವಾವಧಿ ಶಿಕ್ಷೆಯೇ ಆಗುತ್ತದೆ. ಕಲಂ 376(2)(ಜಿ) ಅನ್ವಯ ಒಬ್ಬ ಮಹಿಳೆಯ ಮೇಲೆ ಗುಂಪು ಅತ್ಯಾಚಾರವಾದರೆ ಆ ಗುಂಪಿನಲ್ಲಿರುವ ಪ್ರತಿಯೊಬ್ಬ ವ್ಯಕ್ತಿಗೂ ಜೀವಾವಧಿ ಶಿಕ್ಷೆ ವಿಧಿಸಬಹುದು. ಎಷ್ಟೋ ಬಾರಿ ಗುಂಪು ಅತ್ಯಾಚಾರ ಪ್ರಕರಣಗಳಲ್ಲಿ ಪ್ರತಿಯೊಬ್ಬರೂ ಬಲಾತ್ಕಾರ ಮಾಡಿರುವುದಿಲ್ಲ. ಕೆಲವರು ತಂಡದವರನ್ನು ಎಚ್ಚರಿಸಲು ಹೊರಗಡೆ ಕಾಯುತ್ತಾ ಇರಬಹುದು. ಒಬ್ಬ ವ್ಯಕ್ತಿ ಸಕ್ರಿಯವಾಗಿ ಪಾಲ್ಗೊಳ್ಳದೇ ಹೋದರೂ ಆತ ಬಲಾತ್ಕಾರ ಮಾಡಿದ ಎಂದೇ ಭಾವಿಸಿ ಆತನಿಗೆ ಜೀವಾವಧಿ ಶಿಕ್ಷೆ ವಿಧಿಸಬಹುದಾಗಿದೆ.

ಯಾವನೇ ವ್ಯಕ್ತಿ ಕಾನೂನು ಬದ್ಧವಾಗಿ ತನ್ನಿಂದ ಬೇರ್ಪಡೆಯಾಗಿರುವ ತನ್ನ ಹೆಂಡತಿಯ ಜೊತೆ ಆಕೆಯ ಒಪ್ಪಿಗೆ ಇಲ್ಲದೆ ಲೈಂಗಿಕ ಕ್ರಿಯೆ ನಡೆಸಿದರೂ ಅದನ್ನು ಅಪರಾಧ ಎಂದೇ ಪರಿಗಣಿಸಲಾಗುತ್ತದೆ. ಈ ಅಪರಾಧಕ್ಕೆ ಎರಡು ವರ್ಷಗಳ ಜೈಲುವಾಸ ವಿಧಿಸಬಹುದು.

ದಂಡ ಸಂಹಿತೆಯಲ್ಲಿ ಅತ್ಯಾಚಾರದ ಪ್ರಕರಣ, ಅದರಲ್ಲೂ ಪೊಲೀಸರು ಮತ್ತಿತರ ಸಾರ್ವಜನಿಕ ಸೇವಕರು ಮಾಡುವ ಅತ್ಯಾಚಾರವನ್ನು ಗಂಭೀರವಾಗಿಯೇ ಪರಿಗಣಿಸಲಾಗುತ್ತದೆ.

# 18

## ಮಕ್ಕಳ ರಕ್ಷಣೆ

ವೃದ್ಧರಂತೆ ಮಕ್ಕಳು ಅಬಲರಾಗಿರುವುದರಿಂದ ಅಪರಾಧಗಳಿಗೆ ಸರ್ವೇಸಾಮಾನ್ಯವಾಗಿ ಗುರಿಯಾಗುತ್ತಾರೆ. ಮಕ್ಕಳ ಅಪಹರಣದ ಬಗ್ಗೆ ನಾವು ಈಗಾಗಲೇ ಸಾಕಷ್ಟು ಓದಿದ್ದೇವೆ. ಕೇಳಿದ್ದೇವೆ. ಹಣದ ಆಸೆಗಾಗಿ ಮಕ್ಕಳನ್ನು ಅಪಹರಿಸಿ, ಮಕ್ಕಳನ್ನು ಬಿಡಿಸಲು ಅವರ ಪೋಷಕರಿಂದ ಹೆಚ್ಚಿನ ಹಣವನ್ನು ಬೇಡುವುದು ಎಲ್ಲರಿಗೂ ತಿಳಿದೇ ಇದೆ. ಎಷ್ಟೋ ಬಾರಿ ಅಪರಾಧಿಗಳು ಮಕ್ಕಳನ್ನು ಹೊತ್ತುಕೊಂಡು ಹೋಗಿ ಅವರ ಜೊತೆ ಸರಿಯಾಗಿ ವರ್ತಿಸದ ಪರಿಣಾಮವಾಗಿ ಮಕ್ಕಳು ತೀವ್ರ ರೀತಿಯ ಮಾನಸಿಕ ಆಘಾತಕ್ಕೆ ಗುರಿಯಾಗುತ್ತಾರೆ. ದೈಹಿಕವಾಗಿಯೂ ಅಪಹೃತ ಮಕ್ಕಳು ತೊಂದರೆಗೀಡಾಗುತ್ತಾರೆ. ಕೆಲವು ಬಾರಿ ಅಪಹರಣಕಾರರು ಮಕ್ಕಳನ್ನು ಕೊಂದುಬಿಡುತ್ತಾರೆ. ಸುಮಾರು 8-10 ವರ್ಷಗಳ ಹಿಂದೆ ಬೆಂಗಳೂರಿನಲ್ಲಿ ಅಪಹರಣಕ್ಕೆ ಒಳಗಾದ ಮೂರು ವರ್ಷದ ಮಗು ಕೋಲಾರದ ಬಳಿ ಸತ್ತು ಹೆಣವಾಗಿ ಬಿದ್ದಿದ್ದು ಸಾರ್ವಜನಿಕರಿಗೆ ಸಾಕಷ್ಟು ಆಘಾತವನ್ನು ಉಂಟು ಮಾಡಿತ್ತು. ಈ ಮಗುವನ್ನು ಬಿಡಿಸಿಕೊಳ್ಳಲು ಪೋಷಕರು ಅಪಹರಣಕಾರರಿಗೆ ಹಣವನ್ನು ಕೊಟ್ಟರೂ ಸಹಿತ ಮಗು ಸಾವಿಗೆ ಈಡಾದದ್ದರಿಂದ ಅವರಿಗಾದ ಆಘಾತ ಇಮ್ಮಡಿಯಾಗಿತ್ತು.

ಅಪಹರಣಕಾರರು ತಾವು ಅಪಹರಿಸಿದ ಮಕ್ಕಳನ್ನು ಸುಸ್ಥಿತಿಯಲ್ಲಿ ಅವರ ಮಾತಾ-ಪಿತರಿಗೆ ಒಪ್ಪಿಸುವುದು ತೀರಾ ವಿರಳ. ನಮ್ಮ ಮಕ್ಕಳು ಅಪಹರಣಕ್ಕೆ ಒಳಗಾದಾಗ ಅವರು ದೈಹಿಕ ಅಥವಾ ಮಾನಸಿಕ ಆಘಾತಕ್ಕೆ ಒಳಗಾಗಿಯೇ ಆಗುತ್ತಾರೆ ಎನ್ನುವುದನ್ನು ನಾವು ಮನಗಾಣಬೇಕು.

ನಗರಗಳಲ್ಲಿ ಹಣದ ಆಸೆಗಾಗಿ ಮಕ್ಕಳನ್ನು ಅಪಹರಿಸುತ್ತಾರೆ. ಕೆಲವೊಮ್ಮೆ ಮಕ್ಕಳ ಮೈ ಮೇಲಿರುವ ಆಭರಣದಾಸೆಗೆ ಅಪಹರಿಸಿ, ಆಭರಣಗಳನ್ನು ಕಸಿದುಕೊಂಡು ಮಕ್ಕಳನ್ನು ಬಿಟ್ಟುಬಿಡುತ್ತಾರೆ. ಕೆಲವೊಮ್ಮೆ ಮಕ್ಕಳ ಪಾಲಕರಿಂದ ಅಪಹರಣಕಾರರು ಬೇಡಿದ ಹಣ ಪಡೆಯಲು ಅಪಹರಣವಾಗುತ್ತದೆ. ಹಳ್ಳಿ ಪ್ರದೇಶಗಳಲ್ಲಿ ಮಕ್ಕಳನ್ನು ಬೇರೆ ಕಾರಣಕ್ಕೆ ಅಪಹರಿಸುತ್ತಾರೆ. ಅಪಹರಿಸಿದ ಮಕ್ಕಳ ಅಂಗಾಂಗಗಳನ್ನು ಊನ ಮಾಡಿ ಅವರನ್ನು ಬೇರೆ ಬೇರೆ ನಗರಗಳಿಗೆ ರವಾನಿಸಿ ಆ ಮಕ್ಕಳಿಂದ ಭಿಕ್ಷೆ ಬೇಡಿಸುತ್ತಾರೆ. ಇನ್ನು ಕೆಲವು ಬಾರಿ ಅಪರಿಚಿತ ಮಕ್ಕಳನ್ನು ವೇಶ್ಯಾವೃತ್ತಿಗಾಗಿ ಅಪಹರಿಸಲಾಗುತ್ತದೆ. ಒಟ್ಟಿನಲ್ಲಿ ಅಪಹರಣವಾದ ಮಕ್ಕಳು ತಮ್ಮ ತಂದೆ-ತಾಯಿಗಳ ಮನೆಗೆ ವಾಪಸ್ ಬರಲಿ ಅಥವಾ ಬರದೆ ಇರಲಿ ತೀವ್ರತರವಾದ ಮಾನಸಿಕ, ಶಾರೀರಿಕ ಹಲ್ಲೆಗೆ ಒಳಗಾಗುವುದಂತೂ ಖಂಡಿತ. ಈ ಕಾರಣಕ್ಕಾಗಿ ನಮ್ಮ ಮಕ್ಕಳನ್ನು ನಾವು ಅತ್ಯಂತ ಎಚ್ಚರಿಕೆಯಿಂದ ನೋಡಿಕೊಳ್ಳಬೇಕು.

ಮನೆಯಿಂದ ಮಕ್ಕಳನ್ನು ಶಾಲೆಗೆ ಕಳುಹಿಸುವಾಗ ನಂಬಿಕಸ್ಥ ಜನರ ಜೊತೆಯೇ ಕಳುಹಿಸುವುದು ಉತ್ತಮ. ಶಾಲೆಯ ಬಸ್‌ನಲ್ಲಿ ಅಥವಾ ಆಟೋದಲ್ಲಿ ಹಲವಾರು ಮಕ್ಕಳ ಜೊತೆಗೆ ನಮ್ಮ ಮಕ್ಕಳೂ ಶಾಲೆಗೆ ಹೋಗಿ ಬಂದರೆ ಅವರು ಕ್ಷೇಮವಾಗಿ ಇರುತ್ತಾರೆ. ಮಕ್ಕಳ ಚಲನವಲನಗಳ ಬಗ್ಗೆ ಸರಿಯಾದ ನಿಗಾ ಇಡಬೇಕು. ಒಂದು ವೇಳೆ ನಾವೇ ನಮ್ಮ ವೈಯಕ್ತಿಕ ವಾಹನದಲ್ಲಿ ಮಕ್ಕಳನ್ನು ಶಾಲೆಗೆ ಬಿಡುವ ಪರಿಪಾಠವನ್ನು ಹೊಂದಿದ್ದರೆ ಶಾಲೆಯ ವಾಚ್‌ಮನ್‌ಗಾಗಲೀ ಅಥವಾ ಟೀಚರ್‌ಗಾಗಲೀ ನಮ್ಮ ಮಕ್ಕಳನ್ನು ಶಾಲೆಗೆ ಬಿಡಲು ಹಾಗೂ ಕರೆದೊಯ್ಯಲು ಬರುವವರ ಬಗ್ಗೆ ಸಂಪೂರ್ಣ ಮಾಹಿತಿಯನ್ನು ನೀಡಬೇಕು.

ಶಾಲೆಯ ಆವರಣಕ್ಕೆ ಬಂದು ಪೆಪ್ಪರ್‌ಮೆಂಟ್, ಬಲೂನ್ ಇತ್ಯಾದಿಗಳ ಆಮಿಷಗಳನ್ನು ಒಡ್ಡಿ ಮಕ್ಕಳನ್ನು ಅಪಹರಿಸುವುದು ಅಪಹರಣಕಾರರು ಉಪಯೋಗಿಸುವ ಸಾಮಾನ್ಯ ಕ್ರಮ. ನಮ್ಮ ಮಕ್ಕಳಿಗೆ ಅಪರಿಚಿತರು ಬಂದು ಆಸೆ-ಆಮಿಷಗಳನ್ನು ಒಡ್ಡಿದರೂ ಅವರ ಬಳಿ ಹೋಗದೇ ಇರುವಂತೆ ತರಬೇತಿ ನೀಡಿರಬೇಕು. ಕಂಡ ಕಂಡವರ ಜೊತೆ ಅವರು ಎಷ್ಟೇ ಒಳ್ಳೆಯವರೆನಿಸಿದರೂ ಹೋಗಬಾರದೆಂದೂ ತಿಳಿಸಿರಬೇಕು. ಒಮ್ಮೊಮ್ಮೆ ಶಾಲೆಯ ವಿರಾಮ ಸಮಯದಲ್ಲಿ ತಂದೆ-ತಾಯಿಗಳು ಶಾಲೆಯ ಬಳಿ ಹೋಗಿ ತಮ್ಮ ಮಕ್ಕಳು ಏನು ಮಾಡುತ್ತಿದ್ದಾರೆ ಎನ್ನುವುದನ್ನು ಅರಿಯುವುದು ಉತ್ತಮ.

ಎಷ್ಟೋ ಬಾರಿ ಮಕ್ಕಳ ಮೇಲೆ ಲೈಂಗಿಕ ಕಿರುಕುಳ ಉಂಟಾಗುತ್ತದೆ. ವಿಕೃತ ಕಾಮಿಗಳು ತಮ್ಮ ಲೈಂಗಿಕ ಆಸೆಯನ್ನು ತೀರಿಸಿಕೊಳ್ಳಲು ಮಕ್ಕಳನ್ನು ಉಪಯೋಗಿಸಿಕೊಳ್ಳುತ್ತಾರೆ. ಗೋವಾದಲ್ಲಿ ಕೆಲ ವರ್ಷಗಳ ಹಿಂದೆ ವಿದೇಶಿ ನಾಗರಿಕನೊಬ್ಬ ಮಕ್ಕಳನ್ನು ಲೈಂಗಿಕವಾಗಿ ಬಳಸಿಕೊಂಡು ಉಂಟಾದ ಹಗರಣ ಇನ್ನೂ ಜನರ ಮನಸ್ಸಿನಿಂದ ಮಾಸಿಲ್ಲ. ಹಲವಾರು ರೀತಿಯ ಆಸೆ-ಆಮಿಷಗಳನ್ನು ಒಡ್ಡಿ ಮಕ್ಕಳನ್ನು ಲೈಂಗಿಕ ಕೃತ್ಯಗಳಿಗೆ ಬಳಸಿಕೊಳ್ಳಲಾಗುತ್ತದೆ. ಸಾಮಾನ್ಯವಾಗಿ ಬಡವರ್ಗದಿಂದ ಬಂದ ಮಕ್ಕಳು ಈ ರೀತಿ ಅಪರಾಧಗಳಿಗೆ ತುತ್ತಾಗುತ್ತಾರೆ.

ಕೆಲವು ತಿಂಗಳ ಹಿಂದೆ ಮುಂಬೈ ನಗರದಲ್ಲಿ ಪಂಚತಾರಾ ಹೋಟೆಲ್ ಒಂದರಲ್ಲಿ ತಂಗಿದ್ದ ವಿದೇಶಿ ದಂಪತಿಗಳು ಬೀದಿಯಲ್ಲಿ ಓಡಾಡುವ ಮಕ್ಕಳಿಗೆ ಹಲವಾರು ರೀತಿಯ ಆಮಿಷಗಳನ್ನು ಒಡ್ಡಿ ಅವರನ್ನು ತಮ್ಮ ಹೋಟೇಲ್ ರೂಂಗೆ ಕರೆಸಿಕೊಂಡು ಅವರ ನಗ್ನ ಭಂಗಿಗಳ ಫೋಟೋ, ವೀಡಿಯೋ ಚಿತ್ರ ತೆಗೆದು ಅವುಗಳನ್ನು ದುಬಾರಿ ಬೆಲೆಗೆ ಮಾರಿರುವ ಘಟನೆ ಜಾಹಿರಾಗೇ ಇದೆ.

ಮಕ್ಕಳು ಅಪ್ರಾಪ್ತರಾಗಿರುವುದರಿಂದ ಎಲ್ಲ ರೀತಿಯ ಅಪರಾಧಗಳಿಗೆ ತುತ್ತಾಗುತ್ತಾರೆ. ಹೀಗಾಗಿ ಅವರನ್ನು ಅಪರಾಧಗಳಿಂದ ರಕ್ಷಿಸಬೇಕಾದ್ದು ತಂದೆ-ತಾಯಿಗಳ ಹಾಗೂ ಪಾಲಕ, ಪೋಷಕರ ಆದ್ಯಕರ್ತವ್ಯವಾಗಿರುತ್ತದೆ. ಎಷ್ಟೋ ಬಾರಿ ತಂದೆ-ತಾಯಿಗಳಿಗೆ ತಮ್ಮ ಮಕ್ಕಳ ಆಸೆಗಳು ಏನು, ಬೇಕು ಬೇಡಗಳೇನು ಎನ್ನುವುದು ತಿಳಿದಿರುವುದಿಲ್ಲ. ಮಕ್ಕಳು ಶಾಲೆಯಿಂದ ವಾಪಸ್ ಬಂದಾಗ ಆ ದಿನ ಶಾಲೆಯಲ್ಲಿ ಏನು ನಡೆಯಿತು ಎನ್ನುವ ಬಗ್ಗೆ ತಂದೆ-ತಾಯಿಗಳು ಕುತೂಹಲ ವ್ಯಕ್ತಪಡಿಸಿದರೆ ಮಕ್ಕಳು ನಡೆದ ಘಟನೆಗಳನ್ನು ಯಥಾವತ್ತಾಗಿ ವಿವರಿಸುತ್ತಾರೆ. ಈ ರೀತಿ ವಿವರಣೆ ಕೇಳುವಾಗ ಏನಾದರೂ ಸಂಶಯ ಬಂದಲ್ಲಿ ತಕ್ಷಣವೇ ಆ ಸಂಶಯದ ನಿವಾರಣೆ ಮಾಡಿಕೊಳ್ಳಬೇಕು. ಮಕ್ಕಳು ತಮ್ಮ ಪಾಡಿಗೆ ತಾವು ಸ್ಕೂಲ್‌ಗೆ ಹೋಗುತ್ತಾರೆ. ಬರುತ್ತಾರೆ ಅವರ ಬಗ್ಗೆ ಚಿಂತಿಸುವ ಅವಶ್ಯಕತೆ ಇಲ್ಲ ಎನ್ನುವ ಭಾವನೆ ಇಟ್ಟುಕೊಂಡರೆ ಮಕ್ಕಳು ಕೂಡ ನಮ್ಮಿಂದ ದೂರಾಗುತ್ತಾರೆ. ಆಗಿಂದಾಗ್ಗೆ ಮಕ್ಕಳ ಶಾಲೆಗೆ ಭೇಟಿ ನೀಡಿ ಉಪಾಧ್ಯಾಯರೊಡನೆ ಮಕ್ಕಳ ವಿದ್ಯಾಭ್ಯಾಸ ಮತ್ತಿತರ ಚಟುವಟಿಕೆಗಳ ಬಗ್ಗೆ ವಿಚಾರಣೆ ಮಾಡಬೇಕು.

ಸಾಮಾನ್ಯವಾಗಿ ಮಕ್ಕಳನ್ನು ಅಪಹರಿಸುವವರು ಅಪರಿಚಿತರಾಗಿರುವುದಿಲ್ಲ. ಹಲವಾರು ಕಿಡ್ನಾಪ್ ಪ್ರಕರಣಗಳಲ್ಲಿ ಕಂಡು ಬಂದಿರುವ ಅಂಶಗಳೆಂದರೆ ಅಪಹರಣಕಾರರು ನಮಗೆ ತಿಳಿದವರೇ ಆಗಿರುತ್ತಾರೆ. ಅವರು ನಮ್ಮ ಬಡಾವಣೆಯಲ್ಲೇ ಇರುವಂತಹವ ರಾಗಿರಬಹುದು. ಅಕ್ಕಪಕ್ಕದ ಮನೆಯವರಾಗಿರಬಹುದು ಅಥವಾ ಸಂಬಂಧಿಕರಾಗಿರಬಹುದು. ಈ ರೀತಿ ಪರಿಚಿತರಾದ್ದರಿಂದ ಮಕ್ಕಳು ಕೂಡ ಸುಲಭವಾಗಿ ಅವರು ಕರೆದಾಗ ಅವರ ಜೊತೆ ಹೋಗಿಬಿಡುತ್ತಾರೆ. ಇದೇ ಕಾರಣಕ್ಕಾಗಿಯೇ ನಾವು ಮಕ್ಕಳಿಗೆ ಯಾವ ಕಾರಣಕ್ಕೂ ಎಷ್ಟೇ ಪರಿಚಿತರಾಗಿದ್ದರೂ ಇತರರ ಜೊತೆ ಹೋಗಬಾರದು ಎನ್ನುವ ಎಚ್ಚರಿಕೆಯನ್ನು ಕೊಡಬೇಕು.

ಕಾಮಪಿಪಾಸುಗಳಿಂದ ಮಕ್ಕಳನ್ನು ದೂರ ಇಡಬೇಕಾದರೆ ನಾವು ನಮ್ಮ ಮಕ್ಕಳಿಗೆ ತಮ್ಮ ದೇಹ ರಕ್ಷಣೆಯ ಕೆಲವು ವಿಷಯಗಳನ್ನು ತಿಳಿಸಿರಬೇಕು. ಅಪರಿಚಿತರಾಗಲೀ, ಪರಿಚಿತರಾಗಲೀ ಬೇಕೆಂತಲೇ ಹತ್ತಿರ ಬಂದು ಅವಶ್ಯಕ್ಕಿಂತ ಹೆಚ್ಚಾಗಿ ಮೈ ಮುಟ್ಟುವುದು, ಚಿವುಟುವುದು, ಇತ್ಯಾದಿಗಳನ್ನು ಮಾಡಿದಾಗ ಕೂಡಲೇ ಅವರಿಂದ ದೂರ ಸರಿಯಬೇಕು. ಯಾರಾದರೂ ಅನವಶ್ಯಕವಾಗಿ ಮೈ ಮುಟ್ಟಿದರೆ ಅಥವಾ ಬಟ್ಟೆ ಬರೆ ಒಳಗಡೆ ಕೈ ಹಾಕಿದರೆ ಬಂದು ತಿಳಿಸಬೇಕು ಎಂದು ಮೊದಲೇ ಹೇಳಿರಬೇಕು.

ಒಂದು ವೇಳೆ ನಮ್ಮ ಮಕ್ಕಳು ಅಪಹರಣಕ್ಕೆ ಗುರಿಯಾದಲ್ಲಿ ಯಾವುದೇ ಕಾರಣಕ್ಕೂ ಧೃತಿಗೆಡಬಾರದು. ಎಷ್ಟೋ ಬಾರಿ ಅಪಹರಣಕಾರರು ಪೊಲೀಸ್‌ಗೆ ಮಾಹಿತಿ ಕೊಟ್ಟರೆ ನಿಮ್ಮ ಮಗುವಿಗೆ ತೊಂದರೆ ಕೊಡುತ್ತೇವೆಂದು ಹೆದರಿಸುತ್ತಾರೆ. ಈ ಹೆದರಿಕೆಗೆ ನಾವು ಈಡಾಗ

ಪೊಲೀಸರಿಗೆ ಮಾಹಿತಿ ನೀಡದೇ ಸಾವೇನಾವಾಗಿ ಹಣ ಕೊಟ್ಟು ಮಕ್ಕಳನ್ನು ಬಿಡಿಸಿಕೊಳ್ಳಲು ಮುಂದಾದರೆ ನಮ್ಮ ಮಕ್ಕಳು ಪದೇ ಪದೇ ಅದೇ ಅಪರಾಧಗಳಿಗೆ ತುತ್ತಾಗುತ್ತಾರೆ. ಈ ಕಾರಣದಿಂದ ಮಕ್ಕಳ ಅಪಹರಣವಾದ ಬಗ್ಗೆ ಸುದ್ದಿ ಬಂದ ತಕ್ಷಣ ಸಮೀಪದ ಪೊಲೀಸ್ ಠಾಣೆಗೆ ತಿಳಿಸುವುದು ಸೂಕ್ತ. ಪೊಲೀಸರು ನಿಮ್ಮ ಮನೆಗೆ ಬರುವ ದೂರವಾಣಿ ಕರೆಗಳ ಬಗ್ಗೆ ನಿಗಾ ಇಟ್ಟು ಬಹಳ ಸುಲಭವಾಗಿ ಅಪಹರಣಕಾರರನ್ನು ಹಿಡಿದು ಅಪಹರಣವಾದ ಮಕ್ಕಳನ್ನು ಬಿಡಿಸಿಕೊಂಡು ಬರುತ್ತಾರೆ.

ಎಲ್ಲಕ್ಕೂ ಮುಖ್ಯವಾಗಿ ಮನೆಯಲ್ಲಿ ಅವರ ಮೇಲೆ ಉಂಟಾಗಬಹುದಾದ ಅಪರಾಧಗಳ ಬಗ್ಗೆ ಮಕ್ಕಳ ತಂದೆ-ತಾಯಿಗಳು, ಪೋಷಕರು ತಿಳುವಳಿಕೆ ನೀಡುವುದು ಈಗಿನ ಕಾಲದಲ್ಲಿ ತೀರಾ ಅಗತ್ಯವಾಗಿದೆ.

# 19

## ಬಾಲಕ/ಬಾಲಕಿಯರ ಶೋಷಣೆ ಸಲ್ಲದು

ನಮ್ಮ ಸಂವಿಧಾನದ 21ನೇಯ ಪರಿಚ್ಛೇದದನ್ವಯ ಭಾರತದಲ್ಲಿ ಹುಟ್ಟಿದ ಎಲ್ಲಾ ಮಕ್ಕಳಿಗೂ ಬದುಕುವ ಹಕ್ಕನ್ನು ನೀಡಲಾಗಿದೆ. ಇದೇ ರೀತಿ ಪರಿಚ್ಛೇದ 21(ಎ) ಅನ್ವಯ 6 ರಿಂದ 14 ವರ್ಷದೊಳಗಿನ ಎಲ್ಲಾ ಮಕ್ಕಳಿಗೂ ಶಿಕ್ಷಣವನ್ನು ಮೂಲಭೂತ ಹಕ್ಕು ಎಂದು ಪ್ರತಿಪಾದಿಸಲಾಗಿದೆ. ಪರಿಚ್ಛೇದ 45ರನ್ವಯ ಭಾರತದಲ್ಲಿ ಹುಟ್ಟಿದ ಪ್ರತಿಯೊಂದು ಮಗುವಿಗೂ 14 ವರ್ಷಗಳವರೆಗೆ ಉಚಿತ ಕಡ್ಡಾಯ ಶಿಕ್ಷಣ ನೀಡಬೇಕಾಗಿದೆ. ಪರಿಚ್ಛೇದ 24ರನ್ವಯ 14 ವರ್ಷದ ಒಳಗಿನ ಮಕ್ಕಳನ್ನು ಯಾವುದೇ ಅಪಾಯಕಾರಿ ದುಡಿಮೆಯಲ್ಲಿ ದುಡಿಸುವುದನ್ನು ನಿಷೇಧಿಸಲಾಗಿದೆ.

ಇದಲ್ಲದೆ 1986ರಲ್ಲಿ ಭಾರತ ಸರ್ಕಾರವು ಬಾಲ ಕಾರ್ಮಿಕ ಪದ್ಧತಿ ನಿಯಂತ್ರಣ ಹಾಗೂ ನಿಷೇಧ ಕಾಯ್ದೆಯನ್ನು ರೂಪಿಸಿ ಇದರನ್ವಯ ಯಾವ ಯಾವ ಕ್ಷೇತ್ರಗಳಲ್ಲಿ ಮಕ್ಕಳ ದುಡಿಮೆ ಸಲ್ಲದು ಎಂದು ನಿಯಮಗಳನ್ನು ಮಾಡಿರುತ್ತದೆ. ಬಾಲಕಾರ್ಮಿಕರಿಗೆ ಸಂಬಂಧಿಸಿದಂತೆ ರಚಿಸಲಾಗಿರುವ ನಿಯಮಗಳ ಸ್ಥೂಲ ಚಿತ್ರ ಈ ಕೆಳಕಂಡಂತಿದೆ.

ಬಾಲ ಕಾರ್ಮಿಕ ಪದ್ಧತಿ (ನಿಷೇಧ ಮತ್ತು ನಿಯಂತ್ರಣ)ಕಾಯ್ದೆಯನ್ವಯ 14 ವರ್ಷಕ್ಕಿಂತ ಕಡಿಮೆಯ ಮಕ್ಕಳನ್ನು ಕೆಲವು ನಿರ್ದಿಷ್ಟ ಉದ್ಯೋಗಗಳಲ್ಲಿ ತೊಡಗಿಸುವ ಹಾಗಿಲ್ಲ. ಯಾವ ಯಾವ ಕ್ಷೇತ್ರಗಳಲ್ಲಿ ಬಾಲ ಕಾರ್ಮಿಕರನ್ನು ಬಳಸಿಕೊಳ್ಳಬಹುದು. ಎಂತಹ ಕ್ಷೇತ್ರಗಳಲ್ಲಿ ಯಾವ ರೀತಿ ದುಡಿಮೆ ಮಾಡಿಸಿಕೊಳ್ಳಬಹುದೆಂದು ಈ ಕಾನೂನು ತಿಳಿಸುತ್ತದೆ.

ಈ ಕೆಳಕಂಡ ಕ್ಷೇತ್ರಗಳಲ್ಲಿ/ ಉದ್ಯೋಗಗಳಲ್ಲಿ ಬಾಲ ಕಾರ್ಮಿಕರ ದುಡಿತವನ್ನು ನಿಷೇಧಿಸಲಾಗಿದೆ.

**ಭಾಗ-1 ಉದ್ಯೋಗಗಳು**

1. ರೈಲುಮಾರ್ಗದ ಮೂಲಕ ಪ್ರಯಾಣಿಕರ, ಸರಕುಗಳ ಅಥವಾ ಅಂಚೆಯ ಸಾಗಾಣಿಕೆ.
2. ರೈಲ್ವೆ ಆವರಣದಲ್ಲಿ ಇದ್ದಿಲು ಆಯುವುದು, ಬೂದಿಗುಂಡಿಯನ್ನು ಶುಚಿಗೊಳಿಸುವುದು ಅಥವಾ ಕಟ್ಟಡ ನಿರ್ಮಾಣದ ಕೆಲಸ ಮಾಡುವುದು.
3. ರೈಲ್ವೆ ನಿಲ್ದಾಣದಲ್ಲಿ ಊಟ ತಿಂಡಿ ಮಾರಾಟ ಮಾಡುವ ಸ್ಥಾಪನೆಯಲ್ಲಿ ಕೆಲಸ ಮಾಡುವುದು, ಒಂದು ಪ್ಲಾಟ್‌ಫಾರ್ಮ್‌ನಿಂದ ಮತ್ತೊಂದು ಪ್ಲಾಟ್‌ಫಾರ್ಮ್‌ಗೆ ಅಥವಾ ಚಲಿಸುವ ರೈಲುಗಾಡಿಯ ಒಳಗಡೆ ಅಥವಾ ಹೊರಗಡೆ ಓಡಾಡಿ ಮಾರಾಟ ಮಾಡುವ ಅಥವಾ ಉದ್ಯೋಗದಾತನನ್ನು ಒಳಗೊಂಡಂತೆ.
4. ರೈಲ್ವೆ ನಿಲ್ದಾಣದಲ್ಲಿ ಕಟ್ಟಡದ ಕಾಮಗಾರಿಗೆ ಸಂಬಂಧಿಸಿದ ಕೆಲಸ ಮಾಡವುದು, ಒಂದು ಪ್ಲಾಟ್‌ಫಾರ್ಮ್‌ನಿಂದ ಮತ್ತೊಂದು ಪ್ಲಾಟ್‌ಫಾರ್ಮ್‌ಗೆ ಅಥವಾ ಚಲಿಸುವ ರೈಲುಗಾಡಿಯ ಒಳಗಡೆ ಅಥವಾ ಹೊರಗಡೆ ಓಡಾಡಿ ಮಾರಾಟ ಮಾಡುವ ಅಥವಾ ಉದ್ಯೋಗದಾತನನ್ನು ಒಳಗೊಂಡಂತೆ.
5. ಯಾವುದೇ ಬಂದರಿನ ಪರಿಮಿತಿಯಲ್ಲಿ ಬಂದರು ಪ್ರಾಧಿಕಾರದಲ್ಲಿ.
6. ತಾತ್ಕಾಲಿಕ ಪರವಾನಗಿಯೊಂದಿಗೆ ಸಿಡಿಮದ್ದು ಮಾರಾಟ ಮಾಡುವುದು ಹಾಗೂ ಪಟಾಕಿ ಮಾರಾಟ ಮಾಡುವುದಕ್ಕೆ ಸಂಬಂಧಿಸಿದ ಕೆಲಸಗಳು.
7. ಕಸಾಯಿಖಾನೆಗಳಲ್ಲಿ/ ಪ್ರಾಣಿವಧೆ ನಡೆಸುವ ಅಂಗಡಿಗಳಲ್ಲಿ
8. ಮೋಟಾರುವಾಹನಗಳ ವರ್ಕ್‌ಶಾಪ್ ಹಾಗೂ ಗ್ಯಾರೇಜುಗಳಲ್ಲಿ
9. ಕುಲುಮೆಗಳಲ್ಲಿ
10. ವಿಷವಸ್ತುಗಳ ಅಥವಾ ಉರಿಯುವ ವಸ್ತುಗಳ ಅಥವಾ ಸ್ಫೋಟಕ ವಸ್ತುಗಳ ನಿರ್ವಹಣೆಯಲ್ಲಿ.
11. ಕೈಮಗ್ಗ ಅಥವಾ ವಿದ್ಯುತ್ ಚಾಲಿತ ಮಗ್ಗದ ಉದ್ಯಮದಲ್ಲಿ
12. ಗಣಿಗಳು (ಭೂಮಿಯ ಅಡಿಯಲ್ಲಿ ಹಾಗೂ ನೀರಿನ ಅಡಿಯಲ್ಲಿ) ಹಾಗೂ ಕಲ್ಲಿದ್ದಲು ಗಣಿಗಳಲ್ಲಿ
13. ಪ್ಲಾಸ್ಟಿಕ್ ಘಟಕಗಳಲ್ಲಿ ಹಾಗೂ ಫೈಬರ್‌ಗ್ಲಾಸ್ ವರ್ಕ್ ಶಾಪ್‌ಗಳಲ್ಲಿ.

## ಭಾಗ-ಬಿ

## ಪ್ರಕ್ರಿಯೆಗಳು

1. ಬೀಡಿ ಕಟ್ಟುವಿಕೆ
2. ಕಾರ್ಪೆಟ್ ಹೆಣಿಗೆ
3. ಸಿಮೆಂಟ್ ತಯಾರಿಕೆ, ಅದನ್ನು ಚೀಲಕ್ಕೆ ತುಂಬುವುದನ್ನು ಸೇರಿದಂತೆ
4. ಬಟ್ಟೆಯ ಮೇಲಿನ ಮುದ್ರಣ, ಬಣ್ಣ ಹಾಕುವುದು ಮತ್ತು ಹೆಣಿಗೆ
5. ಸ್ಫೋಟಕ, ಸಿಡಿಮದ್ದು ಹಾಗೂ ಬೆಂಕಿಪೊಟ್ಟಣ ತಯಾರಿ
6. ಅಭ್ರಕ ಕತ್ತರಿಸುವುದು, ಸೀಳುವುದು
7. ಶುದ್ಧ ಅರಗು ತಯಾರಿಕೆ
8. ಸಾಬೂನು ತಯಾರಿಕೆ
9. ಚರ್ಮ ಹದ ಮಾಡುವುದು
10. ಉಣ್ಣೆ ಹದ ಮಾಡುವುದು
11. ಕಟ್ಟಡ ಕಟ್ಟುವುದು ಮತ್ತು ಕಟ್ಟಡ ನಿರ್ಮಾಣ
12. ಹರಳಿನ ಉತ್ಪನ್ನಗಳ ತಯಾರಿಕೆ
13. ಬಳಪದ ಪೆನ್ಸಿಲ್ಲುಗಳ ತಯಾರಿಕೆ (ಪ್ಯಾಕ್ ಮಾಡುವುದು ಸೇರಿದಂತೆ)
14. ವಿಷಯುಕ್ತ ಲೋಹಗಳು ಮತ್ತು ವಿಷಯುಕ್ತ ವಸ್ತುಗಳಾದ ಸೀಸ, ಪಾದರಸ, ಮ್ಯಾಂಗನೀಸ್, ಕ್ರೋಮಿಯಂ, ಕ್ಯಾಡ್ಮಿಯಂ, ಬೆನ್‌ಝೀನ್, ಕೀಟನಾಶಕಗಳು ಮತ್ತು ಕಲ್ನಾರುಗಳ ತಯಾರಿಕೆಯ ಪ್ರಕ್ರಿಯೆಗಳು
15. ಕಾರ್ಖಾನೆಗಳ ಅಧಿನಿಯಮ, 1948 (1948-63)ರ ಅನುಬಂಧ 2 (ಸಿಬಿ)ಯಲ್ಲಿ ನಿರ್ವಚಿಸಲಾಗಿರುವ "ಅಪಾಯಕಾರಿ ಪ್ರಕ್ರಿಯೆಗಳು" ಅನುಬಂಧ 87ರ ಅನ್ವಯ ರೂಪಿಸಲಾಗಿರುವ ಶಾಸನದಲ್ಲಿ ಸೂಚಿತವಾಗಿರುವ "ಅಪಾಯಕಾರಿ ಕಾರ್ಯಾಚರಣೆಗಳು"
16. ಕಾರ್ಖಾನೆಗಳ ಅಧಿನಿಯಮ, 1948 (1948-63ರ ಅನುಬಂಧ 2(k)(iv)ರಲ್ಲಿ ನಿರ್ವಹಿಸಲ್ಪಟ್ಟಿರುವಂತೆ
17. ಗೇರು ಹಣ್ಣಿನಿಂದ ಬೀಜ ಬೇರ್ಪಡಿಸುವಿಕೆ, ಗೇರು ಬೀಜದ ಸಿಪ್ಪೆ ಸುಲಿಯುವಿಕೆ ಹಾಗೂ ಸಂಸ್ಕರಣೆ
18. ಅಗರಬತ್ತಿ ತಯಾರಿಕೆ

19. ಇಲೆಕ್ಟ್ರಾನಿಕ್ ಉದ್ದಿಮೆಗಳಲ್ಲಿ ಬೆಸುಗೆಯ ಕೆಲಸಗಳು
20. ಬೆಸುಗೆ, ಲೇತ್ ಕೆಲಸ, ನೆಗ್ಗಿಸುವುದು ಮತ್ತು ಬಣ್ಣ ಬಳಿಯುವಂತಹ ಸಂಬಂಧಪಟ್ಟ ಇತರ ಕೆಲಸಗಳು ಸೇರಿದಂತೆ ಮೋಟಾರು ವಾಹನಗಳ ದುರಸ್ತಿ ಹಾಗೂ ನಿರ್ವಹಣೆ
21. ಇಟ್ಟಿಗೆ ಗೂಡು ಹಾಗೂ ಮಾಡಿನ ಹೆಂಚು ನಿರ್ಮಾಣ ಘಟಕಗಳು
22. ಹತ್ತಿ ಬೀಜ ಬೇರ್ಪಡಿಸುವುದು ಹಾಗೂ ಸಂಸ್ಕರಣೆ ಮತ್ತು ಒಳ ಉಡುಪುಗಳಂತಹ ಸರಕುಗಳ ಉತ್ಪಾದನೆ
23. ಶುದ್ಧಿಕಾರಕ ಉತ್ಪನ್ನಗಳ ತಯಾರಿಕೆ
24. ಫೇಬ್ರಿಕೇಷನ್ ಕಾರ್ಯಾಗಾರಗಳು (ಕಬ್ಬಿಣ ಮತ್ತು ಕಬ್ಬಿಣವಲ್ಲದ)
25. ರತ್ನಗಳನ್ನು ಕತ್ತರಿಸುವುದು ಹಾಗೂ ಮೆರುಗು ನೀಡುವುದು
26. ಕ್ರೋಮೈಟ್ ಹಾಗೂ ಮ್ಯಾಂಗನೀಸ್ ಅದಿರುಗಳ ನಿರ್ವಹಣೆ
27. ಸೆಣಬು ನೇಯ್ಗೆಯ ಉತ್ಪನ್ನ ಹಾಗೂ ತೆಂಗಿನ ನಾರಿನ ತಯಾರಿಕೆ
28. ಸುಣ್ಣದ ಕಲ್ಲಿನ ಆವಿಗೆ ಹಾಗೂ ತೆಂಗಿನ ನಾರಿನ ತಯಾರಿಕೆ
29. ಬೀಗದ ತಯಾರಿಕೆ
30. ಸೀಸಕ್ಕೆ ಒಡ್ಡಿಕೊಳ್ಳಬೇಕಾಗುವಂತಹ ತಯಾರಿಕಾ ಪ್ರಕ್ರಿಯೆಗಳು ಪ್ರಥಮ ಹಾಗೂ ದ್ವಿತೀಯ ಹಂತಗಳಲ್ಲಿ ಲೋಹ ಕರಗಿಸಿ ಅದಿರು ತೆಗೆಯುವುದು, ಸೀಸದ ಬೆಸುಗೆ ಹಾಗು ಕತ್ತರಿಸುವಿಕೆ ಬಣ್ಣ ಲೇಪಿತ ಲೋಹದ ನಿರ್ಮಾಣ, ಆರ್ಗ್ಯಾನಿಕ್ ಸಿಲಿಕೇಟ್, ಪಾಲಿವಿನೈಲ್ ಕ್ಲೋರೈಡ್‌ನ ಬೆಸುಗೆ ಅಥವಾ ವಿದ್ಯುಲ್ಲೇಪನ, ಹರಳು ಗಾಜಿನ ಮುದ್ದೆಯ ಮಿಶ್ರಣ ಮಾಡುವುದು (ಕೈಯಲ್ಲಿ), ಸೀಸದ ಬಣ್ಣವನ್ನು ಕೆರೆದು ತೆಗೆಯುವುದು, ಬಣ್ಣ ನೀಡುವ ಕಾರ್ಯಾಗಾರಗಳಲ್ಲಿ ಸೀಸವನ್ನು ಸುಡುವುದು ಸೀಸದ ಗಣಿಗಾರಿಕೆ, ಸೀಸದ ಪೈಪುಗಳ ಕೆಲಸ, ಕೇಬಲ್ ಮಾಡುವುದು, ವೈರಿಂಗ್ ಪೇಟೆಂಟಿಂಗ್, ಸೀಸದ ಎರಕ ಹೊಯ್ಯುವುದು, ಮುದ್ರಣಾಲಯಗಳಲ್ಲಿ ಸೀಸದ ಮೊಳೆಯ ಕೆಲಸ ಮಾಡುವುದು, ಕಾರಿನ ಬಿಡಿ ಭಾಗಗಳ ಜೋಡಣೆ, ಗುಂಡು ತಯಾರಿಕೆ, ಗಾಜಿನ ವಸ್ತುಗಳ ತಯಾರಿಕೆ. ಉಜ್ಜಿಸುವಿಕೆ
31. ಸಿಮೆಂಟಿನ ಕೊಳವೆಗಳ ತಯಾರಿಕೆ, ಸಿಮೆಂಟಿನ ಉತ್ಪನ್ನಗಳು ಹಾಗೂ ಇತರ ಸಂಬಂಧಿತ ಕೆಲಸಗಳು
32. ಗಾಜಿನ ತಯಾರಿಕೆ, ಬಳೆಗಳೂ ಸೇರಿದಂತೆ ಗಾಜಿನ ವಸ್ತುಗಳು, ಫ್ಲೋರೋಸೆಂಟ್ ಟ್ಯೂಬುಗಳು, ಬಲ್ಬ್‌ಗಳು ಹಾಗೂ ಇಂತಹುದೇ ಇನ್ನಿತರ ಗಾಜಿನ ಉತ್ಪನ್ನಗಳು
33. ಬಣ್ಣಗಳ ಮತ್ತು ಬಣ್ಣದ ವಸ್ತುಗಳ ತಯಾರಿಕೆ
34. ಕಳೆನಾಶಕಗಳ ಹಾಗೂ ಕ್ರಿಮಿನಾಶಕಗಳ ತಯಾರಿಕೆ ಅಥವಾ ನಿರ್ವಹಣೆ

35. ತುಕ್ಕು ಹಿಡಿಯುವ ಹಾಗೂ ವಿಷಕಾರಕ ಪದಾರ್ಥಗಳ ಸಂಸ್ಕರಣೆ ಹಾಗೂ ನಿರ್ವಹಣೆ
36. ಉರಿಯುವ ಕಲ್ಲಿದ್ದಲು ಹಾಗೂ ಕಲ್ಲಿದ್ದಲಿನ ಇಟ್ಟಿಗೆಗಳ ತಯಾರಿಕೆ
37. ಸಿಂಥೆಟಿಕ್ ಸಾಮಗ್ರಿಗಳು, ರಸಾಯನಿಕ ಪದಾರ್ಥಗಳು ಹಾಗೂ ಚರ್ಮದ ವಸ್ತುಗಳಿಗೆ ಒಡ್ಡಿಕೊಳ್ಳುವ ರೀತಿಯನ್ನು ಒಳಗೊಂಡಂತೆ ಆಟೋಟದ ಸಾಮಗ್ರಿಗಳ ತಯಾರಿಕೆ
38. ಫೈಬರ್ ಗ್ಲಾಸ್ ಮತ್ತು ಪ್ಲಾಸ್ಟಿಕ್‌ನ ಎರಕ ಹಾಗೂ ಸಂಸ್ಕರಣೆ
39. ತೈಲ ಸುರಿಯುವಿಕೆ ಮತ್ತು ತೈಲ ಶುದ್ಧಿಕರಣಾಗಾರ
40. ಕಾಗದದ ತಯಾರಿಕೆ
41. ಕುಂಬಾರಿಕೆ ಮತ್ತು ಸಿರ್ಯಾಮಿಕ್ ಉದ್ಯಮ
42. ಹೊಳಪು ನೀಡುವುದು, ಕತ್ತರಿಸುವುದು, ಬೆಸುಗೆ ಹಾಕುವುದು ಸೇರಿದಂತೆ ಎಲ್ಲಾ ವಿಧದ ಹಿತ್ತಾಳೆಯ ಸರಕುಗಳ ತಯಾರಿಕೆ
43. ಟ್ರ್ಯಾಕ್ಟರುಗಳು, ಒಕ್ಕುವ ಹಾಗೂ ಕೊಯ್ಲಿನ ಯಂತ್ರಗಳನ್ನು ಬಳಸಿ ನಡೆಸುವ ವ್ಯವಸಾಯದ ಪ್ರಕ್ರಿಯೆಗಳು ಹಾಗೂ ಹುಲ್ಲು ಅಥವಾ ದಂಟು ಕತ್ತರಿಸುವಿಕೆ
44. ಮರದ ಕಾರ್ಖಾನೆಯಲ್ಲಿ ಎಲ್ಲಾ ಪ್ರಕ್ರಿಯೆಗಳು
45. ರೇಷ್ಮೆ ಸಂಸ್ಕರಣೆ
46. ಚರ್ಮದ ಉತ್ಪನ್ನಗಳ ತಯಾರಿಕೆಗಾಗಿ ಚರ್ಮ ಸುಲಿಯುವಿಕೆ, ಬಣ್ಣ ನೀಡುವಿಕೆಯ ಕೆಲಸಗಳು
47. ಕಲ್ಲು ಒಡೆಯುವುದು ಹಾಗೂ ಜಲ್ಲಿ ಒಡೆಯುವುದು
48. ತಂಬಾಕು ತಯಾರಿಕೆ, ಹೊಗೆಸೊಪ್ಪು, ಪಟ್ಟಿ ಮಾಡುವುದು ಮತ್ತು ಯಾವುದೇ ಬಗೆಯಲ್ಲಿ ತಂಬಾಕು ಸೊಪ್ಪಿನ ನಿರ್ವಹಣೆ ಸೇರಿದಂತೆ ತಂಬಾಕು ಸಂಸ್ಕರಣೆ
49. ಟಯರ್ ತಯಾರಿಕೆ, ದುರಸ್ತಿ, ರಿಟ್ರೇಡಿಂಗ್ ಮತ್ತು ಗ್ರಾಫೈಟ್ ಸಂಸ್ಕರಣೆ
50. ಪಾತ್ರೆಗಳ ತಯಾರಿಕೆ, ಹೊಳಪು ನೀಡುವಿಕೆ ಹಾಗೂ ಲೋಹಕ್ಕೆ ಮೆರುಗು ನೀಡುವಿಕೆ
51. ಜರಿ ತಯಾರಿಕೆ (ಎಲ್ಲಾ ಪ್ರಕ್ರಿಯೆಗಳು)

(i) ಅಂಶ

(2) ಈ ಕೆಳಗೆ ಸೂಚಿಸಿರುವಂತೆ ಬದಲಾಗುತ್ತದೆ

(3) ಪೂರ್ವ ತಯಾರಿ ಹಾಗೂ ತತ್ಸಂಬಂಧಿತ ಪ್ರಕ್ರಿಯೆಗಳೆಲ್ಲವನ್ನೂ ಒಳಗೊಂಡಂತೆ ಕಾರ್ಪೆಟ್ ಹೆಣಿಗೆ.

(ii) ಅಂಶ

(4) ಈ ಕೆಳಗೆ ಸೂಚಿಸಿರುವಂತೆ ಬದಲಾಗುತ್ತದೆ.

(5) ಪೂರ್ವ ತಯಾರಿ ಹಾಗೂ ತತ್ಸಂಬಂಧಿತ ಪ್ರಕ್ರಿಯೆಗಳೆಲ್ಲವನ್ನೂ ಒಳಗೊಂಡಂತೆ ಬಟ್ಟೆಯ ಮೇಲಿನ ಮುದ್ರಣ, ಬಣ್ಣ ಹಾಕುವಿಕೆ ಹಾಗೂ ನೇಯ್ಗೆ

**23ನೇ ಮೇ 2002ರ ಘೋಷಣೆ**

52. ವಿದ್ಯುಲ್ಲೇಪನ (ವಿದ್ಯುತ್ ಬಳಕೆಯ ಮುಖಾಂತರ ಲೋಹಗಳಿಗೆ ಚಿನ್ನ ಅಥವಾ ಬೆಳ್ಳಿಯ ಲೇಪನ ನೀಡುವುದು)

53. ಗ್ರಾಫೈಟ್ ಪುಡಿ ಮಾಡುವುದು ಮತ್ತು ತತ್ಸಂಬಂಧಿತ ಕೆಲಸಗಳು

54. ಲೋಹಗಳಿಗೆ ಸಾಣೆ ಹಿಡಿಯುವುದು ಅಥವಾ ಮೆರುಗು ನೀಡುವುದು

55. ವಜ್ರಗಳನ್ನು ಕತ್ತರಿಸುವುದು ಮತ್ತು ಹೊಳಪು ನೀಡುವುದು

56. ಗಣಿಗಳಿಂದ ಬಳಪ ತೆಗೆಯುವುದು

57. ಚಿಂದಿ ಆಯುವುದು ಮತ್ತು ಬೀದಿ ಗುಡಿಸುವುದು.

ಬಾಲ ಕಾರ್ಮಿಕ ನಿಷೇಧ ಹಾಗೂ ನಿಯಂತ್ರಣ ಕಾಯ್ದೆಯನ್ವಯ ಮೇಲೆ ಕಾಣಿಸಿದ ಉದ್ಯೋಗ ಹಾಗೂ ಪ್ರಕ್ರಿಯೆಗಳಲ್ಲಿ ಬಾಲ ಕಾರ್ಮಿಕರನ್ನು ದುಡಿಸಿಕೊಂಡರೆ 3 ತಿಂಗಳಿಂದ ಒಂದು ವರ್ಷದವರೆಗೆ ಜೈಲಿಗೆ ಕಳುಹಿಸಬಹುದಾಗಿದೆ. ಇದಲ್ಲದೆ ರೂ. 10,000/-ಗಳಿಂದ 20,000/- ಗಳವರೆಗೆ ದಂಡ ವಿಧಿಸಬಹುದಾಗಿದೆ.

ಸಂಜೆ 7.00 ಗಂಟೆಯಿಂದ ಮುಂಜಾನೆ 8.00 ಗಂಟೆಯವರೆಗೆ ಬಾಲ ಕಾರ್ಮಿಕರ ದುಡಿಮೆಯನ್ನು ನಿಷೇಧಿಸಲಾಗಿದೆ. ಇದಲ್ಲದೆ ಬಾಲ ಕಾರ್ಮಿಕರಿಗೆ ಓವರ್ ಟೈಂ ದುಡಿಮೆ ನಿಷೇಧ. ಬಾಲ ಕಾರ್ಮಿಕರನ್ನು ದುಡಿಸಿಕೊಳ್ಳುವ ಜಾಗಗಳಲ್ಲಿ ವಾರಕ್ಕೆ ಒಂದು ದಿನ ಕಡ್ಡಾಯವಾಗಿ ರಜೆಯನ್ನು ನೀಡಬೇಕಾಗಿದೆ.

1976ರ ಜೀತ ಪದ್ಧತಿ ನಿರ್ಮೂಲನ ಕಾಯ್ದೆ ಪ್ರಕಾರ ಯಾವುದೇ ಬಾಲಕರನ್ನು ಜೀತಕ್ಕೆ ಇಡುವಂತಿಲ್ಲ.

ಕರ್ನಾಟಕ ಅಂಗಡಿ ಮತ್ತು ವಾಣಿಜ್ಯ ಸಂಸ್ಥೆ ಕಾಯ್ದೆಯನ್ವಯ 14 ವರ್ಷದೊಳಗಿನ ಮಕ್ಕಳ ದುಡಿಮೆಯನ್ನು ಸಂಪೂರ್ಣವಾಗಿ ನಿಷೇಧಿಸಲಾಗಿದ್ದು, ಒಂದು ವೇಳೆ ಮಕ್ಕಳನ್ನು ದುಡಿಸಿದಲ್ಲಿ ಅಂಗಡಿ ಮಾಲೀಕರಿಗೆ ರೂ. 10,000/- ವರೆಗೆ ದಂಡ ವಿಧಿಸಿ, 3 ವರ್ಷದವರೆಗೆ ಜೈಲು ಶಿಕ್ಷೆ ವಿಧಿಸಲಾಗುವುದು.

ಬಾಲ ಕಾರ್ಮಿಕರ ದುಡಿಮೆಗೆ ಸಂಬಂಧಿಸಿದಂತೆ 1996 ಡಿಸೆಂಬರ್‌ನಲ್ಲಿ ಭಾರತದ ಸರ್ವೋಚ್ಚ ನ್ಯಾಯಾಲಯವು ಐತಿಹಾಸಿಕ ತೀರ್ಪನ್ನು ನೀಡಿದೆ. ಈ ತೀರ್ಪಿನನ್ವಯ 14

ವರ್ಷದ ಒಳಗಿನ ಯಾವುದೇ ಮಕ್ಕಳನ್ನು ಯಾವುದೇ ಕಾರಣಕ್ಕಾಗಿಯೂ ಅಪಾಯಕಾರಿ ಕ್ಷೇತ್ರದಲ್ಲಿ ದುಡಿಸುವುದನ್ನು ಸಂಪೂರ್ಣವಾಗಿ ನಿಷೇಧಿಸಲಾಗಿದೆ. ಒಂದು ವೇಳೆ ದುಡಿಸಿದಲ್ಲಿ ಬಾಲ ಕಾರ್ಮಿಕನ ಕುಟುಂಬಕ್ಕೆ ರೂ. 20,000/- ದಂಡ ನೀಡಬೇಕು. ಅಲ್ಲದೆ ಸರ್ಕಾರ ಕೂಡ ರೂ. 5,000/- ದಂಡವನ್ನು ತೆರಬೇಕು. ಈ ಹಣವನ್ನು ಜಿಲ್ಲಾಧಿಕಾರಿಯ ಕಲ್ಯಾಣ ನಿಧಿಯಲ್ಲಿ ಠೇವಣಿಯನ್ನಾಗಿಟ್ಟು, ಅದಕ್ಕೆ ಬರುವ ಬಡ್ಡಿಯಲ್ಲಿ ಮಗುವಿಗೆ ಶಿಕ್ಷಣ ನೀಡಬೇಕು. ಪುನರ್‌ವಸತಿ ಹೊಂದಿದ ಮಕ್ಕಳ ಶಿಕ್ಷಣಕ್ಕೆ ಮೂಲಭೂತ ಸೌಕರ್ಯಗಳನ್ನು ಶಿಕ್ಷಣ ಇಲಾಖೆ ಒದಗಿಸಬೇಕಾಗಿದೆ.

ಕರ್ನಾಟಕ ಸರ್ಕಾರವು ತನ್ನ ನೌಕರರ ಸೇವಾ ನಡವಳಿಕೆ ಕಾಯ್ದೆಗೆ ತಿದ್ದುಪಡಿಯೊಂದನ್ನು ತಂದು ಸರ್ಕಾರಿ ನೌಕರರು ತಮ್ಮ ಮನೆ ಕೆಲಸಕ್ಕಾಗಿ 14 ವರ್ಷಗಳ ವಯಸ್ಸಿಗೆ ಕಡಿಮೆ ಇರುವ ಮಕ್ಕಳನ್ನು ಇಟ್ಟುಕೊಳ್ಳುವುದನ್ನು ಸಂಪೂರ್ಣವಾಗಿ ನಿಷೇಧಿಸಲಾಗಿದೆ.

ಸಂವಿಧಾನದಲ್ಲಿ ನೀಡಿರುವ ಮಕ್ಕಳ ಹಕ್ಕುಗಳ ರಕ್ಷಣೆ ನಮ್ಮೆಲ್ಲರ ಜವಾಬ್ದಾರಿ.

# 20

## ಅಪರಾಧ ತಡೆ : ಕಾನೂನಿನಲ್ಲಿ ಅವಕಾಶಗಳು

ಪೊಲೀಸರಿಗೆ ಕೊಟ್ಟಿರುವ ಅತಿ ಮುಖ್ಯ ಜವಾಬ್ದಾರಿ ಅಪರಾಧ ತಡೆಗಟ್ಟುವಿಕೆ. ಕಾನೂನಿನಲ್ಲಿ ಅಪರಾಧಗಳನ್ನು ತಡೆಯಲು ಪೊಲೀಸರಿಗೆ ಹಲವಾರು ಅಧಿಕಾರಗಳನ್ನು ನೀಡಿದ್ದಾರೆ. ಅವುಗಳಲ್ಲಿ ಪ್ರಮುಖವಾದ ಕೆಲವೊಂದನ್ನು ಇಲ್ಲಿ ವಿವರಿಸುತ್ತೇನೆ.

ಯಾವುದೇ ವ್ಯಕ್ತಿಯು ಸಂಶಯಾಸ್ಪದ ರೀತಿಯಲ್ಲಿ ಚಲನ-ವಲನ ಮಾಡುತ್ತಿದ್ದರೆ ಅಂತಹವರನ್ನು ಬಂಧಿಸಿ ಪ್ರಶ್ನಿಸುವ ಅವಕಾಶ ಪೊಲೀಸರಿಗೆ ಇದೆ. ಹಿಂದಿನ ಲೇಖನಗಳಲ್ಲಿ ತಿಳಿಸಿದಂತೆ ಯಾವನೇ ವ್ಯಕ್ತಿಯು, ಸಂಶಯ ಬಂದ ಪೊಲೀಸರು ಕೇಳಿದಾಗ ತನ್ನ ಹೆಸರು ಹಾಗೂ ವಿಳಾಸವನ್ನು ಸರಿಯಾಗಿ ಕೊಡದಿದ್ದರೆ ಅವನನ್ನು ಪೊಲೀಸರು ಬಂಧಿಸಬಹುದು. ಅದೇ ರೀತಿ ಯಾವನೇ ವ್ಯಕ್ತಿಯು ತನ್ನ ಬಳಿಯಲ್ಲಿ ಕನ್ನ ಹಾಕುವ  ಸಾಮಗ್ರಿಗಳನ್ನು ಇಟ್ಟುಕೊಂಡಿದ್ದರೆ ಅಂತಹವನನ್ನು ಬಂಧಿಸಬಹುದಾಗಿದೆ. ಇದರಿಂದ ಅವನು ಮಾಡಲು ಉದ್ದೇಶಿಸಿರುವ ಅಪರಾಧವನ್ನು ತಡೆಯಬಹುದಾಗಿದೆ.

ದಂಡ ಪ್ರಕ್ರಿಯಾ ಸಂಹಿತೆಯ ಕಲಂ 109ರಲ್ಲಿ ಒಬ್ಬ ವ್ಯಕ್ತಿಯು ಕಾಗ್ನಿಸಬಲ್ ಅಪರಾಧವನ್ನು ಮಾಡುತ್ತಾನೆ ಎನ್ನುವ ಸಂಶಯ ಪೊಲೀಸರಿಗೆ ಉಂಟಾದಾಗ ಅವನನ್ನು ಪ್ರತಿಬಂಧಿಸಬಹುದು ಎಂದು ತಿಳಿಸಲಾಗಿದೆ. ಈ ಕಲಂ ಪ್ರಕಾರ ಯಾವನೇ ಒಬ್ಬ ವ್ಯಕ್ತಿಯು ತನ್ನ ಇರುವಿಕೆಯನ್ನು ಬಚ್ಚಿಟ್ಟುಕೊಳ್ಳುತ್ತಿದ್ದರೆ ಮತ್ತು ಆ ರೀತಿ ಬಚ್ಚಿಟ್ಟುಕೊಳ್ಳುವುದು ಒಂದು ಕಾಗ್ನಿಸಬಲ್ ಅಪರಾಧ ಮಾಡುವ ಉದ್ದೇಶಕ್ಕೆ ಎಂದು ಸಂಬಂಧಿಸಿದ ನ್ಯಾಯಾಧೀಶರಿಗೆ ಮನವರಿಕೆಯಾದರೆ ಸದರೀ ನ್ಯಾಯಾಧೀಶರು ಅಂತಹ ವ್ಯಕ್ತಿಯನ್ನು ಕರೆದು ಅವನಿಗೆ ನೋಟಿಸ್

ನೀಡಿ ಆ ವ್ಯಕ್ತಿಯಿಂದ ಮುಂದಿನ ಒಂದು ವರ್ಷದವರೆಗೆ ತಾನು ಉತ್ತಮ ನಡವಳಿಕೆ ಮಾಡುತ್ತೇನೆ ಎಂದು ಮುಚ್ಚಳಿಕೆ ಬರೆಸಿಕೊಳ್ಳಬಹುದು. ಈ ಅಧಿಕಾರವನ್ನು ಚಲಾಯಿಸುವುದಕ್ಕೆ ಪೊಲೀಸರು ನ್ಯಾಯಾಲಯಕ್ಕೆ ವರದಿಯನ್ನು ಒದಗಿಸಬೇಕಾಗಿದೆ. ಉದಾಹರಣೆಗೆ: 'ಎ' ಎನ್ನುವ ವ್ಯಕ್ತಿ ಅಪರಾಧ ಮಾಡಲು ಹೊಂಚು ಹಾಕುತ್ತಿದ್ದಾನೆ ಎಂದು ಪೊಲೀಸರಿಗೆ ಮಾಹಿತಿ ಬರುತ್ತದೆ. ಅಂತಹ ಸಮಯದಲ್ಲಿ ಪೊಲೀಸರು 'ಎ'ಯನ್ನು ಬಂಧಿಸಿ ಅವನ ವಿರುದ್ಧ ಒಂದು ವರದಿಯನ್ನು ತಯಾರು ಮಾಡಿ ಅವನು ಕಾಗ್ನಿಸಬಲ್ ಅಪರಾಧ ಮಾಡಲು ಹೊಂಚು ಹಾಕುತ್ತಿದ್ದಾನೆ ಎಂದು ನಮೂದಿಸಿ ಅವನನ್ನು ಮ್ಯಾಜಿಸ್ಟ್ರೇಟರ ಮುಂದೆ ಹಾಜರು ಮಾಡುತ್ತಾರೆ. ಆಗ ಮ್ಯಾಜಿಸ್ಟ್ರೇಟರು 'ಎ' ಮೇಲಿನ ಆರೋಪ ಬಲವಾಗಿದೆ ಎಂದು ಮನಗಂಡರೆ ಅವನ ಬಳಿ ಮುಚ್ಚಳಿಕೆ ಬರೆಸಿಕೊಂಡು ಅವನು ಮುಂದೆ ಅಪರಾಧ ಎಸಗದಂತೆ ತಡೆ ಹಾಕುತ್ತಾರೆ.

ಇದೇ ರೀತಿ ಕರ್ನಾಟಕ ಪೊಲೀಸ್ ಅಧಿನಿಯಮದ ಕಲಂ 97ರನ್ವಯ ಯಾವನೇ ವ್ಯಕ್ತಿ ಸೂರ್ಯಾಸ್ತದ ನಂತರ ಹಾಗೂ ಸೂರ್ಯೋದಯದ ಒಳಗೆ ಸಂಶಯ ಬರುವ ರೀತಿಯಲ್ಲಿ ಓಡಾಡುತ್ತಾ ಇದ್ದರೆ ಪೊಲೀಸರು ಅವನನ್ನು ಬಂಧಿಸಿ ಕ್ರಮ ತೆಗೆದುಕೊಳ್ಳುವ ಅಧಿಕಾರ ಹೊಂದಿದ್ದಾರೆ. ಈ ಆರೋಪ ಸಾಬೀತಾದರೆ ಮ್ಯಾಜಿಸ್ಟ್ರೇಟರು ಆರೋಪಿಗೆ ಮೂರು ತಿಂಗಳ ಕಾರಾಗೃಹವಾಸ ನೀಡಬಹುದು.

ಕಲಂ 98 ಕೆ.ಪಿ.ಆಕ್ಟ್ (ಕರ್ನಾಟಕ ಪೊಲೀಸ್ ಅಧಿನಿಯಮ) ಅನ್ವಯ ಒಬ್ಬ ವ್ಯಕ್ತಿ ತನ್ನ ಬಳಿಯಲ್ಲಿ ಇರುವ ವಸ್ತುವಿನ ಸ್ವಾಧೀನತೆಗೆ ಸಮಾಧಾನಕರ ವಿವರಣೆ ನೀಡದಿದ್ದರೆ ಅವನನ್ನು ಬಂಧಿಸಬಹುದು. ಆರೋಪ ಸಾಬೀತಾದರೆ ಮೂರು ತಿಂಗಳ ಕಾರಾಗೃಹವಾಸ. ಉದಾಹರಣೆಗೆ :ರಾತ್ರಿ ವೇಳೆ ಒಬ್ಬ ವ್ಯಕ್ತಿ ಒಂದು ವಿ.ಸಿ.ಆರ್. ಒಯ್ಯುತ್ತಾ ಪೊಲೀಸರಿಗೆ ಸಿಕ್ಕುತ್ತಾನೆ. ಆ ವಿಡಿಯೋ ರೆಕಾರ್ಡರ್ ಬಗ್ಗೆ ಪೊಲೀಸರು ಕೇಳಿದ ಪ್ರಶ್ನೆಗೆ ಆತ ಸಮಾಧಾನಕರ ಉತ್ತರ ನೀಡದಿದ್ದರೆ ಆ ವೀಡಿಯೋ ಕಳ್ಳತನದ ಮಾಲು ಎಂದು ಪೊಲೀಸರು ಸಂಶಯಿಸಿ ಆತನನ್ನು 98 ಕೆ.ಪಿ. ಆ್ಯಕ್ಟ್ ಅನ್ವಯ ಬಂಧಿಸಬಹುದು.

ಕಲಂ 109, 96, 98 ಸ್ವತ್ತಿಗೆ ಸಂಬಂಧಿಸಿದ ಅಪರಾಧಗಳನ್ನು ತಡೆಯುವಂತಹ ಕಲಂಗಳಾಗಿದ್ದರೆ, ಸಾರ್ವಜನಿಕ ಶಾಂತಿಭಂಗ ತಡೆಯಲು ರೂಪಿಸಿರುವ ಕಲಂಗಳೇ ಬೇರೆ. ದಂಡ ಪ್ರಕ್ರಿಯಾ ಸಂಹಿತೆಯ ಕಲಂ 106 ಮತ್ತು 107ರ ಅನ್ವಯ ನ್ಯಾಯಾಧೀಶರು ಕೆಲವು ವ್ಯಕ್ತಿಗಳಿಂದ ಮುಂದಿನ ಮೂರು ವರ್ಷಗಳವರೆಗೆ ಉತ್ತಮ ನಡವಳಿಕೆ ಇಟ್ಟುಕೊಳ್ಳುತ್ತೇನೆಂದು ಬಾಂಡ್ ಬರೆಸಿಕೊಳ್ಳಬಹುದು.

ಕಲಂ 106ರನ್ವಯ ಯಾವನಾದರೂ ವ್ಯಕ್ತಿಯು ಹೊಡೆದಾಟ, ಗಲಭೆ, ಬೆದರಿಕೆ ಹಾಕುವುದು ಅಥವಾ ಯಾವುದಾದರೂ ಶಾಂತಿಭಂಗ ತಡೆಯಲು ರೂಪಿಸಿರುವ ಕಲಂಗಳೇ ಬೇರೆ. ದಂಡ ಪ್ರಕ್ರಿಯಾ ಸಂಹಿತೆಯ ಕಲಂ 106 ಮತ್ತು 107ರ ಅನ್ವಯ ನ್ಯಾಯಾಧೀಶರು ಕೆಲವು ವ್ಯಕ್ತಿಗಳಿಂದ ಮುಂದಿನ ಮೂರು ವರ್ಷಗಳವರೆಗೆ ಉತ್ತಮ ನಡವಳಿಕೆ ಇಟ್ಟುಕೊಳ್ಳುತ್ತೇನೆಂದು ಬಾಂಡ್ ಬರೆಸಿಕೊಳ್ಳಬಹುದು.

ದಂಡ ಪ್ರಕ್ರಿಯಾ ಸಂಹಿತೆ ಕಲಂ 107 ಮುಚ್ಚಳಿಕೆ ಪತ್ರವನ್ನು ಕಾರ್ಯಾಂಗ ನ್ಯಾಯಾಧೀಶರು ಬರೆಸಿಕೊಳ್ಳುವ ವಿಧಾನ ಹೇಳುತ್ತದೆ. ಕಾರ್ಯಾಂಗ ನ್ಯಾಯಾಧೀಶರು ಎಂದರೆ ಸರಕಾರವು ತನ್ನ ಕೆಲವು ಅಧಿಕಾರಿಗಳಿಗೆ ಕಾನೂನಿನ ಅಧಿಕಾರ ನೀಡಿರುವ ವ್ಯಕ್ತಿಗಳು, ಅಂದರೆ ತಾಲ್ಲೂಕು ಮ್ಯಾಜಿಸ್ಟ್ರೇಟರು(ತಹಸೀಲ್ದಾರರು), ಸಬ್ ಡಿವಿಜನ್ ಮ್ಯಾಜಿಸ್ಟ್ರೇಟರು (ಅಸಿಸ್ಟೆಂಟ್ ಕಮೀಷನರ್) ಹಾಗೂ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರು (ಡೆಪ್ಯೂಟಿ ಕಮೀಷನರ್-ಪೋಲೀಸ್ ಕಮೀಷನರ್)ಈ ಅಧಿಕಾರಿಗಳು ಮ್ಯಾಜಿಸ್ಟ್ರೇಟರ ಅಧಿಕಾರವನ್ನು ಚಲಾಯಿಸುತ್ತಾರೆ. ಇವರನ್ನು ಕಾರ್ಯಾಂಗ (ಎಕ್ಸಿಕ್ಯೂಟಿವ್) ಮ್ಯಾಜಿಸ್ಟ್ರೇಟ್ ಎಂದು ಕರೆಯುತ್ತಾರೆ. ಸಾಮಾನ್ಯವಾಗಿ ಪೋಲೀಸರಿಗೆ ಯಾವುದೇ ಒಂದು ಊರಿನಲ್ಲಿ ಅಥವಾ ಬಡಾವಣೆಯಲ್ಲಿ ಕೆಲವೊಂದು ಜನ ಗುಂಪು ಕಟ್ಟಿಕೊಂಡು ಕೋಮು ವೈಷಮ್ಯ ಇಟ್ಟುಕೊಂಡು ಒಬ್ಬರ ಮೇಲೆ ಒಬ್ಬರು ಹಲ್ಲೆ ಮಾಡಿಕೊಂಡು ಸಾರ್ವಜನಿಕರ ಶಾಂತಿಗೆ ಭಂಗ ತರುತ್ತಾರೆ ಎನ್ನುವ ಸಂಶಯ ಬಂದರೆ ಪೋಲೀಸರು ಎರಡೂ ಗುಂಪುಗಳ ಮೇಲೆ ದಂಡ ಪ್ರಕ್ರಿಯಾ ಸಂಹಿತೆ ಕಲಂ 107ರ ಮೇರೆಗೆ ದೂರನ್ನು ದಾಖಲಿಸಿಕೊಂಡು ಎರಡೂ ಗುಂಪುಗಳನ್ನು ಕಾರ್ಯಾಂಗ ಮ್ಯಾಜಿಸ್ಟ್ರೇಟರ ಮುಂದೆ ಹಾಜರುಪಡಿಸುತ್ತಾರೆ. ಈ ದೂರನ್ನು ವಿಚಾರಣೆ ಮಾಡಿದ ಮ್ಯಾಜಿಸ್ಟ್ರೇಟರು ಆ ಎರಡೂ ಗುಂಪುಗಳ ಬಳಿಯಿಂದ ಉತ್ತಮ ನಡವಳಿಕೆಯ ಬಗ್ಗೆ ಅಂದರೆ ಸಾರ್ವಜನಿಕರ ಶಾಂತಿಯನ್ನು ಭಂಗ ಮಾಡುವಂತಹ ಯಾವುದೇ ಕಾರ್ಯವನ್ನು ತಾವು ಮಾಡುವುದಿಲ್ಲ ಎಂದು ಮುಚ್ಚಳಿಕೆ ಬರೆಸಿಕೊಳ್ಳಬಹುದು.

ಕಲಂ 106 ಹಾಗೂ 107ಕ್ಕೆ ಇರುವ ಮುಖ್ಯ ವ್ಯತ್ಯಾಸ ಎಂದರೆ ಕಲಂ 106ರಲ್ಲಿ ಬಾಂಡ್ ಬರೆಸಿಕೊಳ್ಳುವವರು ನ್ಯಾಯಾಂಗ ಮ್ಯಾಜಿಸ್ಟ್ರೇಟ್ ಆಗಿದ್ದು, ಬಾಂಡು ಬರೆದು ಕೊಡುವ ವ್ಯಕ್ತಿಯು ಅಪರಾಧ ಒಂದರಲ್ಲಿ ಶಿಕ್ಷೆಗೆ ಒಳಗಾಗಿರುತ್ತಾನೆ. ಕಲಂ 107ರಲ್ಲಿ ಬಾಂಡ್ ಬರೆದುಕೊಡುವ ವ್ಯಕ್ತಿಯು ಶಿಕ್ಷೆಗೆ ಒಳಪಟ್ಟಿರಬೇಕಾಗಿರುವುದಿಲ್ಲ ಹಾಗೂ ಬಾಂಡನ್ನು ಬರೆಸಿಕೊಳ್ಳುವವರು ಕಾರ್ಯಾಚರಣೆ ಮ್ಯಾಜಿಸ್ಟ್ರೇಟರು.

ದಂಡ ಪ್ರಕ್ರಿಯಾ ಸಂಹಿತೆಯ ಕಲಂ 110ರನ್ವಯ ಯಾವನಾದರೂ ವ್ಯಕ್ತಿ ಪದೇ ಪದೇ ಅಪರಾಧ ಮಾಡುತ್ತಿದ್ದರೆ ಅಂತಹವನನ್ನು ಬಂಧಿಸಿ ಅವನಿಂದ ಮುಂದೆ ಅಪರಾಧ ಮಾಡುವುದಿಲ್ಲ ಎಂದು ಮುಚ್ಚಳಿಕೆ ಬರೆಸಿಕೊಳ್ಳಬಹುದು. ಯಾವನಾದರೂ ಒಬ್ಬ ವ್ಯಕ್ತಿ ಸ್ವಭಾವತಃ ಮನೆಕಳ್ಳತನ, ಕಳ್ಳತನ, ಜಬರಿ ಕಳವು, ಫೋರ್ಜರಿ ಮಾಡುತ್ತಿದ್ದರೆ, ಅಥವಾ ಕಳುವಿನ ಮಾಲನ್ನು ಸ್ವೀಕರಿಸುವ ವ್ಯಕ್ತಿಯಾಗಿದ್ದರೆ, ಅಥವಾ ಕಿಡ್ನಾಪಿಂಗ್, ಮೋಸ ಇತ್ಯಾದಿ ಅಪರಾಧಗಳನ್ನು ಪದೇ ಪದೇ ಮಾಡುತ್ತಿದ್ದರೆ ಅಥವಾ ಹಲವಾರು ವಿಶೇಷ ಕಾನೂನುಗಳ ಅನ್ವಯ ಬರುವ ಹಾಗೂ ಐ.ಪಿ.ಸಿ.ಯ 12ನೇ ಅಧ್ಯಾಯದಲ್ಲಿ ಹೇಳಿರುವ ಅಪರಾಧಗಳನ್ನು ಮಾಡುತ್ತಲೇ ಇದ್ದರೆ, ಅಥವಾ ಆ ವ್ಯಕ್ತಿಯು ರಕ್ಷಣೆ ರಹಿತ ಇರುವಿಕೆ ಸಮಾಜಕ್ಕೆ ತೊಂದರೆ ಉಂಟು ಮಾಡಬಹುದಾಗಿದ್ದರೆ ಅಂತಹ ವ್ಯಕ್ತಿಗೆ ನ್ಯಾಯಾಂಗ ಮ್ಯಾಜಿಸ್ಟ್ರೇಟರು ಒಳ್ಳೆಯ ನಡವಳಿಕೆ ಮಾಡುತ್ತೇನೆ ಎಂದು ಮುಚ್ಚಳಿಕೆ ಬರೆದುಕೊಡಲು ಆದೇಶಿಸಬಹುದು.

ಇಟ್ಟುಕೊಳ್ಳುವುದು ಪ್ರಚೋದನಕಾರಿ ಕೃತ್ಯಗಳನ್ನು ಮಾಡುವುದು ಮುಂತಾದ ಕೃತ್ಯಗಳನ್ನು ನಿಷೇಧಿಸಬಹುದಾಗಿದೆ.

ಸಾಮಾನ್ಯವಾಗಿ ನಿಷೇಧಾಜ್ಞೆಯನ್ನು ಜಾರಿ ಮಾಡಬೇಕಾದಲ್ಲಿ ಈ ಆಜ್ಞೆಗಳನ್ನು ಜನಗಳ ಮಾಹಿತಿಗಾಗಿ ಲೌಡ್ ಸ್ಪೀಕರ್ ಮೂಲಕ ಹಾಗೂ ವೃತ್ತ ಪತ್ರಿಕೆಗಳ ಮೂಲಕ ಪ್ರಕಟಿಸಬೇಕು. ನಿಷೇಧಾಜ್ಞೆಯನ್ನು ಉಲ್ಲಂಘನೆ ಮಾಡಿದರೆ ಭಾರತದ ದಂಡ ಸಂಹಿತೆ (ಐ.ಪಿ.ಸಿ)ಅನ್ವಯ ಶಿಕ್ಷೆಗೆ ಅರ್ಹರಾಗುತ್ತಾರೆ.

ಒಂದು ವೇಳೆ ಯಾವುದಾದರೂ ಸ್ಥಿರ ಆಸ್ತಿ ಬಗ್ಗೆ ವಿವಾದ ಇದ್ದು ಅದರ ಕಾರಣದಿಂದ ಘರ್ಷಣೆ ಉಂಟಾಗಿ ಶಾಂತಿಭಂಗ ಆಗಬಹುದೆನ್ನುವ ಸಂದರ್ಭ ಬಂದರೆ ಕಾರ್ಯಾಂಗ ನ್ಯಾಯಾಧೀಶರು ದಂಡ ಪ್ರಕ್ರಿಯಾ ಸಂಹಿತೆ ಕಲಂ 145ನ್ನು ಉಪಯೋಗಿಸಬಹುದು. ಈ ಕಲಂ ಅನ್ವಯ ಆದೇಶ ಜಾರಿ ಮಾಡಿ ಸಂಬಂಧಪಟ್ಟ ಎಲ್ಲಾ ಪಾರ್ಟಿಗಳು ತನ್ನ ಮುಂದೆ ಹಾಜರಾಗುವಂತೆ ನ್ಯಾಯಾಧೀಶರು ಆದೇಶಿಸಬಹುದು ಹಾಗೂ ಸಂಬಂಧಪಟ್ಟ ವ್ಯಕ್ತಿಗಳ ಸ್ಥಿರ ಆಸ್ತಿಯನ್ನು ವಿಚಾರಣೆ ಮುಗಿಯುವವರೆಗೆ ಮೂರನೇ ವ್ಯಕ್ತಿ ಒಬ್ಬ ನೋಡಿಕೊಳ್ಳುವಂತೆ ಆದೇಶ ಮಾಡಬಹುದು. ಉದಾಹರಣೆಗೆ : ಒಂದು ಹೊಲದ ಬಗ್ಗೆ ಎರಡು ಪಾರ್ಟಿಗಳಲ್ಲಿ ವಿವಾದ ಇರುತ್ತದೆ. ವಿವಾದವನ್ನು ವಿಚಾರಣೆ ಮಾಡುತ್ತಿರುವ ಸಂದರ್ಭಗಳಲ್ಲಿ ಆ ಹೊಲದಲ್ಲಿ ಬೆಳೆ ಬೆಳೆದಿರುವುದು ತಿಳಿದುಬರುತ್ತದೆ. ಭೂಮಿ ವಿವಾದ ಇರುವುದರಿಂದ ಫಸಲನ್ನು ಯಾರಿಗೆ ಕೊಡಬೇಕು ಎನ್ನುವ ಜಿಜ್ಞಾಸೆ ಮೂಡುತ್ತದೆ. ಅಂತಹ ಸಂದರ್ಭದಲ್ಲಿ ಮ್ಯಾಜಿಸ್ಟ್ರೇಟರು ಪ್ರಕರಣ ಇತ್ಯರ್ಥವಾಗುವವರೆಗೆ ರಿಸೀವರ್ ಒಬ್ಬರನ್ನು ನೇಮಿಸಿ ಆ ಜಮೀನನ್ನು ನೋಡಿಕೊಂಡು ಫಸಲನ್ನು ವಿಲೇವಾರಿ ಮಾಡುವುದು ಮತ್ತು ವಿಲೇವಾರಿಯಿಂದ ಬಂದಂತಹ ಹಣವನ್ನು ಜಮಾ ಮಾಡಬಹುದೆಂದೂ ಆದೇಶ ನೀಡಬಹುದು. ಸಾಮಾನ್ಯವಾಗಿ ಇಂತಹ ವಿವಾದಗಳು ಸಿವಿಲ್ ಪ್ರಕರಣಗಳಿಗೆ ಸಂಬಂಧಿಸಿರುತ್ತವೆ. ಆದರೆ ಈ ವಿವಾದದಿಂದ ಶಾಂತಿ ಭಂಗ ಆಗುತ್ತದೆ ಎನ್ನುವ ವರದಿ, ಕಾರ್ಯಾಂಗ ನ್ಯಾಯಾಧೀಶರಿಗೆ ಬಂದರೆ ಅವರು ಕಲಂ 145ನ್ನು ಉಪಯೋಗಿಸುತ್ತಾರೆ. ಕಲಂ 145ನ್ನು ಬಳಸುವಾಗ ಕಾರ್ಯಾಂಗ ನ್ಯಾಯಾಧೀಶರು ಸಿವಿಲ್ ನ್ಯಾಯಾಧೀಶರುಗಳು ವಿವಾದಿತ ಜಾಗದ ಬಗ್ಗೆ ಕೊಟ್ಟಂತಹ ತೀರ್ಮಾನಕ್ಕೆ ವಿರುದ್ಧವಾಗಿ ನಡೆಯಲು ಆಗುವುದಿಲ್ಲ.

ಒಬ್ಬ ಪೊಲೀಸ್ ಅಧಿಕಾರಿ ಕಾಗ್ನಿಸಬಲ್ ಅಪರಾಧವನ್ನು ತಡೆಗಟ್ಟಲು ಕ್ರಮ ಕೈಗೊಳ್ಳಬೇಕೆಂದು ದಂಡ ಪ್ರಕ್ರಿಯಾ ಸಂಹಿತೆಯ ಕಲಂ 149 ಹೇಳುತ್ತದೆ. ಕಲಂ 144 ಮತ್ತು 145ಮ್ಯಾಜಿಸ್ಟ್ರೇಟರು ತೆಗೆದುಕೊಳ್ಳಬಹುದಾದ ಕ್ರಮಗಳನ್ನು ಹೇಳಿದರೆ, ಕಲಂ 149 ಒಬ್ಬ ಪೊಲೀಸ್ ಅಧಿಕಾರಿ ಯಾವುದೇ ಅಪರಾಧವನ್ನು ತಡೆಗಟ್ಟಬಹುದೆಂದು ತಿಳಿಸುತ್ತದೆ. ಒಂದು ವೇಳೆ ಒಬ್ಬ ಪೊಲೀಸ್ ಅಧಿಕಾರಿಗೆ ಕಾಗ್ನಿಸಬಲ್ ಅಪರಾಧ ಆಗುತ್ತದೆ ಎನ್ನುವ ಮಾಹಿತಿ ಬಂದಾಗ ಅದನ್ನು ತಾನೇ ತಡೆಗಟ್ಟಲು ಕಾರ್ಯನಿರತರಾಗಬೇಕು. ಒಂದು ವೇಳೆ ತಾನೊಬ್ಬನಿಗೇ ಆ ಕೆಲಸ ಮಾಡಲಾಗದಿದ್ದಲ್ಲಿ ಆತ ಮಾಹಿತಿಯನ್ನು ತನ್ನ ಮೇಲಧಿಕಾರಿ ಗಾಗಲೀ ಅಥವಾ ಇತರೆ

ಪೊಲೀಸ್ ಅಧಿಕಾರಿಗಳಿಗಾಗಲಿ ಮುಟ್ಟಿಸಬೇಕು. ಕಾಗ್ನಿಸಬಲ್ ಅಪರಾಧ ಆಗುತ್ತದೆ ಎನ್ನುವ ಮಾಹಿತಿ ಬಂದಾಗ ಸಂಬಂಧಪಟ್ಟ ಆರೋಪಿಯನ್ನು ಕೂಡಲೇ ಬಂಧಿಸಿ ಅಪರಾಧವನ್ನು ತಡೆಯಬೇಕು.

ಕಲಂ 152ರನ್ವಯ ಒಬ್ಬ ಪೊಲೀಸ್ ಅಧಿಕಾರಿ ಯಾವುದಾದರೂ ಸಾರ್ವಜನಿಕ ಆಸ್ತಿಗೆ ಧಕ್ಕೆ ಉಂಟಾಗುತ್ತದೆ ಎಂಬ ಮಾಹಿತಿ ಪಡೆದಾಗ ಸಾರ್ವಜನಿಕ ಶಾಂತಿಗೆ ಧಕ್ಕೆ ಉಂಟಾಗುವುದನ್ನು ತಪ್ಪಿಸಲು ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳಬೇಕು.

ಕರ್ನಾಟಕ ಪೊಲೀಸ್ ಕಾಯ್ದೆಯ ಕಲಂ 70ರ ಮೇರೆಗೆ ಸಾರ್ವಜನಿಕರು ಎಂತಹ ಸಂದರ್ಭಗಳಲ್ಲಿ ಪೊಲೀಸ್ ಅಧಿಕಾರಿ ನೀಡಿದ ನಿರ್ದೇಶನಗಳನ್ನು ಅನುಸರಿಸಬೇಕು ಎನ್ನುವುದನ್ನು ತಿಳಿಸುತ್ತದೆ. ಒಂದು ವೇಳೆ ಪೊಲೀಸರು ನೀಡಿದ ನಿರ್ದೇಶನಗಳನ್ನು ಸಾರ್ವಜನಿಕರು ಅನುಸರಿಸದೆ ಇದ್ದಲ್ಲಿ ಅಂತಹವರನ್ನು ಕಲಂ 7 ಕೆ.ಪಿ. ಆ್ಯಕ್ಟ್ ಅನ್ವಯ ಬಂಧಿಸಬಹುದಾಗಿದೆ. ಉದಾಹರಣೆಗೆ: ಎರಡು ದಿನಗಳಿಂದ ನಲ್ಲಿಯಲ್ಲಿ ನೀರು ಬಂದಿಲ್ಲ ಎಂದು ಪ್ರತಿಭಟಿಸಿ ಸಾರ್ವಜನಿಕರ ಗುಂಪು ರಸ್ತೆಯ ಮಧ್ಯದಲ್ಲಿ ಕುಳಿತುಕೊಂಡು ರಸ್ತೆ ತಡೆ ಮಾಡಿ ವಾಹನಗಳ ಓಡಾಟಕ್ಕೆ ಭಂಗ ಉಂಟು ಮಾಡಿದರೆ ಅಂತಹ ಸಂದರ್ಭದಲ್ಲಿ ಆ ವ್ಯಕ್ತಿಗಳನ್ನು ಐ.ಪಿ.ಸಿ. ಕಾನೂನಿನನ್ವಯ ಬಂಧಿಸಬಹುದು. ಆದರೆ ಸಾಧಾರಣವಾಗಿ ಪೊಲೀಸರು ಹಾಗೆ ಮಾಡುವುದಿಲ್ಲ. ಸಾರ್ವಜನಿಕರಿಗೆ ರಸ್ತೆಯನ್ನು ಖಾಲಿ ಮಾಡಿ ವಾಹನಗಳ ಓಡಾಟಕ್ಕೆ ಅನುಕೂಲ ಮಾಡಿಕೊಡಿ ಎಂದು ಕೇಳುತ್ತಾರೆ. ಜನರು ಪೊಲೀಸರ ನಿರ್ದೇಶನ ಉಲ್ಲಂಘಿಸಿದಾಗ ಅವರನ್ನು ಅನಾಮತ್ತಾಗಿ ಆ ಜಾಗದಿಂದ ಹೊರಗೆ ತಂದು ಅವರನ್ನು ಬಂಧಿಸಿ ಠಾಣೆಗೆ ಕರೆದೊಯ್ಯುತ್ತಾರೆ. ಸ್ವಲ್ಪ ಸಮಯದ ನಂತರ ಅವರನ್ನು ಬಿಟ್ಟುಬಿಡುತ್ತಾರೆ. ಇದು ಕಲಂ 71 ಕೆ.ಪಿ. ಆ್ಯಕ್ಟ್ ಪ್ರಕಾರ ಮಾಡುವ ಕಾರ್ಯ.

ದಂಡ ಪ್ರಕ್ರಿಯಾ ಸಂಹಿತೆಯ ಕಲಂ 151ರಲ್ಲಿಯೂ ಇದೇ ರೀತಿಯ ಅಧಿಕಾರವನ್ನು ಪೊಲೀಸರಿಗೆ ಕೊಟ್ಟಿರುತ್ತಾರೆ. ಈ ಕಲಂನ ಪ್ರಕಾರ ಯಾವುದಾದರೂ ಪೊಲೀಸ್ ಅಧಿಕಾರಿಗೆ ಯಾವುದಾದರೂ ವ್ಯಕ್ತಿ ಅಥವಾ ವ್ಯಕ್ತಿಗಳು ಯಾವುದೇ ಕಾಗ್ನಿಸಬಲ್ ಅಪರಾಧ ಮಾಡಬಹುದು ಎಂದು ಸುಳಿವು ಬಂದರೆ ಆ ಅಧಿಕಾರಿ ಅಪರಾಧ ಮಾಡಲು ಉದ್ದೇಶಿಸಿರುವ ವ್ಯಕ್ತಿಯನ್ನು ಅಥವಾ ವ್ಯಕ್ತಿಗಳನ್ನು ಬಂಧಿಸಿ ಪೊಲೀಸ್ ಠಾಣೆಯಲ್ಲಿ ಇಡಬಹುದು. ಆದರೆ ಯಾವುದೇ ಕಾರಣಕ್ಕೂ ಬಂಧಿತ ವ್ಯಕ್ತಿಯನ್ನು ಪೊಲೀಸ್ ಅಧಿಕಾರಿ 24 ಗಂಟೆಗಳಿಗಿಂತ ಹೆಚ್ಚಿಗೆ ತನ್ನ ಬಳಿ ಇಟ್ಟುಕೊಳ್ಳುವಂತಿಲ್ಲ.

ಕರ್ನಾಟಕ ಪೊಲೀಸ್ ಆ್ಯಕ್ಟ್‌ನ ಕಲಂ 94ರನ್ವಯ ಯಾವನಾದರೂ ಒಬ್ಬ ವ್ಯಕ್ತಿ ಬುದ್ಧಿಪೂರ್ವಕವಾಗಿ ಒಂದು ಸ್ಥಳ ಅಥವಾ ಸರ್ಕಾರಿ ಜಾಗಕ್ಕೆ ಅತಿಕ್ರಮ ಪ್ರವೇಶ ಮಾಡುತ್ತಾನೆಂದು ತಿಳಿದಾಗ ಆ ವ್ಯಕ್ತಿಗೆ ಕಟ್ಟುಪಾಡುಗಳನ್ನು ಹಾಕಬಹುದಾಗಿದೆ.

ಅದೇ ರೀತಿ ಕಲಂ 98 ಕೆ.ಪಿ. ಆ್ಯಕ್ಟ್ ಅನ್ವಯ ಯಾವನಾದರೂ ವ್ಯಕ್ತಿ ತನ್ನ ಬಳಿಯಲ್ಲಿ ಕಳ್ಳತನದ ಮಾಲು ಎಂದು ಸಂಶಯ ಬರುವಂತಹ ವಸ್ತುವನ್ನು ಇಟ್ಟುಕೊಂಡು ತನ್ನ ಬಳಿ ಆ ವಸ್ತು

ಹೇಗೆ ಬಂತು ಎನ್ನುವ ಬಗ್ಗೆ ಸಮಾಧಾನಕರವಾದ ವಿವರಣೆ ನೀಡದಿದ್ದಲ್ಲಿ ಅಂತಹ ವ್ಯಕ್ತಿಯನ್ನು ಬಂಧಿಸಿ ಮ್ಯಾಜಿಸ್ಟ್ರೇಟರ ಮುಂದೆ ಹಾಜರುಪಡಿಸಬಹುದು. ಅಂತಹ ವ್ಯಕ್ತಿಗೆ ಮೂರು ತಿಂಗಳವರೆಗೆ ಕಾರಾಗೃಹವಾಸವನ್ನು ವಿಧಿಸಬಹುದು.

ಈಗಾಗಲೇ ತಿಳಿಸಿದಂತೆ ಎಲ್ಲಾ ರೀತಿಯ ಅಪರಾಧಗಳನ್ನು ತಡೆಯುವುದು ಪೊಲೀಸರ ಆದ್ಯ ಕರ್ತವ್ಯ. ದಂಡ ಪ್ರಕ್ರಿಯಾ ಸಂಹಿತೆ ಆಗಲೀ ಅಥವಾ ಕರ್ನಾಟಕ ಪೊಲೀಸ್ ಅಧಿನಿಯಮವಾಗಲೀ ಅಥವಾ ಬೇರೆ ಯಾವುದೇ ವಿಶೇಷ ಕಾಯ್ದೆಯಾಗಲೀ ಪೊಲೀಸರಿಗೆ ಅಪರಾಧಗಳನ್ನು ತಡೆಗಟ್ಟಲು ಸಾಕಷ್ಟು ಅವಕಾಶಗಳನ್ನು ಮಾಡಿಕೊಟ್ಟಿರುತ್ತವೆ. ಆದರೆ ಇತ್ತೀಚಿನ ದಿನಗಳಲ್ಲಿ ಈ ಅವಕಾಶಗಳು ಪರಿಪೂರ್ಣವಾಗಿವೆ ಎಂದು ಹೇಳಲಾಗುವುದಿಲ್ಲ. ಬದಲಾಗುತ್ತಿರುವ ಕಾಲಕ್ಕೆ ಅನ್ವಯ ಕಾನೂನುಗಳನ್ನೂ ಬದಲಾಯಿಸುವ ಅವಶ್ಯಕತೆಗಳು ಕಂಡುಬರುತ್ತವೆ.

ಅಪರಾಧಗಳನ್ನು ತಡೆಯುವಲ್ಲಿ ಸಾರ್ವಜನಿಕರ ಪಾತ್ರ ತುಂಬಾ ಮಹತ್ವದ್ದು. ಹೆಚ್ಚುತ್ತಿರುವ ಜನಸಂಖ್ಯೆಯಿಂದಾಗಿ ರಾತ್ರಿ ವೇಳೆಯಾಗಲಿ ಅಥವಾ ಹಗಲು ವೇಳೆಯಾಗಲಿ ಹೆಚ್ಚು ಹೆಚ್ಚು ಬೀಟುಗಳನ್ನು ಕಳುಹಿಸಿ ಸಂಶಯಾಸ್ಪದ ವ್ಯಕ್ತಿಗಳ ಓಡಾಟದ ಮೇಲೆ ನಿಗಾ ಇಡಲು ಪೊಲೀಸರಿಗೆ ಕಷ್ಟವಾಗುತ್ತದೆ. ಈ ಕಾರಣಕ್ಕೆ ಹಲವಾರು ನಗರಗಳಲ್ಲಿ ಸಾರ್ವಜನಿಕರು ತಮ್ಮಲ್ಲಿ ಗುಂಪುಗಳನ್ನು ಮಾಡಿಕೊಂಡು ಪೊಲೀಸರೊಂದಿಗೆ ರಾತ್ರಿ ಬೀಟ್ ತಿರಗುತ್ತಾರೆ. ಹಲವಾರು ಜಾಗಗಳಲ್ಲಿ ಪೊಲೀಸರಿಗೆ ಸಾರ್ವಜನಿಕರೇ ಗಸ್ತು ತಿರಗುವಂತಹ ವಾಹನಗಳನ್ನು ಕೊಡುಗೆ ನೀಡಿರುತ್ತಾರೆ.

ನನ್ನ ಸ್ಪಷ್ಟ ಅಭಿಪ್ರಾಯದಲ್ಲಿ ಸಾರ್ವಜನಿಕರ ಸಂಪೂರ್ಣ ಸಹಕಾರ ಇಲ್ಲದಿದ್ದರೆ ಪೊಲೀಸರಿಗೆ ಅಪರಾಧಗಳನ್ನು ತಡೆಯಲು ಕಷ್ಟವಾಗುತ್ತದೆ. ಆ ಕಾರಣ ಸಾರ್ವಜನಿಕರು ಹೆಚ್ಚು ಹೆಚ್ಚಾಗಿ ಪೊಲೀಸರ ಜೊತೆ ಭುಜಕ್ಕೆ ಭುಜ ಕೊಟ್ಟು ಅಪರಾಧಗಳನ್ನು ತಡೆಯಲು ಸಕ್ರಿಯ ಪಾತ್ರ ವಹಿಸುವುದು ಇಂದಿನ ಅಗತ್ಯ.

# 21

## ಪೊಲೀಸರು ಎಂತಹ ದೂರುಗಳನ್ನು ಕೈಗೆತ್ತಿಕೊಳ್ಳಬಹುದು

"ಸಂಕಟ ಬಂದಾಗ ವೆಂಕಟರಮಣಾ" ಅಂತಾರೆ. ಆದರೆ ಈಗ ಸಂಕಟ ಬಂದರೆ ನಾವೆಲ್ಲ ಮೊದಲು ಜ್ಞಾಪಿಸಿಕೊಳ್ಳೋದು ಪೊಲೀಸರನ್ನೇ. ಯಾವ್ದೇ ತೊಂದ್ರೆ ಬಂದ್ರೂ, ಹೊಂಡ್ಲಾಗೆ ಫೋನ್ ಮಾಡು. 'ಕಂಟ್ರೋಲ್ ರೂಂಗೆ ತಿಳಿಸು' ಅಥವಾ 'ಪೊಲೀಸರಿಗೆ ಹೇಳೋಣವಾ' ಎನ್ನುವುದೇ ಜನರ ಮೊದಲ ಪ್ರತಿಕ್ರಿಯೆ.

ಪೊಲೀಸರಿಗೆ ಸಂಕಟದಲ್ಲಿರುವ ಹಲವು ಹತ್ತು ಜನರಿಂದ ಪ್ರತಿದಿನವೂ ದೂರು ಬರುತ್ತವೆ. "ನಂ ಮನೆ ಕಳ್ತನ ಆಯ್ತು, ನಾನು ವಾಕಿಂಗ್‌ಗೆ ಹೋಗುವಾಗ ಇಬ್ಬರು ನನ್ನ ಸರವನ್ನು ಕಿತ್ತುಕೊಂಡು ಓಡಿದರು, ಪಕ್ಕದ್ಮನೇಲಿ ಜೋರಾಗಿ ಸ್ಟೀರಿಯೋ ಹಾಕಿದ್ದಾರೆ. ನಮ್ಮ ಹುಡುಗ ಕಿಡ್ನಾಪ್ ಆದ" ಇತ್ಯಾದಿಯಿಂದ ಹಿಡಿದು ನನ್ನ ನಾಯಿ ಕಳೆದುಹೋಯ್ತು, ನಮ್ಮ ಬಾಡಿಗೆದಾರ ಈ ತಿಂಗಳ ಬಾಡಿಗೆ ಕೊಟ್ಟಿಲ್ಲ, "ನನ್ನ ಗೆಳೆಯ ಕೊಟ್ಟ ಸಾಲ ವಾಪಸ್ ಕೊಡು ಅಂತ ಕೇಳಿದ್ದೆ ದಬಾಯಿಸುತ್ತಾನೆ" ಇತ್ಯಾದಿ.

ಇಂತಹ ಎಲ್ಲ ದೂರುಗಳ ಬಗ್ಗೆ ಕ್ರಮ ತೆಗೆದುಕೊಳ್ಳಲು ಪೊಲೀಸರಿಗೆ ಅಧಿಕಾರ ಇಲ್ಲ. ಏಕೆಂದರೆ ಕೆಲವು ದೂರುಗಳು ಪೊಲೀಸರ ವ್ಯಾಪ್ತಿಯಲ್ಲಿ ಬರುವುದಿಲ್ಲ. ಎಷ್ಟೋ ಸಲ ನಾವು ಪೊಲೀಸರಿಗೆ ದೂರು ನೀಡಿದಾಗ "ಇದು ಸಿವಿಲ್ ಕೇಸು, ಇದು ನಾನ್ ಕಾಗ್ನಿಜಬಲ್ ಕೇಸು" ಎಂದು ಹೇಳಿ ಪೊಲೀಸರು ಉತ್ತರ ಕೊಟ್ಟು ನಮ್ಮನ್ನು ಸಾಗ ಹಾಕ್ತಾರೆ. ಆಗ ನಾವು

ಎಂತಹ ಪೊಲೀಸರಪ್ಪಾ ಇವರು. ದೂರು ಕೊಟ್ಟರೆ ಏನು Action ತೊಗೊಳ್ಳಲಿಲ್ಲವಲ್ಲಾ" ಎಂದು ಪೊಲೀಸರಿಗೆ ಬೈಕೊಂಡು ಅವರಿಗೆ ಶಾಪವನ್ನೂ ಹಾಕ್ತೀವಿ.

ಆದ್ರೆ ಪೊಲೀಸರಿಗೆ ಯಾವ ವಿಷಯವನ್ನು ತನಿಖೆ ಮಾಡಬೇಕು, ಯಾವ ದೂರಿನ ಮೇಲೆ ಕ್ರಮ ತಗೋಬೇಕು. ಅಂತ ಇತಿ ಮಿತಿ ಇದೆ. ಠಾಣೆಗೆ ಬಂದ ಎಲ್ಲ ದೂರುಗಳ ಬಗ್ಗೆಯೂ ಪೊಲೀಸರು ಕ್ರಮ ತೆಗೆದುಕೊಳ್ಳಬೇಕಾದಲ್ಲಿ ಅವರ ಈಗಿರುವ ಸಂಖ್ಯೆ ಇನ್ನು ನೂರು ಪಟ್ಟಾಗಬೇಕು.

ಪೊಲೀಸರು ಮೂರು ತರಹದ ಕಾಯ್ದೆಗಳನ್ವಯ ದೂರುಗಳನ್ನು ಸ್ವೀಕರಿಸುತ್ತಾರೆ. ಅವುಗಳೆಂದರೆ :

1. **ಐ.ಪಿ.ಸಿ. (ಭಾರತೀಯ ದಂಡ ಸಂಹಿತೆ)**- ಸರಿ ಸುಮಾರು ಎಲ್ಲ ರೀತಿಯ ಅಪರಾಧಗಳನ್ನೂ ಈ ಸಂಹಿತೆ ಒಳಗೊಂಡಿದೆ.
2. **ವಿಶೇಷ ಕಾನೂನುಗಳು** – ಅಂದರೆ ಆಯುಧಗಳ ಬಗೆಗಿನ ಕಾನೂನು, ಲಂಚ ನಿರೋಧ ಕಾಯ್ದೆ, ವೇಶ್ಯಾವೃತ್ತಿ ನಿರೋಧ ಕಾಯ್ದೆ, ನಾಗರೀಕ ಹಕ್ಕು ರಕ್ಷಣೆ ಕಾಯ್ದೆ ಇತ್ಯಾದಿ...
3. **ಸ್ಥಳೀಯ ಕಾನೂನುಗಳು** – ಅಂದರೆ ಕರ್ನಾಟಕ ಪೊಲೀಸ್ ಕಾಯ್ದೆ,ಕರ್ನಾಟಕ ಅರಣ್ಯ ಕಾಯ್ದೆ, ಕರ್ನಾಟಕ ನಾಗರಿಕ ಸರಬರಾಜು ಕಾಯ್ದೆ ಇತ್ಯಾದಿಗಳು.

ಮೇಲೆ ತಿಳಿಸಿದ ಕಾಯ್ದೆಗಳ ಅನ್ವಯ ಒಬ್ಬ ವ್ಯಕ್ತಿ ಮಾಡಿದ ಕೃತ್ಯ ಅಪರಾಧವಾಗಿದೆ ಎಂದು ತಿಳಿದುಬಂದಲ್ಲಿ ಆಗ ಆ ಬಗ್ಗೆ ಪೊಲೀಸರು ಕೇಸು ದಾಖಲಿಸಬಹುದು. ಪೊಲೀಸ್ ಠಾಣೆಗೆ ಬಂದ ಹಲವು ದೂರುಗಳು ಕಾನೂನಿನ ರೀತ್ಯಾ ಅಪರಾಧವಾದರೂ ಪೊಲೀಸರು ಕೇಸುಗಳನ್ನು ದಾಖಲಿಸಲು ಬರುವುದಿಲ್ಲ ಏಕೆ ಅಂತೀರಾ ?

ದೂರುಗಳಲ್ಲಿ ಎರಡು ವಿಧಗಳಿವೆ – ಒಂದು ಕಾಗ್ನಿಸಬಲ್ ಕೇಸು ಹಾಗೂ ಮತ್ತೊಂದು ನಾನ್ ಕಾಗ್ನಿಸಬಲ್ ಕೇಸು. ಕಾಗ್ನಿಸಬಲ್ ಕೇಸು ಎಂದರೆ ಪೊಲೀಸರು ನ್ಯಾಯಾಲಯದ ಆಜ್ಞೆ ಇಲ್ಲದೆಯೇ, ತಂತಾನೆಯೇ ದೂರನ್ನು ದಾಖಲಿಸಿ ತನಿಖೆ ಕೈಕೊಳ್ಳುವಂತಹ ಪ್ರಕರಣಗಳು. ಇಂತಹ ಕೇಸುಗಳಿಗೆ ಉದಾಹರಣೆ ಎಂದರೆ, ಕೊಲೆ. ದರೋಡೆ, ಮನೆ ಕಳ್ಳತನ, ಜಬರಿ ಕಳವು ಇತ್ಯಾದಿ. ಇಂತಹ ಕೇಸುಗಳ ಬಗ್ಗೆ ದೂರು ಬಂದ ಕೂಡಲೇ ಪೊಲೀಸ್ ಠಾಣೆಯಲ್ಲಿ ಕೇಸನ್ನು ದಾಖಲಿಸಿ ಕೂಡಲೇ ತನಿಖೆ ಕೈಗೊಳ್ಳಲಾಗುತ್ತದೆ.

ನಾನ್ ಕಾಗ್ನಿಸಬಲ್ ಕೇಸ್ ಎಂದರೆ ಪೊಲೀಸರು ನೇರವಾಗಿ ದೂರು ದಾಖಲಿಸಿ ತನಿಖೆ ಮಾಡಲಾರದಂತಹ ಕೇಸು. ಉದಾಹರಣೆ: ನೀವು ದಾರಿಯಲ್ಲಿ ಹೋಗುತ್ತಿದ್ದಾಗ ಯಾವುದೋ ವ್ಯಕ್ತಿ ನಿಮ್ಮೊಡನೆ ಜಗಳ ತೆಗೆದು ನಿಮ್ಮ ಕಪಾಳಕ್ಕೆ ಬಾರಿಸುತ್ತಾನೆ. ಈ ಬಗ್ಗೆ ನೀವು ಪೊಲೀಸ್ ಠಾಣೆಗೆ ಹೋಗಿ ದೂರು ನೀಡಿದರೆ "ಇದು ನಾನ್ ಕಾಗ್ನಿಸಬಲ್ ಕೇಸು–ಕೋರ್ಟಿಗೆ ಹೋಗಿ" ಅಂತ ಹೇಳ್ತಾರೆ. ಇಂತಹ ಪ್ರಕರಣಗಳಲ್ಲಿ ನಾವು ಮೊದಲು ಕೋರ್ಟಿಗೆ ಹೋಗಿ ಈ ರೀತಿ ಘಟನೆ ನಡೆಯಿತು ಎಂದು ಅರ್ಜಿ ಕೊಟ್ಟರೆ, ಆ ಅರ್ಜಿಯನ್ನು ಆಲಿಸಿದ ನ್ಯಾಯಾಲಯ

ಪೊಲೀಸರಿಗೆ ಪ್ರಕರಣ ದಾಖಲಿಸಿ ತನಿಖೆ ಮಾಡಲು ಆದೇಶಿಸುತ್ತದೆ. ಈ ಆದೇಶದ ನಂತರ ಪೊಲೀಸರು ಕೇಸನ್ನು ದಾಖಲಿಸಿ ಮುಂದಿನ ಕ್ರಮ ಕೈಗೊಳ್ಳುತ್ತಾರೆ. ಇಂತಹ ಪ್ರಕರಣಗಳಿಗೆ ರೆಫರ್ಡ್ ಕೇಸುಗಳು ಅಂತ ಹೇಳ್ತಾರೆ.

ಮೇಲೆ ಹೇಳಿದ ಎರಡು ತರಹದ ಕೇಸುಗಳಲ್ಲದೆ, ಇನ್ನೂ ಎರಡು ವಿಧದ ಕೇಸುಗಳಿವೆ. ಅವೆಂದರೆ ಸಿವಿಲ್ ಕೇಸ್ ಹಾಗೂ ಕ್ರಿಮಿನಲ್ ಕೇಸುಗಳು. ಸಿವಿಲ್ ಕೇಸುಗಳು ಅಂದರೆ ದಿವಾನಿ ಸ್ವರೂಪದ ಕೇಸುಗಳು. ಉದಾಹರಣೆಗೆ: ನಿಮ್ಮ ಪಕ್ಕದ ಮನೆಯ ಮಾಲೀಕ ನಿಮ್ಮ ಕಾಂಪೌಂಡನ್ನು ಸೇರಿಸಿ ಒಂದು ಕೊಠಡಿ ಕಟ್ಟುತ್ತಾನೆ. ಇಲ್ಲವೇ ನಿಮ್ಮ ಬಾಡಿಗೆದಾರ ನಿಮಗೆ ಎರಡು ಮೂರು ತಿಂಗಳು ಮನೆ ಬಾಡಿಗೆ ನೀಡುವುದಿಲ್ಲ. ಇಲ್ಲವೇ ನಿಮ್ಮ ಮೋಟಾರ್ ಮೆಕ್ಯಾನಿಕ್ ನಿಮ್ಮ ವಾಹನವನ್ನು ರಿಪೇರಿ ಮಾಡಿಕೊಡ್ತೀನಿ ಅಂತ ಹೇಳಿ ತಿಂಗಳುಗಟ್ಟಲೆ ವಾಹನವನ್ನು ವಾಪಸ್ ಮಾಡೊಲ್ಲ, ಅಥವಾ ನಿಮ್ಮಿಂದ ಒಂದು ಸೋಫಾಸೆಟ್ ಮಾಡಲು 5,000 ರೂ. ಅಡ್ವಾನ್ಸ್ ಪಡೆದ ಬಡಗಿ ಸೋಫಾ ಆಗಲೀ ಅಥವಾ ಅಡ್ವಾನ್ಸ್ ಆಗಲೀ ಕೊಡುವುದಿಲ್ಲ ಇತ್ಯಾದಿ... ಇಂತಹ ಪ್ರಕರಣಗಳ ಬಗ್ಗೆ ಪೊಲೀಸರು ನೇರವಾಗಿ ಏನನ್ನೂ ಮಾಡಲು ಬರುವುದಿಲ್ಲ. ಏಕೆಂದರೆ ಇವು ಕ್ರಿಮಿನಲ್ ಪ್ರಕರಣಗಳು ಅಲ್ಲ. ಇಂತಹ ಕೇಸುಗಳನ್ನು ಬಗೆಹರಿಸಬೇಕಾದರೆ ನಾವು ನೇರವಾಗಿ ನ್ಯಾಯಾಲಯದ ಮೊರೆ ಹೋಗಬೇಕು. ಅಂದರೆ ಪೊಲೀಸರು ತನಿಖೆ ನಡೆಸುವಂತಹ ಪ್ರಕರಣಗಳು ಎಂದರೆ ಅವು ಕ್ರಿಮಿನಲ್ ಕೇಸುಗಳು ಆಗಿರಬೇಕು ಹಾಗೂ ಅವು ಕಾಗ್ನಿಸಬಲ್ ಕೇಸುಗಳು ಆಗಿರಬೇಕು.

ಕೆಲವು ತರಹ ಕೇಸುಗಳು ಸಂಪೂರ್ಣ ತನಿಖೆ ಮಾಡದಂತಹವೂ ಇವೆ. ಉದಾಹರಣೆಗೆ ಲೈಟಿಲ್ಲದೆ ಸೈಕಲ್ ನಡೆಸುವುದು, ರಸ್ತೆಯಲ್ಲಿ ತಳ್ಳುವ ಗಾಡಿ ಇಟ್ಟು ಸಂಚಾರಕ್ಕೆ ಅಡೆ ತಡೆ ಮಾಡುವುದು ಇತ್ಯಾದಿ. ಸರ್ವೇಸಾಧಾರಣವಾಗಿ ಈ ರೀತಿಯ ಪ್ರಕರಣಗಳ ಬಗ್ಗೆ ಪೊಲೀಸರು ತಾವೇ ಫಿರ್ಯಾದುದಾರರಾಗಿ ನ್ಯಾಯಾಲಯಕ್ಕೆ ದೂರು ಸಲ್ಲಿಸಿ ತಕ್ಷಣವೇ ದಂಡ ಹಾಕುವಂತೆ ಮಾಡ್ತಾರೆ. ಇವುಗಳಿಗೆ ಪೊಲೀಸ್ ಭಾಷೆಯಲ್ಲಿ ಪೆಟ್ಟಿ ಕೇಸುಗಳು (Petty Cases) ಎಂದು ಕರೆಯುತ್ತಾರೆ.

# 22

## ನಯ ವಂಚಕರ ಬಗ್ಗೆ ಎಚ್ಚರಿಕೆ ಅಗತ್ಯ

ಸಾಮಾನ್ಯವಾಗಿ ಎಲ್ಲರೂ ಜೀವನದಲ್ಲಿ ಒಂದೆರಡು ಬಾರಿಯಾದರೂ ಮೋಸಕ್ಕೆ ಬಲಿಯಾಗುತ್ತಾರೆ. ಮೋಸಗಾರರ ಜಾಲ ಎಲ್ಲೆಡೆಗಳಲ್ಲೂ ವ್ಯಾಪಕವಾಗಿ ಹರಡಿರುವುದರಿಂದ ಇವರ ಆಮಿಷಕ್ಕೆ ಪ್ರತಿ ನಿಮಿಷವೂ ಯಾರಾದರೂ ಒಬ್ಬರು ತುತ್ತಾಗಿಯೇ ಆಗುತ್ತಾರೆ. ಒಂದು ಗಾದೆ ಮಾತಿದೆ ; 'ಎಲ್ಲರನ್ನೂ ಕಡಿಮೆ ಎಂದರೆ ಒಂದು ಸಲ ಮೋಸಗೊಳಿಸಬಹುದು. ಆದರೆ ಎಲ್ಲರನ್ನೂ ಎಲ್ಲಾ ಬಾರಿಯೂ ಮೋಸಗೊಳಿಸಲು ಬರುವುದಿಲ್ಲ' ಎಂದು. ಮೋಸಗಾರರ ತಂತ್ರಗಳ ಬಗ್ಗೆ ಸ್ವಲ್ಪ ತಿಳುವಳಿಕೆ ಇದ್ದರೆ ನಮ್ಮನ್ನು ನಾವು ರಕ್ಷಿಸಿಕೊಳ್ಳಬಹುದು.

ಮನೆಯಲ್ಲಿರುವಾಗ ಮೋಸಗಾರರು ಹಲವಾರು ರೀತಿಯಲ್ಲಿ ನಮಗೆ ಮೋಸ ಮಾಡಬಹುದು. ಸಾಮಾನ್ಯ ರೀತಿಯ ಮೋಸ ಎಂದರೆ ಮನೆ ಬಾಗಿಲಿಗೇ ಸೀರೆಗಳು ಪಾತ್ರೆ ಪಡಗಗಳು, ರತ್ನಗಂಬಳಿಗಳು, ಚಿನ್ನ ಬೆಳ್ಳಿ ಆಭರಣಗಳು ಇತ್ಯಾದಿಗಳನ್ನು ತಂದು 'ನಾವು ಇದನ್ನು ಹೋಲ್‌ಸೇಲ್ ರೇಟಿನಲ್ಲಿ ತಂದಿದ್ದು, ನಿಮಗೆ ಮಾರುಕಟ್ಟೆಗಿಂತ ಕಡಿಮೆ ದರದಲ್ಲಿ ಮಾರುತ್ತೇವೆ' ಎಂದು ತಮ್ಮ ಆಕರ್ಷಕ ಮಾತುಗಳಿಂದ ನಂಬಿಕೆ ಬರುವಂತೆ ಮಾಡಿ ಕಳಪೆ ದರ್ಜೆಯ ವಸ್ತುಗಳನ್ನು ಮಾರಿ ಬಿಡುತ್ತಾರೆ. ಎಷ್ಟೋ ಬಾರಿ ಅಂತಹ ವಸ್ತುಗಳನ್ನು ಕೊಂಡ ಹಲವಾರು ಗಂಟೆಗಳ ಅಥವಾ ಹಲವಾರು ದಿನಗಳ ನಂತರವೇ ನಾವು ಮೋಸ ಹೋದ ಬಗ್ಗೆ ನಮಗೆ ಅರಿವು ಮೂಡುವುದು. ಇದೇ ಕಾರಣಕ್ಕೆ ಮನೆ ಮುಂದೆ ಬಂದ ವಸ್ತುಗಳನ್ನು ಖರೀದಿ ಮಾಡುವಾಗ ಎಚ್ಚರಿಕೆ ಇರಲಿ. ಅಂಗಡಿಯಿಂದ ವಸ್ತುವನ್ನು ಖರೀದಿಸಿದರೆ ಸಾಕ್ಷಿಯಾಗಿ ರಶೀತಿ ಇರುತ್ತದೆ. ಹೀಗಾಗಿ ನಮಗೆ ಸರಿ ಕಾಣದಿರುವ ವಸ್ತುವನ್ನು ಬದಲಾಯಿಸಬಹುದು. ಇಲ್ಲವೇ ಗ್ರಾಹಕ ವೇದಿಕೆಗೆ ದೂರು

ಕೊಡಬಹುದು. ಆದರೆ ಮನೆ ಮುಂದೆ ವ್ಯಾಪಾರಿಯೊಬ್ಬ ಮೋಸ ಮಾಡಿದರೆ ಯಾರಿಗೆ ದೂರು ಕೊಡುವುದು ?

ಮೋಸಗಾರರು ನಾನಾ ಕಾರಣಗಳನ್ನು ರೂಪಿಸಿಕೊಂಡು ಮನೆಗೆ ಬರುತ್ತಾರೆ. ನಾನು ಹುಬ್ಬಳ್ಳಿ-ಧಾರವಾಡ ಪೋಲೀಸ್ ಕಮೀಷನರ್ ಆಗಿದ್ದಾಗ ನನ್ನ ಅರಿವಿಗೆ ಬಂದ ಘಟನೆಯೊಂದರಲ್ಲಿ ಇಲ್ಲಿ ತಿಳಿಸುತ್ತೇನೆ. ಒಬ್ಬ ಹೆಣ್ಣು ಮಗಳ ಗಂಡ ಅವಳನ್ನು ಬಿಟ್ಟು ಹೋಗಿ ಇನ್ನೊಬ್ಬಳೊಡನೆ ವಾಸಿಸುತ್ತಿದ್ದ. ಇದರಿಂದ ಅವಳಿಗೆ ಮಾನಸಿಕ ಆಘಾತವಾಗಿತ್ತು. ಈ ವಿಷಯ ಬಡಾವಣೆಯ ಹಲವರಿಗೆ ತಿಳಿದಿತ್ತು. ಒಂದು ದಿನ ಒಬ್ಬ ವ್ಯಕ್ತಿ ಅವಳ ಮನೆ ಬಾಗಿಲು ತಟ್ಟಿ, 'ನಿನಗೆ ಜೀವನದಲ್ಲಿ ತುಂಬಾ ತೊಂದರೆಯಾಗಿದೆ. ನೀನು ಭಾರಿ ನೋವನ್ನು ಅನುಭವಿಸಿದ್ದೀಯ, ನನ್ನ ಮಂತ್ರದಿಂದ ನಿನಗೆ ಸಮೃದ್ಧಿ ಬರುವ ಹಾಗೆ ಮಾಡುತ್ತೇನೆ' ಎಂದಾಗ ಆಕೆ ಅವನನ್ನು ಮನೆಯೊಳಗೆ ಕರೆದು ಉಪಚರಿಸಿದಳು. ಅವನು ತನ್ನ ಬಳಿ ಇದ್ದ 4–5 ಇಟ್ಟಿಗೆಗಳಿಂದ ಒಂದು ಹೋಮಕುಂಡವನ್ನು ಮಾಡಿ ಅದರ ಮುಂದೆ ದೇವರ ಫೋಟೋವನ್ನು ಇಟ್ಟು ಕೆಲ ಮಂತ್ರಗಳನ್ನು ಹೇಳಲು ಪ್ರಾರಂಭಿಸಿದ. ಆಕೆಗೆ 'ನಿನ್ನ ಮೈಮೇಲಿನ ಚಿನ್ನದ ಒಡವೆಗಳನ್ನು ಈ ಕರ್ಚೀಫ್‌ನಲ್ಲಿ ಹಾಕು' ಎಂದು ಒಂದು ಕೆಂಪು ಕರವಸ್ತ್ರ ಕೊಟ್ಟ. ಆಕೆ ತನ್ನ ಒಡವೆಗಳನ್ನು ಆ ಕರವಸ್ತ್ರದಲ್ಲಿ ಹಾಕಿ ಗಂಟು ಕಟ್ಟಿದಳು. ಅವಳಿಗೆ ಅವನು ಕಣ್ಣು ಮುಚ್ಚಲು ಬೆಂಕಿಗೆ ಒಂದು ಪುಡಿಯನ್ನು ಹಾಕಿದ ಅದರಿಂದ ದಟ್ಟಾದ ಹೊಗೆ ಬಂದು ಅವಳ ಕಣ್ಣು ಕತ್ತಲಿಟ್ಟಂತಾಯಿತು.

ಸ್ವಲ್ಪ ಹೊತ್ತಿನ ನಂತರ ಪೂಜೆ ಮುಗಿಯಿತು ಎಂದು ಹೇಳಿ ಕೆಂಪು ಕರವಸ್ತ್ರದ ಗಂಟನ್ನು ಅವಳ ಕೈಗೆ ಕೊಟ್ಟು ಇದನ್ನು ಬಿಚ್ಚಬೇಡ, 6 ಗಂಟೆಗಳ ಕಾಲ ಇದನ್ನು ದೇವರ ಕೋಣೆಯಲ್ಲಿಡು. ನಾಳೆ ನಿನ್ನ ಗಂಡ ಮರಳಿ ಬರುತ್ತಾನೆ ಎಂದು ಹೇಳಿ 50.00 ರೂ. ದಕ್ಷಿಣೆ ಪಡೆದು ಹೊರಟುಹೋದ. ಸಂಜೆ ಆಕೆ ಕೆಂಪು ವಸ್ತ್ರದ ಗಂಟನ್ನು ಬಿಚ್ಚಿದಾಗ ಅದರಲ್ಲಿ ಕಂಡದ್ದು ಕಬ್ಬಿಣದ ತುಂಡುಗಳು. ಈ ಪ್ರಕರಣದಲ್ಲಿ ಮನೆ ಒಡತಿ ಮನೆ ಬಾಗಿಲಿಗೆ ಬಂದ ವ್ಯಕ್ತಿಯೊಬ್ಬನ ಮಾತುಗಳನ್ನು ನಂಬಿದ್ದು ತಪ್ಪು. ಸಮಸ್ಯೆಗಳು ಮಾಟ ಮಂತ್ರಗಳಿಂದ ದೂರವಾಗುತ್ತವೆ ಎಂದು ಎಲ್ಲಿಯವರೆಗೆ ನಾವು ನಂಬಿರುತ್ತೇವೋ ಅಲ್ಲಿಯವರೆಗೆ ಇಂತಹ ಘಟನೆಗಳು ಎದುರಾಗುತ್ತವೆ.

ಇನ್ನೊಂದು ಘಟನೆ ನೆನಪಿಗೆ ಬರುತ್ತದೆ. ಒಂದು ಮನೆಯಲ್ಲಿ ಅತ್ತೆ-ಸೊಸೆ ಇಬ್ಬರೇ ಇದ್ದಾಗ ಇಬ್ಬರು ಯುವಕರು ಅವರ ಮನೆ ಬಾಗಿಲು ತಟ್ಟಿ ನಿಮ್ಮ ಮೈಮೇಲಿರುವ ಒಡವೆಗಳು ಮಾಸಿವೆ. ನಾವು ಚೆನ್ನಾಗಿ ಪಾಲಿಷ್ ಹಾಕಿಕೊಡುತ್ತೇವೆ ಎಂದು ಹೇಳಿ ತಾವು ತಂದಿದ್ದ ದ್ರಾವಣವೊಂದರಲ್ಲಿ ಅತ್ತೆ-ಸೊಸೆಯ ಒಡವೆಗಳನ್ನು ಅದ್ದಿ, ಚೆನ್ನಾಗಿ ಉಜ್ಜಿ ಥಳ ಥಳ ಹೊಳೆಯುವಂತೆ ಮಾಡಿ ಅವರಿಗೆ ವಾಪಸ್ಸು ಕೊಟ್ಟರು. ಅತ್ತೆ - ಸೊಸೆಯರಿಗೆ ತಿಳಿಯದೇ ಹೋದದ್ದು ಆ ದ್ರಾವಣದಲ್ಲಿ ಚಿನ್ನದ 5% ಕರಗಿಹೋದ ವಿಷಯ. ಹೀಗಾಗಿ ಅಪರಿಚಿತರ ಕೈಯಲ್ಲಿ ಒಡವೆಗಳನ್ನು ಕೊಡದಿರುವುದು ಉತ್ತಮ.

ಕೆಲ ವರ್ಷಗಳ ಹಿಂದೆ ನನ್ನ ಗೆಳೆಯನ ಹೆಂಡತಿ ಮನೆಯಲ್ಲಿ ಒಬ್ಬಳೇ ಇದ್ದಾಗ ಚೆನ್ನಾಗಿ ಬಟ್ಟೆ ಹಾಕಿದ್ದ ಯುವಕ ಮನೆ ಬಾಗಿಲು ತಟ್ಟಿ ನಾನು ನಿಮ್ಮ ಗಂಡನ ಸಹೋದ್ಯೋಗಿ. ಅವರಿಗೆ

ಆಕ್ಸಿಡೆಂಟ್ ಆಗಿದೆ, ಕೂಡಲೇ ನಿಮ್ಮ ಬಳಿ ಇರುವ ಅಷ್ಟೂ ಹಣವನ್ನು ತೆಗೆದುಕೊಂಡು ನನ್ನೊಡನೆ ಬನ್ನಿ ಎಂದು ತಾನು ತಂದಿದ್ದ ಸ್ಕೂಟರ್‌ನಲ್ಲಿ ಆಕೆಯನ್ನು ಕೂರಿಸಿಕೊಂಡು ನರ್ಸಿಂಗ್‌ಹೋಂ ಮುಂದೆ ವಾಹನ ನಿಲ್ಲಿಸಿ ಅಲ್ಲಿಯ ಸ್ವಾಗತ ಕೋಣೆಯಲ್ಲಿ ಆಕೆಯನ್ನು ಕೂರಲು ಹೇಳಿ ನೀವು ತಂದಿರುವ ಹಣ ಕೊಡಿ ಆಸ್ಪತ್ರೆಗೆ ದುಡ್ಡು ಕೊಡಬೇಕು ಎಂದು ಆಕೆಯ ಕೈಲಿದ್ದ 5 ಸಾವಿರ ರೂ. ಪಡೆದು ಹೊರಟು ಹೋದ. ಸುಮಾರು ಒಂದೂವರೆ ಗಂಟೆ ಕಾಲ ಆ ವ್ಯಕ್ತಿ ವಾಪಸ್ಸಾಗದೇ ಇದ್ದಾಗ ಎದುರಿದ್ದ ಸ್ವಾಗತಕಾರಿಣಿಯನ್ನು ಆ ಮಹಿಳೆ ತನ್ನ ಗಂಡನ ಬಗ್ಗೆ ವಿಚಾರಿಸಿದಳು. ಆಗ ಅವಳಿಗೆ ತಿಳಿದುಬಂದಿದ್ದು ತನ್ನ ಗಂಡ ಅಡ್ಮಿಟ್ ಆಗಿಲ್ಲ ಎನ್ನುವುದು. ಇದೇ ಕಾರಣಕ್ಕೆ ಅಪರಿಚಿತರು ಮನೆಗೆ ಬಂದು ಆಕ್ಸಿಡೆಂಟ್, ಸಾವು ಮತ್ತಿತ್ತರ ಭಯಾನಕ ಸುದ್ದಿಗಳನ್ನು ಹೇಳಿದಾಗ ಆ ಸುದ್ದಿ ನಿಜವೇ ಇಲ್ಲವೇ ಎಂದು ಖಾತ್ರಿ ಮಾಡಿಕೊಳ್ಳಬೇಕು. ನನ್ನ ಗೆಳೆಯನ ಹೆಂಡತಿ ಅವಳ ಗಂಡನ ಆಫೀಸಿಗೆ ಕೂಡಲೇ ಫೋನ್ ಮಾಡಿದ್ದಲ್ಲಿ ಈ ರೀತಿ ಮೋಸ ಹೋಗುವ ಪ್ರಸಂಗ ಬರುತ್ತಿರಲಿಲ್ಲ.

ಎಷ್ಟೋ ಬಾರಿ ನಾವು ಬ್ಯಾಂಕಿನಿಂದ ಹಣ ತೆಗೆದುಕೊಂಡು ಹೊರಬರುವಾಗ ಎದುರಾದ ಅಪರಿಚಿತ ನೆಲದ ಮೇಲೆ 10 ರೂ. ನೋಟು ತೋರಿಸಿ ನಿಮ್ಮ ನೋಟು ಕೆಳಕ್ಕೆ ಬಿದ್ದಿದೆ ಎನ್ನುತ್ತಾನೆ. ಆ ನೋಟು ನಮ್ಮದಲ್ಲದಿದ್ದರೂ 10ರೂ. ಗಳ ಆಸೆಗಾಗಿ ಕೆಳಕ್ಕೆ ಬಗ್ಗಿದಾಗ ನಮ್ಮ ಕೈಯಲ್ಲಿರುವ ಹಣದ ಬ್ಯಾಗನ್ನು ಆತ ಹಾರಿಸಿಕೊಂಡು ಹೋಗುತ್ತಾನೆ. ಹೀಗಾಗಿ ಕೈಯಲ್ಲಿ ಹಣ ಇರುವಾಗ ನಮ್ಮ ಚಿತ್ತ ಬೇರೆಡೆಗೆ ಹೋಗಕೂಡದು. ಎಷ್ಟೋ ಬಾರಿ ಬ್ಯಾಂಕಿನಿಂದ ಹಣ ಪಡೆದು ಹೊರ ಬರುವಾಗ ಎದುರಿಗೆ ಕಂಡ ಅಪರಿಚಿತರು ನಮ್ಮ ಮೈಮೇಲಿ ರಾಡಿ ಸಿಡಿಸಿ, ನಿಮ್ಮ ಬಟ್ಟೆ ಹೊಲಸಾಗಿದೆ ಎಂದು ನಮಗೆ ಸಹಾಯ ಮಾಡುವಂತೆ ಕರವಸ್ತ್ರವನ್ನು ಕೊಡುತ್ತಾರೆ. ನಾವು ಬಟ್ಟೆಯನ್ನು ಶುಚಿ ಮಾಡಿಕೊಳ್ಳಲು ಹೋದಾಗ ನಮ್ಮ ಬ್ಯಾಗನ್ನು ಅಪಹರಿಸಿ ಪರಾರಿಯಾಗುತ್ತಾರೆ.

ವಂಚಕರು ಮನೆ ಕೊಡಿಸುತ್ತೇವೆ, ಸೈಟು ಕೊಡಿಸುತ್ತೇವೆ ಎಂದು ಸಾವಿರಾರು ಜನರಿಗೆ ಎಷ್ಟೋ ಬಾರಿ ವಂಚಿಸಿದ್ದಾರೆ. ಖೊಟ್ಟಿ ಕಾಗದ ಪತ್ರಗಳನ್ನು ತಯಾರು ಮಾಡಿ ಸರಕಾರದ ಖಾಲಿ ಜಾಗವನ್ನು ತಮ್ಮ ಸ್ವಾಧೀನದಲ್ಲಿ ಇರುವ ಜಾಗ ಎಂದು ಸುಳ್ಳು ಹೇಳಿ ಮೋಸಗೊಳಿಸುವ ವಿಷಯ ತೀರಾ ಸಾಮಾನ್ಯ. ಅದೇ ರೀತಿ ಇನ್ನೊಬ್ಬರ ಮನೆಯನ್ನು ತೋರಿಸಿ ಕಡಿಮೆ ಬೆಲೆಯಲ್ಲಿ ಇದನ್ನು ಮಾರುತ್ತಾರೆ ಎಂದು ನಂಬಿಸಿ ಅಡ್ವಾನ್ಸ್ ಪಡೆದು ಪರಾರಿಯಾಗಿರುವ ಘಟನೆಗಳು ಅತೀ ಸಾಮಾನ್ಯ.

ಇದೇ ಕಾರಣಕ್ಕಾಗಿಯೇ ಸೈಟುಗಳು, ಮತ್ತಿತರ ಸ್ಥಿರ ಆಸ್ತಿಗಳನ್ನು ಖರೀದಿ ಮಾಡುವಾಗ ಸರಿಯಾದ ವ್ಯಕ್ತಿಗಳ ಮೂಲಕ ಖರೀದಿಸಬೇಕು. ಖರೀದಿ ಮಾಡುವಾಗ ವಕೀಲರೊಬ್ಬರನ್ನು ನಮ್ಮ ಜೊತೆ ಇಟ್ಟುಕೊಳ್ಳುವುದು ಉತ್ತಮ. ಎಷ್ಟೇ ಅವಸರ ಮಾಡಿದರೂ ಹಣವನ್ನು ಕೂಡಲೇ ಕೊಡಬಾರದು. ದಾಖಲಾತಿಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರವೇ ಅಡ್ವಾನ್ಸ್ ಕೊಡಬಹುದು.

# 23

## ಚಿಟ್‌ಫಂಡ್ ಎಂದು ಚೀಟ್ ಆಗಬೇಡಿ

ದೇಶದಲ್ಲಿ ನಿರುದ್ಯೋಗ ಸಮಸ್ಯೆ ಹೆಚ್ಚಾಗಿರುವುದರಿಂದ ಕೆಲಸ ಕೊಡಿಸುತ್ತೇವೆ ಎಂಬ ಆಮಿಷ ತೋರಿ ಬಡ ನಿರುದ್ಯೋಗಿಗಳಿಗೆ ಪ್ರತಿದಿನವೂ ವಂಚನೆ ಮಾಡುವುದು ಸಾಮಾನ್ಯವಾಗಿದೆ. ಪಂಚತಾರಾ ಹೊಟೇಲ್‌ಗಳಲ್ಲಿ ಕೊಠಡಿ ಹಿಡಿದು ಅಮಾಯಕ ಜನರಿಗೆ ಅಲ್ಲಿಗೆ ಕರೆದು ಸಂದರ್ಶನ ಮಾಡಿದಂತೆ ನಾಟಕ ಮಾಡಿ ನೀವು ಸೆಲೆಕ್ಟ್ ಆಗಿದ್ದೀರಿ. ನಮ್ಮ ಕಂಪನಿಗೆ ಡಿಪಾಸಿಟ್ ಕಟ್ಟಿ ಎಂದು ಹೇಳಿ 5 ರಿಂದ 10 ಸಾವಿರ ರೂ. ಹಣವನ್ನು ಪಡೆದು ಮಂಗಮಾಯವಾಗುತ್ತಾರೆ ಮೋಸಗಾರರು.

ಇದೇ ಅಂಕಣದಲ್ಲಿ ನಾನು ಉತ್ತರಿಸುತ್ತಿರುವ ಪ್ರಶ್ನೆಗಳನ್ನು ಗಮನಿಸಿದಾಗ ಹತ್ತು ಹಲವು ಜನ ಹಲವಾರು ರೀತಿಯಲ್ಲಿ ಮೋಸ ಹೋಗಿರುವುದು ಕಂಡು ಬರುತ್ತದೆ. ಹಾವೇರಿಯಲ್ಲಿ ಒಬ್ಬ ವ್ಯಕ್ತಿಗೆ ಸೀಮೆ ಎಣ್ಣೆ ಏಜೆನ್ಸಿ ಕೊಡಿಸುತ್ತೇವೆ ಎಂದು ದೆಹಲಿ ಕಂಪನಿಯೊಂದು 10 ಸಾವಿರ ರೂ. ಡಿ.ಡಿ. ಪಡೆದು ಮೋಸ ಮಾಡಿದ ಬಗ್ಗೆ ತಿಳಿದುಬಂದಿತು. ಅದೇ ರೀತಿ ದಾವಣಗೆರೆಯಲ್ಲಿ ಒಬ್ಬ ವ್ಯಕ್ತಿಯನ್ನು ಚಿಟ್‌ಫಂಡ್ ಕಂಪನಿ ತನ್ನ ಏಜೆಂಟನನ್ನಾಗಿ ನೇಮಿಸಿಕೊಂಡು ಅವನಿಂದ ಸಾರ್ವಜನಿಕ ಠೇವಣಿಗಳನ್ನು ತನ್ನ ಪರವಾಗಿ ಸಂಗ್ರಹಿಸಿ ಆ ಠೇವಣಿ ಹಣವನ್ನು ಗುಳುಂ ಮಾಡಿದ್ದು ಕೂಡ ಗೊತ್ತಾಯಿತು.

ಚಿಟ್‌ಫಂಡ್‌ಗಳು ಸಾಕಷ್ಟು ಜನರಿಗೆ ಅನ್ಯಾಯ ಮಾಡಿವೆ. 5-6 ತಿಂಗಳು ಕಚೇರಿಯನ್ನು ನಡೆಸಿ ಹೆಚ್ಚಿನ ಬಡ್ಡಿಯನ್ನು ಕೊಟ್ಟಂತೆ ಮಾಡಿ ಸಂಗ್ರಹಿಸಿದ ಠೇವಣಿ ಜಾಸ್ತಿ ಆದ ಕೂಡಲೇ

ಕಂಪನಿಯನ್ನು ಮುಚ್ಚಿ ಓಡಿ ಹೋಗುತ್ತಾರೆ. ಬ್ಯಾಂಕುಗಳಿಗಿಂತ ಹೆಚ್ಚು ಬಡ್ಡಿ ಗಳಿಸುವ ಆಸೆಯಿಂದ ಎಷ್ಟೋ ಜನ ವೃದ್ಧರು ತಮ್ಮ ಇಡೀ ಪೆನ್ಷನ್ ಹಣವನ್ನು ಇಂತಹ ಕಂಪನಿಗಳಲ್ಲಿ ತೊಡಗಿಸಿ ಮೋಸ ಹೋಗಿರುವುದು ಬೇಸರ ತರುತ್ತದೆ.ಕಂಪನಿಯ ಒಳ ಆವರಣ ಎಷ್ಟೇ ಸುಂದರವಾಗಿರಲಿ ಅಲ್ಲಿರುವ ಜನರು ಎಷ್ಟೇ ಉತ್ತಮ ಬಟ್ಟೆ ಹಾಕಿಕೊಂಡು ಪುಸಲಾಯಿಸಿದರೂ ನಮ್ಮ ಹಣವನ್ನು ಇಂತಹ ಖಾಸಗಿ ಕಂಪನಿಗಳಲ್ಲಿ ಠೇವಣಿ ಇಡಬಾರದು. ಸರಕಾರದ ಅಧೀನದ ಬ್ಯಾಂಕುಗಳಲ್ಲಿ ನಾವು ಇಡುವ ಠೇವಣಿಗೆ ಪೂರ್ತಿ ರಕ್ಷಣೆ ಇರುತ್ತದೆ.

ಕೆಲವು ನಗರಗಳಲ್ಲಿ ಇನ್ನೊಂದು ರೀತಿಯ ಮೋಸ ನಡೆಯುತ್ತದೆ. ಒಂದು ದೊಡ್ಡ ಅಂಗಡಿ ತೆರೆದು ತಮ್ಮ ಅಂಗಡಿಯಲ್ಲಿರುವ ವಸ್ತುಗಳನ್ನು ಮಾರುಕಟ್ಟೆ ಬೆಲೆಗಿಂತ ಅರ್ಧ ಬೆಲೆಯಲ್ಲಿ ಮಾರುತ್ತಾರೆ. ಮೊದಲ 5-6 ದಿನಗಳು ಹೋದ ಗ್ರಾಹಕರಿಗೆ ಅರ್ಧ ಬೆಲೆಯಲ್ಲಿ ಮಿಕ್ಸಿ, ಸ್ಟೀಲ್ ಪಾತ್ರೆಗಳು, ಫ್ಯಾನ್ ಇತ್ಯಾದಿ ಗೃಹಪಯೋಗಿ ವಸ್ತುಗಳನ್ನು ಮಾರಿ ಖುಷಿ ಪಡಿಸುತ್ತಾರೆ. ಈ ರೀತಿ ಖರೀದಿಸಿದ ಗ್ರಾಹಕರು ತಮ್ಮ ಸಂಬಂಧಿಕರಿಗೆ, ಗೆಳೆಯರಿಗೆ ಈ ಅಂಗಡಿಯ ಬಗ್ಗೆ ಸುದ್ದಿ ಮುಟ್ಟಿಸುತ್ತಾರೆ. ಅಂತಹವರು ಅಂಗಡಿಗೆ ಹೋದಾಗ ಈಗ ಸ್ಟಾಕ್ ಮುಗಿದಿದೆ ನಿಮಗೆ ಬೇಕಾದ ವಸ್ತುವನ್ನು 15 ದಿನಗಳ ನಂತರ ತರಿಸಿಕೊಡುತ್ತೇವೆ. ನಿಮಗೆ ಇಷ್ಟ ಇದ್ದಲ್ಲಿ ಈಗಲೇ ಹಣ ತುಂಬಿರಿ ಎನ್ನುತ್ತಾರೆ. ಕಡಿಮೆ ಬೆಲೆ ವಸ್ತುಗಳಿಗೆ ಬೇಡಿಕೆ ಜಾಸ್ತಿ ಇರುವುದರಿಂದ ಬೇರೆ ಇತರೆ ಗ್ರಾಹಕರು ಖರೀದಿಸಬಾರದು ಎನ್ನುವ ಉದ್ದೇಶದಿಂದ ನಾವು ನಮ್ಮ ಹಣ ಆ ಅಂಗಡಿಯಲ್ಲಿ ತುಂಬುತ್ತೇವೆ. 15 ದಿನಗಳ ನಂತರ ಹೋದಾಗ ನೀವು ಆರ್ಡರ್ ಮಾಡಿದ ವಸ್ತು ಇನ್ನೂ ಬಂದಿಲ್ಲ, ಮುಂದಿನ ವಾರ ಬನ್ನಿ ಎಂದು ಉತ್ತರ ಬರುತ್ತದೆ. ಹೀಗೆ ಒಂದು ತಿಂಗಳು ಸತಾಯಿಸಿ ಅಲ್ಲಿಯವರೆಗೆ ಅಮಾಯಕ ಗ್ರಾಹಕರಿಂದ ಜಮಾಯಿಸಿಕೊಂಡಿದ್ದ ಹಣವನ್ನು ನುಂಗಿ ರಾತ್ರೋ ರಾತ್ರಿ ಪರಾರಿಯಾಗುತ್ತಾರೆ. ಈ ಬಗ್ಗೆ ಪೊಲೀಸರು ಎಷ್ಟೇ ಎಚ್ಚರಿಕೆ ಕೊಟ್ಟರೂ ನಮ್ಮ ಜನ ಪದೇ ಪದೇ ಮೋಸ ಹೋಗುತ್ತಾರೆ. ಇದೇ ದುರ್ದೈವ.

ಸರ್ವಕಾಲವೂ ಚಾಲ್ತಿಯಲ್ಲಿರುವ ಮೋಸದ ಯೋಜನೆ ಎಂದರೆ ಹಣ ದ್ವಿಗುಣಗೊಳಿಸುವುದು. ಒಬ್ಬ ವ್ಯಕ್ತಿ ನಿಮ್ಮ ಬಳಿ ಬಂದು ನಾನು ನೋಟುಗಳನ್ನು ಮುದ್ರಿಸುವ ಹೊಸ ವಿಧಾನವನ್ನು ಕಂಡು ಹಿಡಿದಿದ್ದೇನೆ. ನೀವು ಕೊಟ್ಟ ನೋಟುಗಳಿಗೆ ಎರಡರಷ್ಟು ಹಣ ಕೊಡುತ್ತೇನೆ ಎಂದು ನಿಮಗೆ ಅಸಲಿ ನೋಟುಗಳನ್ನು ತೋರಿಸಿ ನಂಬಿಕೆ ಬರುವ ಹಾಗೆ ಮಾಡಿ ನಿಮ್ಮಿಂದ ಹಣವನ್ನು ಪಡೆದು ಮಾಯವಾಗುತ್ತಾನೆ. ಎಷ್ಟೋ ಬಾರಿ ನಿಮಗೆ ನಂಬಿಕೆ ಹುಟ್ಟಿಸಲು ಅವರು ನಿಜವಾದ ನೋಟನ್ನೇ ನೀಡಿ ಇದನ್ನು ಬೇಕಾದರೆ ಬ್ಯಾಂಕಿನಲ್ಲಿ ತೋರಿಸಿ ಖಾತ್ರಿ ಮಾಡಿಕೊಂಡು ಬನ್ನಿ ಎಂದು ಹೇಳುತ್ತಾರೆ. ಬ್ಯಾಂಕಿನವರು ಆ ನೋಟು ಅಸಲಿ ನೋಟೆಂದು ಹೇಳುತ್ತಾರೆ. ಹೀಗಾಗಿ ವಂಚಕನ ಬಗ್ಗೆ ನಿಮಗೆ ಭರವಸೆ ಮೂಡುತ್ತದೆ. ಆತ ನಿಮ್ಮ ಕೈಗೆ ಕೊಡುವ ನೋಟಿನ ಕಂತೆಗಳಲ್ಲಿ ಮೇಲ್ಭಾಗಕ್ಕೆ ಹಾಗೂ ಕೆಳಭಾಗದಲ್ಲಿ ಕಾಗದ ತುಂಡುಗಳನ್ನು ಸೇರಿಸಿ ಕೊಟ್ಟಿರುತ್ತಾರೆ. ನೀವು ಮೋಸ ಹೋದದ್ದು ನಿಮಗೆ ತಿಳಿಯುವಷ್ಟರಲ್ಲಿ ಆತ ಪರಾರಿಯಾಗಿರುತ್ತಾನೆ.

ಕೆಲ ವರ್ಷದ ಹಿಂದೆ ಮೈಸೂರಿನಲ್ಲಿ ಒಂದು ಘಟನೆ ನಡೆಯಿತು. ಒಬ್ಬ ವಂಚಕ ನೋಟುಗಳನ್ನು ದ್ವಿಗುಣಗೊಳಿಸುತ್ತೇನೆ ಎಂದು ಒಬ್ಬ ವ್ಯಕ್ತಿಯನ್ನು ನಂಬಿಸಿ ಅವನಿಂದ ಹಣ ಪಡೆದು ಬ್ರೀಫ್‌ಕೇಸ್‌ನಲ್ಲಿ ದ್ವಿಗುಣವಾದ ನೋಟುಗಳನ್ನು ಅವನಿಗೆ ಕೊಡುತ್ತಿದ್ದ. ಅದೇ ಸಮಯಕ್ಕೆ ಒಂದು ಜೀಪು ಅಲ್ಲಿಗೆ ಬಂದಿತು. ಜೀಪಿನಲ್ಲಿದ್ದ ಪೊಲೀಸರು ಅವರಿದ್ದಲ್ಲಿಗೆ ಬಂದು ಅವರಿಬ್ಬರನ್ನು ಬಂಧಿಸಿದಂತೆ ಮಾಡಿ ಸ್ವಲ್ಪ ದೂರ ಹೋದ ನಂತರ ನೋಟುಗಳನ್ನು ಖರೀದಿಸಿದ್ದ ವ್ಯಕ್ತಿಯನ್ನು ಬಿಟ್ಟುಬಿಟ್ಟರು.

ವಂಚಕ ಬ್ರೀಫ್‌ಕೇಸ್ ಸಮೇತ ಪೊಲೀಸರೊಂದಿಗೆ ಹೊರಟು ಹೋಗಿದ್ದ. ಮೋಸ ಹೋದವನು ನಂತರ ವಿಚಾರಿಸಿದಾಗ ಪೊಲೀಸರಂತೆ ಜೀಪಿನಲ್ಲಿ ಬಂದಿದ್ದವರು ಅಸಲಿ ಪೊಲೀಸರೇ ಅಲ್ಲ. ಅವರು ಹಾಗೂ ವಂಚಕ ಶಾಮೀಲಾಗಿ ಈ ರೀತಿ ಕೆಲಸ ಮಾಡುತ್ತಿದ್ದಾರೆ ಎಂದು ತಿಳಿಯಿತು. ಇದೇ ಕಾರಣಕ್ಕೆ ಹಣ ದ್ವಿಗುಣಗೊಳಿಸುವ ಬಗ್ಗೆ ಯಾರು ಎಷ್ಟೇ ಹೇಳಿದರೂ ನಿಮ್ಮ ಹಣ ಕೊಡಬೇಡಿ.

ಎಷ್ಟೋ ಬಾರಿ ವೃದ್ಧಾಪ್ಯವೇತನ ಮತ್ತಿತರ ಸರಕಾರಿ ಕೆಲಸಗಳನ್ನು ಮಾಡಿಸಿಕೊಡುವುದಾಗಿ ಹೇಳಿ ವಂಚಕರು ಅಮಾಯಕರಿಗೆ ಮೋಸ ಮಾಡುತ್ತಾರೆ. ಸರಕಾರಿ ಕಚೇರಿಗಳಲ್ಲಿ ಕೆಲಸ ಆಗಬೇಕಾದರೆ ಮಧ್ಯವರ್ತಿಗಳ ಮೂಲಕ ಹೋಗಬೇಕಾಗಿಲ್ಲ. ನೇರವಾಗಿ ಸಂಬಂಧಿಸಿದ ಅಧಿಕಾರಿಗಳನ್ನು ಸಂಪರ್ಕಿಸುವುದು ಸೂಕ್ತ.

ಕೆಲವು ವರ್ಷಗಳ ಹಿಂದೆ ಮುಂಬಯಿಯಲ್ಲಿ ಆದ ಮೋಸದ ಘಟನೆಯ ಬಗ್ಗೆ ಇಲ್ಲಿ ತಿಳಿಸುವುದು ಸೂಕ್ತ. ಒಂದು ಹೆಸರಾಂತ ಜವಾಹಿರಿ ಅಂಗಡಿಯ ಮುಂದೆ ಒಂದು ಬಿಳಿ ಅಂಬಾಸಿಡರ್ ಕಾರ್ ನಿಂತಿತು. ಅದರ ಹಿಂದೆ ಒಂದು ಮಿನಿ ವ್ಯಾನ್ ಬಂದು ನಿಂತಿತು. ಕಾರಿನಲ್ಲಿದ್ದ ಒಬ್ಬ ಸೂಟುಧಾರೀ ವ್ಯಕ್ತಿ ಅಂಗಡಿಯ ಒಳಗೆ ಪ್ರವೇಶಿಸಿದ. ವ್ಯಾನ್‌ನಲ್ಲಿದ್ದ ಸುಮಾರು 10 ಜನ ಖಾಕಿ ಬಟ್ಟೆ ಧರಿಸಿದ ಜನ ಅವನನ್ನೇ ಹಿಂಬಾಲಿಸಿದರು. ಸೂಟ್‌ಧಾರಿ ವ್ಯಕ್ತಿ ಅಂಗಡಿಯ ಮಾಲೀಕನಿಗೆ ಒಂದು ಗುರುತಿನ ಚೀಟಿ ತೋರಿಸಿ ನಾವೆಲ್ಲಾ ಸಿಬಿಐ ಅಧಿಕಾರಿಗಳು ನಿಮ್ಮ ಅಂಗಡಿಯಲ್ಲಿ ಚಿನ್ನವನ್ನು ಕಳ್ಳಸಾಗಣೆ ಮಾಡುತ್ತಿದ್ದೀರೆಂದು ದೂರು ಬಂದಿದೆ. ನಾವು ನಿಮ್ಮ ಅಂಗಡಿಯ ಶೋಧನೆ ಮಾಡುತ್ತೇವೆ ಎಂದು ಹೇಳಿ ಬೆರಳಚ್ಚು ಮಾಡಿದ ಕಾಗದವನ್ನು ತೋರಿಸಿ, ಇದು ಶೋಧನಾ ವಾರಂಟ್ ಇದಕ್ಕೆ ಸಹಿ ಮಾಡಿ ಎಂದು ತಿಳಿಸಿದರು. ಗಾಬರಿಯಾದ ಅಂಗಡಿ ಮಾಲೀಕ ಸಹಿ ಹಾಕಿದ ಕೂಡಲೇ ಆ ವ್ಯಕ್ತಿಗಳು ಅಂಗಡಿಯ ಶೋಧನೆ ಮಾಡಿದಂತೆ ಮಾಡಿ ಅಂಗಡಿಯಲ್ಲಿದ್ದ ಬೆಲೆಬಾಳುವ ವಜ್ರದ ಆಭರಣಗಳನ್ನು ತಾವು ತಂದಿದ್ದ ಚೀಲಗಳಲ್ಲಿ ತುಂಬಿಸಿಕೊಂಡು ಬಂದ ವಾಹನಗಳಲ್ಲಿ ಹೊರಟು ಹೋದರು. ಈ ಘಟನೆಯಿಂದ ಅಧೀರನಾಗಿದ್ದ ಅಂಗಡಿ ಮಾಲೀಕ ಸ್ವಲ್ಪ ಸಾವರಿಸಿಕೊಂಡು ಸಿಬಿಐ ಕಚೇರಿಗೆ ಫೋನ್ ಮಾಡಿದಾಗ ಅಲ್ಲಿಂದ ಯಾರನ್ನೂ ಶೋಧನೆಗೆ ಕಳಿಸಿಲ್ಲ ಎಂದು ತಿಳಿದುಬಂತು. ಮೋಸಗಾರರು ಕೋಟ್ಯಾಂತರ ರೂಪಾಯಿ ಬೆಲೆಬಾಳುವ ಆಭರಣಗಳನ್ನು ಅರ್ಧ ಗಂಟೆಯಲ್ಲಿ ಲಪಟಾಯಿಸಿದ್ದರು!

ಇದೇ ಕಾರಣಕ್ಕಾಗಿಯೇ ನಿಮ್ಮ ಮನೆಯಲ್ಲಾಗಲೀ ಅಥವಾ ಅಂಗಡಿಯಲ್ಲಾಗಲೀ ಸರಕಾರಿ ಅಧಿಕಾರಿಗಳೆಂದು ಹೇಳಿಕೊಂಡು ಶೋಧನೆ ಮಾಡಲು ಬಂದರೆ ಮೊದಲು ಅವರ ಗುರುತಿನ ಚೀಟಿಯನ್ನು ಪರೀಕ್ಷಿಸಿ ಅವರು ಖಂಡಿತವಾಗಿಯೂ ಸರಕಾರಿ ಅಧಿಕಾರಿಗಳೇ ಎಂದು ಖಾತ್ರಿ ಮಾಡಿಕೊಳ್ಳಿರಿ. ಇದು ಖಾತ್ರಿ ಆಗದೇ ಯಾರನ್ನೂ ನಿಮ್ಮ ಮನೆ ಅಥವಾ ಅಂಗಡಿಯ ಒಳಗೆ ಸೇರಿಸಬೇಡಿ.

ಮೋಸಗಾರರ ರೂಪ ಹಾಗೂ ವಿಧಾನ ಕಾಲ ಕಾಲಕ್ಕೆ ಬದಲಾಗುವುದರಿಂದ ಎಲ್ಲಾ ರೀತಿಯ ಸಂಪೂರ್ಣವಾದ ವಿವರಗಳನ್ನು ಈ ಲೇಖನದಲ್ಲಿ ಕೊಡಲಾಗಿಲ್ಲ. ಆದರೆ ನಾವು ಯಾವಾಗಲೂ ತಿಳಿದಿರಬೇಕಾದ್ದು ಯಾವ ವಸ್ತುವೂ ಪುಕ್ಕಟೆ ಅಥವಾ ಅತಿ ಕಡಿಮೆ ಬೆಲೆಗೆ ದೊರೆಯುವುದಿಲ್ಲ. ಎಷ್ಟೇ ಉತ್ತಮ ಬಟ್ಟೆ ಧರಿಸಿದ್ದರೂ ಅಪರಿಚಿತರನ್ನು ನಂಬಬಾರದು. ಮೋಸಗಾರರು ಮಾತಿನಲ್ಲಿ ಮೋಡಿ ಮಾಡುವುದರಿಂದ ಅವರ ಮಾತುಗಳನ್ನು ನಂಬಿದರೆ ಮಾತ್ರ ಮೋಸ ಹೋಗಲು ಸಾಧ್ಯ.

# 24

## ಸೈಕೋಪಾಥ್‌ಗಳು ಮಾಡುವ ಅಪರಾಧಗಳು

ಮೇ ತಿಂಗಳ ಮೂರನೇ ವಾರದಲ್ಲಿ ಬೆಂಗಳೂರಿನ ಪೀಣ್ಯ ಬಡಾವಣೆಯಲ್ಲಿ ಹೇಮಾವತಿ ಎನ್ನುವ 9 ವರ್ಷದ ಬಾಲಕಿಯ ಮೇಲೆ ಅತ್ಯಾಚಾರ ನಡೆದು ಬಾಲಕಿಯ ತಲೆಯನ್ನು ಕಲ್ಲಿನಿಂದ ಜಜ್ಜಿ ಸಾಯಿಸಲಾಗಿತ್ತು. ಅದೃಷ್ಟವಶಾತ್ ಕೊಲೆಯ ಆರೋಪಿ ಗಂಗರಾಜು ಎನ್ನುವ ದನ ಕಾಯುವವನನ್ನು ಕೂಡಲೇ ಬಂಧಿಸಲಾಯಿತು. ಕಳೆದ ವರ್ಷ ಇದೇ ರೀತಿ ಬೆಂಗಳೂರಿನ ಪೀಣ್ಯ ಬಡಾವಣೆಯಲ್ಲಿ ಅಪ್ರಾಪ್ತ ಬಾಲಕಿಯನ್ನು ಗುರಿ ಮಾಡಿ ಅತ್ಯಾಚಾರ ಮಾಡುತ್ತಿದ್ದ ಪ್ರಕರಣಗಳು ಘಟಿಸಿದ್ದವು. ಬೆಂಗಳೂರಿನಲ್ಲೇ ಕೆಲ ವರ್ಷಗಳ ಹಿಂದೆ ಪ್ರವಾಸಕ್ಕೆಂದು ಬಂದಿದ್ದ ವಿದೇಶೀ ಮಹಿಳೆಯೊಬ್ಬಳನ್ನು ಕೆಲವರು ಆಟೋರಿಕ್ಷಾದಲ್ಲಿ ಅಪಹರಿಸಿ ಅವಳಿಗೆ ರೇಪ್ ಮಾಡಿದ ಪ್ರಕರಣ ಇನ್ನೂ ಹಸಿರಾಗಿಯೇ ಇದೆ.

ಸಾಮಾನ್ಯವಾಗಿ ಅಮಾಯಕ ಸ್ತ್ರೀಯರು ಹಾಗೂ ಬಾಲಕಿಯರ ದೇಹದ ಮೇಲೆ ಆಗುವಂತಹ ಪ್ರಕರಣಗಳಿಗೆ ಕಾಮದ ಉದ್ದೇಶ ಇರುತ್ತದೆ. ಆದರೆ ಇದೇ ಮೂಲ ಉದ್ದೇಶ ಅಲ್ಲ. ಕೆಲವು ಬಾರಿ ಕಳ್ಳತನ ಮಾಡುವುದಕ್ಕೆಂದು ಮನೆಗೆ ನುಗ್ಗಿದ ಕಳ್ಳರು ಅತ್ಯಾಚಾರವನ್ನು ನಡೆಸಬಹುದು. ದೈಹಿಕ ಹಿಂಸೆಯ ಅಪರಾಧಗಳಿಗೆ ಸಾಮಾನ್ಯವಾದ ಕಾರಣಗಳು ದ್ವೇಷ, ರೋಷ, ಅಸೂಯೆ, ಕಾಮ, ಅಸ್ತ್ರದ ಲಭ್ಯತೆ, ಜಮೀನಿನ ವಿವಾದ ಹಾಗೂ [illegible] ಮುಖ್ಯವಾದವುಗಳು.

ಎಷ್ಟೋ ಬಾರಿ ಮಾನವನ ದೇಹದ ಮೇಲೆ ಆಗುವ ಅಪರಾಧಗಳು ಇಂತಹ ಯಾವುದೇ ಕಾರಣಗಳು ಇಲ್ಲದೆಯೇ ಆಗಿರುತ್ತವೆ. ಆಕ್ರಮಣಕ್ಕೆ ಗುರಿಯಾಗುವವರು ಅಮಾಯಕರಾಗಿದ್ದು ಆಕ್ರಮಣಕಾರರು ಅಂತಹ ಅಮಾಯಕರನ್ನು ಹಿಂದೆ ನೋಡಿಯೇ ಇರುವುದಿಲ್ಲ. ಇವರೂ ಹಿಂಸೆಯನ್ನು ಮಾಡುವುದರಿಂದ ಕೆಲವರಿಗೆ ಒಂದು ರೀತಿಯ ಆನಂದ ಉಂಟಾಗುವುದರಿಂದ ಅವರು ಅಂತಹ ಆನಂದ ಪಡೆಯಲು ದೈಹಿಕ ಹಿಂಸೆ ಮಾಡುತ್ತಾರೆ. ಕೊಲೆ ಮಾಡುವಾಗ ತಾವು ಯಾರನ್ನು ಕೊಲೆ ಮಾಡಿರುತ್ತಾರೆಯೋ ಅಂತಹವರ ಮೇಲೆ ಯಾವ ರೀತಿಯ ದ್ವೇಷವನ್ನೂ ಇಟ್ಟುಕೊಂಡಿರುವುದಿಲ್ಲ. ಉದಾಹರಣೆಗೆ ಜಾಕ್-ದಿ, ರಿಪ್ಪರ್‌ಗೆ ಯಾವುದೇ ಮಹಿಳೆಯ ಮೇಲೆ ವೈಯಕ್ತಿಕ ದ್ವೇಷ ಇರಲಿಲ್ಲ. ಸಾಮಾನ್ಯವಾಗಿ ಇಂಥವರು ಅಪರಾಧಕ್ಕಾಗಿಯೇ ಅಪರಾಧವನ್ನು ಮಾಡುವಂತಹ ಜನ. ಈ ರೀತಿಯ ಜನರನ್ನು ನಾವು ಸೈಕೋಪಾಥ್ ಎಂದು ಕರೆಯುತ್ತೇವೆ. ಅಂದರೆ ಈ ರೀತಿಯ ಜನರಿಗೆ ಹಲವಾರು ಕಾರಣಗಳಿಂದ ಮನಸ್ಸು ವಿಕೃತಗೊಂಡಿರುತ್ತದೆ. ಅದರ ಫಲವಾಗಿಯೇ ವಿನಾಕಾರಣ ಹಿಂಸೆ ಮಾಡಲು ಅವರು ಹೇಸುವುದಿಲ್ಲ. ಸರ್ವೇ ಸಾಧಾರಣವಾಗಿ ಬಾಲ್ಯದಲ್ಲಿ ಸರಿಯಾಗಿ ಪೋಷಣೆ ಪಡೆಯದಿದ್ದರೆ ಈ ರೀತಿಯ ವ್ಯಕ್ತಿತ್ವ ರೂಪುಗೊಳ್ಳುತ್ತದೆ ಎಂದು ನಾವು ಭಾವಿಸುತ್ತೇವೆ.

ಸೈಕೋಪಾಥ್ ಎನ್ನುವ ಪದ ಮೊದಲು ಬಳಕೆಗೆ ಬಂದಿದ್ದು 1891 ರಲ್ಲಿ. ಯಾವುದಾದರೂ ಒಬ್ಬ ವ್ಯಕ್ತಿಯು ಮಾನಸಿಕ ಸಮತೋಲನವನ್ನು ಕಳೆದುಕೊಂಡಿದ್ದು ಅನೀತಿ ಅನಾಚಾರಗಳನ್ನು ಮಾಡಲು ಹಿಂಜರಿಯದಿದ್ದಲ್ಲಿ ಅಂತಹವನನ್ನು ನಾವು ಸೈಕೋಪಾಥ್ ಎಂದು ಕರೆಯುತ್ತೇವೆ. ಸಾಮಾನ್ಯವಾಗಿ ಸೈಕೋಪಾಥ್ ಎಂದು ಕರೆಯಲಾಗುವ ವ್ಯಕ್ತಿಯ ಮನಸ್ಸಿನಲ್ಲಿನ ಭಾವನೆಗಳು ಎಲ್ಲರಂತಿರದೇ ವಿಕೃತವಾಗಿರುತ್ತದೆ. ಈ ಕಾರಣದಿಂದ ಆತ ಇನ್ನೊಬ್ಬರ ನೋವಿಗೆ ಸ್ಪಂದಿಸುವುದಿಲ್ಲ. ಬೇರೊಬ್ಬರ ಸುಖ-ದುಃಖಗಳ ಬಗ್ಗೆ ನಿರ್ವಿಕಾರನಾಗಿರುತ್ತಾನೆ. ಕೆಲವು ಬಾರಿ ಇತರ ವ್ಯಕ್ತಿಗಳನ್ನು ನೋಡಿದ ಕೂಡಲೇ ಆಕ್ರಮಣವನ್ನು ಮಾಡುವಂತೆ ಅವನ ಮನಸ್ಸು ಪ್ರೇರೇಪಿಸುತ್ತದೆ. ಸೈಕೊಪಾಥ್ ಎಂದು ಕರೆಯಲಾಗುವ ವ್ಯಕ್ತಿ ತನ್ನ ಕೃತ್ಯಗಳಿಂದ ಉಂಟಾಗುವ ಪರಿಣಾಮಗಳು ಏನಾಗಬಹುದು ಎಂದು ಊಹಿಸುವುದಿಲ್ಲ. ಏಕೆಂದರೆ ಅವನು ತಾನು ಮಾಡುವುದೇ ಸರಿಯೆಂದು ಭಾವಿಸಿರುತ್ತಾನೆ. ಎಲ್ಲರೊಡನೆ ಬೆರೆತು ಆತ ಜೀವನ ನಡೆಸದೇ ಸಾಮಾನ್ಯವಾಗಿ ಒಂಟಿಯಾಗಿರುತ್ತಾನೆ. ಸೈಕೊಪಾಥ್ ಸರ್ವೇ ಸಾಧಾರಣವಾಗಿ ಸಾಮಾನ್ಯರಿಗಿಂತ ಹೆಚ್ಚಿನ ಬುದ್ಧಿವಂತಿಕೆಯನ್ನು ಪ್ರದರ್ಶಿಸುತ್ತಾನೆ.

ಸೈಕೋಪಾಥ್ ಎನ್ನುವ ವ್ಯಕ್ತಿ ಅಪರಾಧಗಳನ್ನು ಮಾಡುವ ಮುಂಚೆ ಅವುಗಳ ಬಗ್ಗೆ ಸಾಕಷ್ಟು ಯೋಚನೆ ಮಾಡಿರುತ್ತಾನೆ ಹಾಗೂ ಕೃತ್ಯದ ಬಗ್ಗೆ ಯೋಜನೆಯನ್ನೂ ರೂಪಿಸಿರುತ್ತಾನೆ. ಹೊರನೋಟಕ್ಕೆ ಆತ ಸಂಭಾವಿತನಂತೆ ಕಾಣುತ್ತಾನೆ. ಆತ ಮಾದಕ ವಸ್ತುಗಳಿಗೆ ದಾಸನಾಗಿರುತ್ತಾನೆ. ವಿಕೃತ ಕಾಮವನ್ನು ಕೆಲವು ಬಾರಿ ಪ್ರದರ್ಶಿಸುತ್ತಾನೆ.

ಸೈಕೋಪಾಥ್ ಎಂದು ಕರೆಯಲಾಗುವ ವ್ಯಕ್ತಿಯಿಂದ ಸಂಭವಿಸಿದ ಜಗತ್ತಿನಲ್ಲಿಯೇ ಅತ್ಯಂತ ಕುಖ್ಯಾತ ಹಾಗೂ ಭೀಭತ್ಸ ಪ್ರಕರಣ ಒಂದು ಇಲ್ಲಿ ಉಲ್ಲೇಖನೀಯ. 1950ರಲ್ಲಿ ಇಂಗ್ಲೆಂಡ್‌ನಲ್ಲಿ

ಬ್ರಾಡಿ ಎನ್ನುವ ವ್ಯಕ್ತಿಯು ಮ್ಯಾಂಚೆಸ್ಟರ್‌ನಲ್ಲಿ ಔಷಧಿ ಕಂಪನಿಯೊಂದರಲ್ಲಿ ಕಾರಕೂನನಾಗಿದ್ದ. ಅವನಿಗೆ ಆಗ 21 ವರ್ಷ ವಯಸ್ಸು. ಜರ್ಮನಿಯಲ್ಲಿ ನಾಜಿಗಳು, ಯಹೂದಿಗಳ ಮೇಲೆ ಮಾಡಿದ ಅತ್ಯಾಚಾರದಿಂದ ಅವನು ಸಾಕಷ್ಟು ಪ್ರಭಾವಿತನಾಗಿದ್ದ. ಹಿಟ್ಲರ್‌ನ ಆತ್ಮಚರಿತ್ರೆಯನ್ನು ಸಾಕಷ್ಟು ಬಾರಿ ಓದಿದ್ದ. ಜನರನ್ನು ಹಿಂಸೆ ಮಾಡಬೇಕೆನ್ನುವುದೇ ಅವನ ಮುಖ್ಯ ಉದ್ದೇಶವಾಗಿತ್ತು. ಅವನು ಕೆಲಸ ಮಾಡುತ್ತಿದ್ದ ಕಂಪನಿಯಲ್ಲಿಯೇ ಮೈರಾ ಹಿಂಡ್ಲೆ ಎನ್ನುವವಳು ಇದ್ದಳು. ಆಕೆ ಬ್ರಾಡಿಯನ್ನು ಪ್ರೀತಿಸುತ್ತಿದ್ದಳು. ಒಮ್ಮೆ ಬ್ರಾಡಿ ಆಕೆಯನ್ನು ಊಟಕ್ಕೆ ಕರೆದೊಯ್ದಾಗ ಆಕೆ ಅವನಿಗೆ ತನ್ನ ಪ್ರೇಮವನ್ನು ಸಾರಿ ಅವರಿಬ್ಬರೂ ಒಟ್ಟಾಗಿ ಜೀವಿಸಲಾರಂಭಿಸಿದರು.

ಕಾಲಕ್ರಮೇಣ ಬ್ರಾಡಿ ಮೈರಾ ತನ್ನ ವಿಚಾರಗಳತ್ತ ವಾಲುವಂತೆ ಮಾಡಿದ. ಬ್ರಾಡಿಯನ್ನು ಅತೀವವಾಗಿ ಪ್ರೀತಿಸುತ್ತಿದ್ದುದರಿಂದ ಅವನು ಹೇಳಿದಂತೆ ಆಕೆ ಪಾಲಿಸುತ್ತಿದ್ದಳು. ಅಪ್ರಾಪ್ತ ವಯಸ್ಸಿನ ಬಾಲಕ ಬಾಲಕಿಯರನ್ನು ಕೊಂದು ಆನಂದ ಪಡೆಯಬೇಕು ಎಂದು ಬ್ರಾಡಿ ಹೇಳಿದಾಗ ಮೈರಾ ಕೂಡಲೇ ಅದಕ್ಕೊಪ್ಪಿದಳು. 1963ರ ಜುಲೈ 12 ರಂದು ಮೈರಾ ರಸ್ತೆಯಲ್ಲಿ ಹೋಗುತ್ತಿದ್ದ 16 ವಯಸ್ಸಿನ ಪಾಲಿನ್ ಎಂಬ ಬಾಲಕಿಯನ್ನು ತಡೆದು ತನ್ನ ಜೊತೆ ಪಾರ್ಕಿಂಗ್‌ಗೆ ಬರಲು ಪುಸಲಾಯಿಸಿದಳು. ಸ್ವಲ್ಪ ದೂರ ಅವಳ ಜೊತೆ ನಡೆದುಕೊಂಡು ಹೋದನಂತರ ಬ್ರಾಡಿ ಅವರಿಬ್ಬರನ್ನೂ ಸೇರಿಕೊಂಡ. ಇಬ್ಬರೂ ನಿರ್ಜನ ಪ್ರದೇಶವೊಂದಕ್ಕೆ ಪಾಲಿನ್‌ಳನ್ನು ಕರೆದೊಯ್ದು ಅವಳನ್ನು ಕೊಂದು ಅವಳ ದೇಹವನ್ನು ಅಲ್ಲೇ ಒಂದು ಗುಂಡಿ ತೆಗೆದು ಹೂತುಬಿಟ್ಟರು. ಇದಾದ ನಾಲ್ಕು ವಾರದ ನಂತರ 12 ವರ್ಷಗಳ ವಯಸ್ಸಿನ ಜಾನ್ ಎಂಬ ಅಮಾಯಕ ಬಾಲಕನನ್ನು ಅಪಹರಿಸಿ ಅವನನ್ನು ಕೊಂದು ಅವನ ಹೆಣವನ್ನು ಪಾಲಿಯ ಹೆಣದ ಬಳಿಯೇ ಹೂತರು. 6 ತಿಂಗಳಾದರೂ ತಮ್ಮ ಪತ್ತೆ ಆಗದಿದ್ದಾಗ ಉತ್ತೇಜಿತಗೊಂಡ ಈ ಕುಖ್ಯಾತ ಜೋಡಿ 1964ರಲ್ಲಿ 12 ವರ್ಷ ವಯಸ್ಸಿನ ಕೀತ್ ಎನ್ನುವವನನ್ನು ಅಪಹರಣ ಮಾಡಿ ಅವನನ್ನು ಕೊಂದು ಅವನ ಹೆಣವನ್ನು ಹಿಂದೆ ಹೂತಿದ್ದ ಹೆಣಗಳ ಪಕ್ಕದಲ್ಲಿಯೇ ಹೂತರು. ಆಶ್ಚರ್ಯ ಎಂದರೆ ಈ ಜೋಡಿ ತಾವು ಹೂತ ಹೆಣಗಳ ಗೋರಿಯ ಮೇಲೆ ಕೂತು ನಗು ನಗುತ್ತಾ ಫೋಟೋ ತೆಗೆಸಿಕೊಂಡು ಅವನ್ನು ತಮ್ಮ ಮನೆಯಲ್ಲಿ ಫ್ರೇಮ್ ಮಾಡಿಸಿದ್ದರು. 1964ರ ಡಿಸೆಂಬರ್ 26ರಂದು ಈ ಜೋಡಿ ಲೆಸ್ಲಿ ಎಂಬ 10 ವರ್ಷದ ಬಾಲಕಿಯನ್ನು ಅಪಹರಿಸಿ ಆಕೆಯನ್ನು ವಿವಸ್ತ್ರಳನ್ನಾಗಿ ಮಾಡಿ ಆಕೆಯ ನಗ್ನ ಛಾಯಾಚಿತ್ರಗಳನ್ನು ತೆಗೆದು ಅನಂತರ ಬಲಾತ್ಕಾರ ಮಾಡಿದರು. ಬಾಲಕಿ ಚೀರುತ್ತಿದ್ದಾಗ ಆ ಚೀತ್ಕಾರಗಳನ್ನು ಟೇಪ್‌ರೆಕಾರ್ಡರ್ ಮೂಲಕ ಧ್ವನಿ ಮುದ್ರಿಸಿಕೊಂಡರು. ಅನಂತರ ಅವಳನ್ನು ಹೊಡೆದು ಕೊಂದು ಅವಳ ಹೆಣವನ್ನು ಉಳಿದ ಹೆಣಗಳ ಪಕ್ಕದಲ್ಲಿಯೇ ಹೂತರು. ಸಂಜೆಯ ಸಮಯದಲ್ಲಿ ಮಗುವಿನ ಚೀತ್ಕಾರದ ಟೇಪನ್ನು ಪದೇ ಪದೇ ಆಲಿಸಿ ವಿಕೃತ ಆನಂದವನ್ನು ಪಡೆಯುತ್ತಿದ್ದರು.

ಒಂದು ವರ್ಷದ ಅವಧಿಯಲ್ಲಿ 3 ಜನರ ಕೊಲೆ ಮಾಡಿದ್ದರೂ ಪೋಲೀಸರ ಬಲೆಗೆ ಬೀಳದ್ದರಿಂದ ಬ್ರಾಡಿ ಹಾಗೂ ಮೈರಾ ಹೆಚ್ಚು ಹೆಚ್ಚು ಧೈರ್ಯದಿಂದ ಅಪರಾಧಗಳನ್ನು ಮಾಡಲು ಮುಂದಾದರು. ಇದರಲ್ಲಿ ಅವರಿಬ್ಬರೂ ಮೈರಾಳ ಸೋದರ ಸಂಬಂಧಿ ಡೇವಿಡ್ ಎನ್ನುವವನನ್ನು

ಪ್ರೀಮಿಯಂ ನಷ್ಟ ಮನಸ್ಸಿಗೆ ಸಿಕ್ಕುವ ನೆಮ್ಮದಿಗಿಂತ ಹೆಚ್ಚು ಎಂದೇನೂ ಅನ್ನಿಸುವುದಿಲ್ಲ. ಮನೆಗಳನ್ನು ರಕ್ಷಿಸಲು ಇರುವ ಅತ್ಯಂತ ಉತ್ತಮ ಸಾಧನ ಎಂದರೆ ಸಾಕು ನಾಯಿಗಳು. ನನ್ನ ಪೊಲೀಸ್ ವೃತ್ತಿ ಜೀವನದಲ್ಲಿ ಆಗಿರುವ ಅನುಭವದಿಂದ ಹೇಳುತ್ತೇನೆ. ನಾಯಿಗಳಿರುವ ಮನೆಗೆ ಕಳ್ಳರು ಹೋಗಲು ಹಿಂಜರಿಯುತ್ತಾರೆ. ಹೀಗಾಗಿ ಉತ್ತಮ ತಳಿಯ ನಾಯಿಯನ್ನು ಮನೆಯಲ್ಲಿ ಇಟ್ಟುಕೊಳ್ಳುವುದು ಒಳ್ಳೆಯದು.

ಈಚೀಚಿನ ದಿನಗಳಲ್ಲಿ ನಗರ ಹಾಗೂ ಪಟ್ಟಣಗಳಲ್ಲಿ ಖಾಸಗಿ ಸೆಕ್ಯೂರಿಟಿ ಗಾರ್ಡ್‌ಗಳು ಲಭ್ಯವಿದ್ದಾರೆ. ಬಡಾವಣೆಯ 8-10 ಮನೆಗಳವರು ಒಟ್ಟುಗೂಡಿ ತಮ್ಮ ಬಡಾವಣೆಗೆ ಕಾವಲುಗಾರರನ್ನು ನೇಮಿಸಿಕೊಳ್ಳುವುದು ದೆಹಲಿಯಂತಹ ನಗರದಲ್ಲಿ ತೀರಾ ಸಾಮಾನ್ಯವಾಗಿದೆ. ಎಷ್ಟೋ ಬಾರಿ ಕಾವಲುಗಾರರು ಕಳ್ಳರ ಜೊತೆ ಶಾಮೀಲಾಗಿರುವ ಘಟನೆಗಳು ನಡೆದಿವೆಯಾದರೂ ಇವು ತುಂಬಾ ವಿರಳ. ಪ್ರತಿಷ್ಠಿತ ಸೆಕ್ಯೂರಿಟಿ ಏಜೆನ್ಸಿಯಿಂದ ಕಾವಲುಗಾರರನ್ನು ಪಡೆಯುವುದು ಸೂಕ್ತ.

ಮನೆಯನ್ನು ಕಾಯಲು ಹಲವಾರು ಆಧುನಿಕ ಸಾಮಗ್ರಿಗಳು ಬಂದಿವೆ. ಆಗಂತುಕ ಮನೆಯೊಳಗೆ ನುಗ್ಗಿದರೆ ಜನರನ್ನು ಎಚ್ಚರಿಸುವ ಎಲೆಕ್ಟ್ರಾನಿಕ್ ಸೈರನ್‌ಗಳು ಇವೆ. ಇಂತಹ ಸಾಧನೆಗಳು ಎಷ್ಟೋ ಬಾರಿ ತಾವಾಗಿಯೇ ಪೊಲೀಸ್ ಠಾಣೆಗೆ ಎಚ್ಚರಿಸಬಲ್ಲವಾಗಿವೆ. ಇಂತಹ ಸಾಧನಗಳನ್ನು ಬ್ಯಾಂಕಿನಲ್ಲಿ ಅಳವಡಿಸುತ್ತಾರೆ. ಮನೆಯ ಹೊರಗೆ ಯಾರು ಬಂದಿದ್ದಾರೆ ಎಂದು ನೋಡಲು ಕ್ಲೋಸ್ ಸರ್ಕ್ಯೂಟ್ ಟೆಲಿವಿಷನ್‌ಗಳು ಬಂದಿವೆ. ಇಂತಹ ಸಾಧನಗಳು ಹೆಚ್ಚಿನ ಬೆಲೆಯದ್ದಾಗಿದ್ದು ಮಧ್ಯಮ ವರ್ಗದ ಜನರು ಇದನ್ನು ಕೊಳ್ಳುವುದು ಕಷ್ಟ. ಮನೆ ಹೊರಗೆ ಸೈರನ್ ಹಾಕಿ, ಕಳ್ಳರು ಮನೆಯನ್ನು ಆವರಿಸಿದಾಗ ಅದನ್ನು ಬಾರಿಸಿದರೆ ಕಳ್ಳರು ಹೆದರಿ ಓಡುತ್ತಾರೆ. ಸೈರನ್ ಬೆಲೆ ತುಂಬಾ ಕಡಿಮೆ.

ಇತ್ತೀಚಿನ ವರ್ಷಗಳಲ್ಲಿ ಹಲವಾರು ಊರುಗಳಲ್ಲಿ ಪೊಲೀಸರೇ ಯೋಜಿಸಿರುವ 'ನೆರೆಹೊರೆ ಪಹರೆ ಯೋಜನೆ' ಜಾರಿಗೆ ಬಂದಿದೆ. ಈ ಯೋಜನೆಯಲ್ಲಿ ಬಡಾವಣೆಯಲ್ಲಿರುವ ಹಲವಾರು ಯುವಕರು ಒಂದುಗೂಡಿ ಸಾಮೂಹಿಕವಾಗಿ ರಾತ್ರಿ ಗಸ್ತು ಹಾಗೂ ಹಗಲು ಗಸ್ತು ಮಾಡುತ್ತಾ ತಮ್ಮ ಬಡಾವಣೆಯನ್ನು ಕಳ್ಳಕಾಕರಿಂದ ರಕ್ಷಿಸಿಕೊಳ್ಳುತ್ತಾರೆ. ಇಂತಹ ಯೋಜನೆಯನ್ನು ನಿಮ್ಮ ಬಡಾವಣೆಯಲ್ಲಿಯೂ ಪೊಲೀಸರ ನೆರವಿನೊಂದಿಗೆ ರೂಪಿಸಿಕೊಳ್ಳಬಹುದು. ದೆಹಲಿ ನಗರದಲ್ಲಿ ಯಾವ ಬಡಾವಣೆಯಲ್ಲಿ ಈ ಯೋಜನೆ ಜಾರಿಯಲ್ಲಿದೆಯೋ ಅಲ್ಲಿ ಅಪರಾಧಗಳ ಸಂಖ್ಯೆ ಗಣನೀಯವಾಗಿ ಕಡಿಮೆಯಾಗಿದೆ.

ಮನೆಯಲ್ಲಿ ನಾವು ಇದ್ದಾಗ ಕಳ್ಳರೊಡನೆ ಮುಖಾ ಮುಖಿಯಾದಾಗ ಏನು ಮಾಡಬೇಕು ಎಂದು ಹಲವಾರು ಜನರು ಕೇಳುತ್ತಾರೆ. ಕಳ್ಳರೊಡನೆ ಮುಖಾಮುಖಿಯಾದಾಗ ಅವರನ್ನು ಹಿಮ್ಮೆಟ್ಟಿಸಲು ವಿಶಿಲ್ ಊದಬಹುದು. ಕಳ್ಳರ ಮುಖಕ್ಕೆ ಮೆಣಸಿನಪುಡಿ ಎರಚಿ ಸಾಕಷ್ಟು ಜನ ಅಪಾಯದಿಂದ ಪಾರಾಗಿರುವ ವಿಷಯ ನನ್ನ ಅನುಭವಕ್ಕೆ ಬಂದಿದೆ. ಏರೋಸೋಲ್ ಕ್ಯಾನ್ (ಅಂದರೆ ಮೇಲುಗಡೆಯ ಬಟನ್ ಒತ್ತಿದರೆ ಸ್ಪ್ರೇ ರೂಪದಲ್ಲಿ ಬರುವ ಸೆಂಟ್ ಇತ್ಯಾದಿ ಇರುವ

ಕ್ಯಾನ್) ಬಳಸಿ ಆಗಂತುಕರ ಕಣ್ಣಿಗೆ ಗುರಿಯಾಗಿಟ್ಟರೆ ಅವರ ಕಣ್ಣಿನಲ್ಲಿ ನೀರು ಬರುತ್ತದೆ. ಮಹಿಳೆ ಬಳಸುವ ಪುಟ್ಟ ಕ್ಯಾನ್‌ಗಳನ್ನು ಈ ಕಾರಣಕ್ಕೆ ಉಪಯೋಗಿಸಬಹುದು. ಕ್ಯಾನಿನಿಂದ ಬರುವ ದ್ರವ ಆಗಂತುಕನ ಕಣ್ಣಿನ ಮೇಲೆ ಪರಿಣಾಮವನ್ನುಂಟು ಮಾಡಿ ಅವನನ್ನು ಸ್ವಲ್ಪ ಕಾಲ ಅಧೀರನನ್ನಾಗಿ ಮಾಡುತ್ತದೆ. ಆಗ ಅತನಿಂದ ನಾವು ತಪ್ಪಿಸಿಕೊಳ್ಳ ಬಹುದು.

ಮನೆಯಲ್ಲಿ ನಾವು ಇರುವಾಗಲೇ ಅಪರಾಧಕ್ಕೆ ತುತ್ತಾಗುವುದು ಸೇವಕರುಗಳಿಂದ. ಒಂದು ಸತ್ಯ ಘಟನೆಯನ್ನು ಇಲ್ಲಿ ಹೇಳುತ್ತೇನೆ. ಚೆನ್ನೈ ನಗರದಲ್ಲಿ ಒಬ್ಬರು ಹಿರಿಯ ಅಧಿಕಾರಿ ಸರಕಾರಿ ಸೇವೆಯಿಂದ ನಿವೃತ್ತರಾಗಿ ತಮ್ಮ ವಿಶಾಲವಾದ ಬಂಗಲೆಯಲ್ಲಿ ಪತ್ನಿಯೊಡನೆ ಇರುತ್ತಿದ್ದರು. ಅವರ ಮಕ್ಕಳು ವಿದೇಶದಲ್ಲಿ ಇದ್ದರು. ಒಬ್ಬ ಇಂಗ್ಲೀಷ್ ಕಲಿತಿರುವ ಯುವತಿ ಅವರ ಮನೆಗೆ ಬಂದು ತಾನು ಅವರ ಮನೆ ಕೆಲಸ ಮಾಡಿಕೊಡುವುದಾಗಿ ಕೇಳಿದಳು. ಆ ಯುವತಿಯ ಮಾತುಕತೆ ವೇಷ-ಭೂಷಣಗಳು, ನಡೆ-ನುಡಿ ನೋಡಿದ ಅಧಿಕಾರಿ ಅವಳನ್ನು ಮನೆ ಕೆಲಸಕ್ಕೆಂದು ನೇಮಿಸಿಕೊಂಡರು. ಕೆಲವು ದಿನಗಳ ನಂತರ ಆ ಯುವತಿ ತಾನು ಮದುವೆ ಆಗಿರುವುದಾಗಿಯೂ ತನ್ನ ಗಂಡ ಸೈನ್ಯದಲ್ಲಿ ಕೆಲಸ ಮಾಡುತ್ತಿದ್ದಾರೆಂದೂ ತಿಳಿಸಿದಳು. ಸುಮಾರು 3 ತಿಂಗಳ ನಂತರ ಅವಳನ್ನು ನೋಡಲು ಬಂದ ವ್ಯಕ್ತಿಯನ್ನು ಮನೆಯ ಒಡೆಯರಿಗೆ 'ಇವರೇ ನನ್ನ ಗಂಡ' ಎಂದು ಪರಿಚಯಿಸಿದಳು. ಆ ವ್ಯಕ್ತಿಗೆ ಸೇವಕಿಯ ಜೊತೆ ಇರಲು ಅನುಕೂಲ ಮಾಡಿಕೊಡಲಾಯಿತು. ಮಾರನೆಯ ದಿನ ಸೇವಕಿ ಮತ್ತು ಅವಳ ಗಂಡ ವೃದ್ಧ ದಂಪತಿಗಳನ್ನು ಕೊಲೆ ಮಾಡಿ ಅವರ ಮನೆಯಲ್ಲಿದ್ದ ಎಲ್ಲಾ ವಸ್ತುಗಳನ್ನು ದೋಚಿಕೊಂಡು ಗುಲ್ಬಾರ್ಗಾದಲ್ಲಿ ಬಹಳ ವೈಭವದಿಂದ ಜೀವನ ಮಾಡುತ್ತಿದ್ದರು. ಚೆನ್ನೈನ ಪೊಲೀಸರು ಗುಲ್ಬಾರ್ಗಾದಲ್ಲಿ ಈ ಯುವ ದಂಪತಿಗಳನ್ನು ಬಂಧಿಸಿದಾಗ ಅಲ್ಲಿ ಜನರಿಗೆ ಆಶ್ಚರ್ಯವೋ ಆಶ್ಚರ್ಯವಾಯಿತು. ಏಕೆಂದರೆ ಕಳ್ಳತನದ ಮಾಲನ್ನು ಉಪಯೋಗಿಸಿ ದಂಪತಿಗಳು ಧಾರಾಳವಾಗಿ ದಾನ-ಧರ್ಮ ಮಾಡಿದ್ದರು!

ಮನೆಯ ಕೆಲಸದವರು ಅತ್ಯಾಚಾರದಂತಹ ಅಪರಾಧಗಳನ್ನು ಮಾಡುವುದೂ ಬೆಳಕಿಗೆ ಬಂದಿದೆ. ಸಣ್ಣಪುಟ್ಟ ಕಳ್ಳತನಗಳಲ್ಲದೇ ಇತ್ತೀಚಿನ ದಿನಗಳಲ್ಲಿ ಸೇವಕರಿಂದ ಭಾರಿ ಅಪರಾಧಗಳಾದ ಕೊಲೆ ಮತ್ತು ಅತ್ಯಾಚಾರಗಳು ನಡೆಯುತ್ತಿರುವುದು ಆತಂಕದ ವಿಷಯ.

ನಾವು ಮನೆಗೆ ಸೇವಕರನ್ನು ನೇಮಿಸಿಕೊಳ್ಳುವಾಗ ಆ ಸೇವಕರ ಪೂರ್ವ ಚರಿತ್ರೆಯ ಬಗ್ಗೆ ಏನನ್ನೂ ತಿಳಿದುಕೊಳ್ಳುವುದಿಲ್ಲ. ಅವನ ಹೆಸರು, ಊರು ಬಯಸುವ ಸಂಬಳ ಇತ್ಯಾದಿಗಳನ್ನು ಮಾತ್ರ ಕೇಳಿ ಅವನನ್ನು ಕೆಲಸಕ್ಕೆ ಇಟ್ಟುಕೊಳ್ಳುತ್ತೇವೆ. ಅವನನ್ನು ಕೆಲಸಕ್ಕೆ ಇಟ್ಟುಕೊಳ್ಳುವಾಗ ಅವನು ಈ ಹಿಂದೆ ಕಳ್ಳತನ ಮಾಡಿರಬಹುದು, ಕೊಲೆ ಮಾಡಿರಬಹುದು, ಅತ್ಯಾಚಾರ ಮಾಡಿರಬಹುದು ಎನ್ನುವ ವಿಷಯಗಳನ್ನು ನಾವು ಗಮನಿಸುವುದೇ ಇಲ್ಲ. ಒಂದೆರಡು ತಿಂಗಳು ಪ್ರಾಮಾಣಿಕನಂತೆ ಕೆಲಸ ಮಾಡಿದ ಕೂಡಲೇ ನಾವು ಅಂತಹವರನ್ನು ಪೂರ್ಣವಾಗಿ ನಂಬಿ ನಮ್ಮ ಮನೆಯನ್ನು ಅವನ ಮೇಲೆ ಬಿಟ್ಟುಬಿಡುತ್ತೇವೆ. ಇತ್ತೀಚಿನ ದಿನಗಳಲ್ಲಿ ಸೇವಕರಿಂದ ಕಳ್ಳತನ ಹೆಚ್ಚುತ್ತಿರುವ ಹಿನ್ನೆಲೆಯಲ್ಲಿ ಮನೆಗೆ ಸೇವಕರನ್ನು ನೇಮಿಸಿಕೊಳ್ಳುವಾಗ ಅವರ ಪೂರ್ವಾಶ್ರಮದ

ಬಗ್ಗೆ ಮಾಹಿತಿ ಪಡೆಯಬೇಕು. ಆ ವ್ಯಕ್ತಿ ಹೆಸರು, ವಯಸ್ಸು, ತಂದೆಯ ಹೆಸರು, ವಿಳಾಸ, ಈ ಹಿಂದೆ ಕೆಲಸ ಮಾಡಿದ ಮನೆಯ ಮಾಲೀಕರ ಹೆಸರು, ವಿಳಾಸ ಇತ್ಯಾದಿಗಳನ್ನು ಪಡೆದು ಆತನ ಛಾಯಾಚಿತ್ರದ ಕಾಪಿಗಳನ್ನು ಪಡೆದು ಆತನ ಹೆಬ್ಬೆಟ್ಟಿನ ಗುರುತುಗಳನ್ನು ಪಡೆಯಬೇಕು. ಈ ವಿಷಯಗಳನ್ನು ಸಂಬಂಧಪಟ್ಟ ಪೊಲೀಸ್ ಕಮೀಷನರ್‌ರಿಗಾಗಲೀ ಇಲ್ಲವೇ ಪೊಲೀಸ್ ಸೂಪರಿಂಟೆಂಡೆಂಟ್ ಗಾಗಲೀ ಕೊಟ್ಟರೆ ಅವರು ಆ ವ್ಯಕ್ತಿಯ ಪೂರ್ವ ಚರಿತ್ರೆಯ ಬಗ್ಗೆ ವಿಚಾರಣೆ ನಡೆಸಿ ಮಾಹಿತಿ ತಿಳಿಸುತ್ತಾರೆ. ಒಂದು ವೇಳೆ ಪೊಲೀಸರ ವಿಚಾರಣೆಯಿಂದ ಅವನು ಅಪರಾಧ ಮಾಡುವಂತಹ ವ್ಯಕ್ತಿ ಅಲ್ಲವೆಂದು ತಿಳಿದುಬಂದರೆ ಅವನನ್ನು ಕೆಲಸದಲ್ಲಿ ಮುಂದುವರಿಸಬಹುದು. ಇಲ್ಲವಾದರೆ ಅವನನ್ನು ಕೆಲಸದಿಂದ ತೆಗೆಯಬಹುದು.

# 26

## ರಸ್ತೆಯಲ್ಲಿ ಹೋಗುವಾಗ ಜಾಗರೂಕರಾಗಿರಿ

ಸಾಮಾನ್ಯವಾಗಿ ನಾವು ರಸ್ತೆಯಲ್ಲಿ ಹೋಗುತ್ತಿರುವಾಗ ನಾಲ್ಕು ರೀತಿಯ ಅಪರಾಧಗಳಿಗೆ ಗುರಿಯಾಗುತ್ತೇವೆ. ಮೊದಲನೆಯದು ಸರಗಳ್ಳತನ ಎರಡನೆಯದು ಕಿಸೆಗಳ್ಳತನ. ಮೂರನೆಯದು ಜಬರಿ ಕಳವು ಅಂದರೆ ನಮ್ಮನ್ನು ಹೆದರಿಸಿ ಅಥವಾ ಹೊಡೆದು ಬಡಿದು ಮಾಡಿ ನಮ್ಮಲ್ಲಿರುವ ವಸ್ತುಗಳನ್ನು ಕಿತ್ತುಕೊಳ್ಳುವುದು. ನಾಲ್ಕನೆಯದು ದೇಹದ ಮೇಲಿನ ಅಪರಾಧಗಳಾದ ಹಲ್ಲೆ, ಮಾನಭಂಗ, ಅತ್ಯಾಚಾರ ಇತ್ಯಾದಿ. ಇವಲ್ಲದೆ ನಾವು ರಸ್ತೆ ಅಪಘಾತಗಳಿಗೂ ಗುರಿಯಾಗಬಹುದು.

ರಸ್ತೆಯಲ್ಲಿ ಹೋಗುತ್ತಿರುವಾಗ ಕಳ್ಳರು ನಮ್ಮ ಬಳಿ ಕಳ್ಳತನಕ್ಕೆ ಸಿಗಬಹುದಾದ ವಸ್ತುಗಳು ಇವೆಯೋ ಇಲ್ಲವೋ, ನಾವು ಒಬ್ಬಂಟಿಗರಾಗಿ ಹೋಗುತ್ತಿದ್ದೇವೆಯೋ, ಇಲ್ಲವೋ. ನಾವು ಹೋಗುತ್ತಿರುವ ರಸ್ತೆಯಲ್ಲಿ ಜನರ ಸಂಚಾರ ಹೇಗಿದೆ ಇತ್ಯಾದಿ ವಿಷಯಗಳ ಬಗ್ಗೆ ಸೂಕ್ಷ್ಮವಾಗಿ ಗಮನ ಹರಿಸುತ್ತಾರೆ. ಸರ್ವೇಸಾಮಾನ್ಯವಾಗಿ ನಾವು ರಸ್ತೆಯಲ್ಲಿ ಅನುಭವಿಸಬಹುದಾದ ಅಪರಾಧ ಎಂದರೆ ಸರಗಳ್ಳತನ, ಹೆಣ್ಣುಮಕ್ಕಳು ಬೆಳಗಿನ ಜಾವ ವಾಕಿಂಗ್ ಹೋಗುವಾಗಲೋ ಅಥವಾ ಬಸ್‌ಸ್ಟಾಂಡ್‌ನಲ್ಲಿ ನಿಂತಿರುವಾಗಲೋ ಅಥವಾ ಅಂಗಡಿಯಿಂದ ಮನೆಗೆ ಬರುತ್ತಿರುವಾಗಲೋ ಹಿಂದಿನಿಂದ ಬಂದಂತಹ ಕಳ್ಳರು ನೇರವಾಗಿ ಆಕೆಯ ಕುತ್ತಿಗೆಗೆ ಕೈಹಾಕಿ ಅಲ್ಲಿದ್ದ ಸರವನ್ನು ಬಲವಂತವಾಗಿ ಎಳೆದು ಅಪಹರಿಸುತ್ತಾರೆ. ಸಾಮಾನ್ಯವಾಗಿ ಕಳ್ಳರು ನಮ್ಮ

ಹಿಂದುಗಡೆಯಿಂದ ಬರುತ್ತಾರೆ. ಮೋಟಾರ್‌ಸೈಕಲ್‌ನಲ್ಲಿ ಬರುವುದು ಇಲ್ಲವೇ ಸೈಕಲ್ ಮೇಲೆ ಬರಬಹುದು. ಕೆಲವರು ನಡೆದೇ ಬರುತ್ತಾರೆ. ಸಾಮಾನ್ಯವಾಗಿ ಇಂತಹ ಕೃತ್ಯಗಳನ್ನು ಇಬ್ಬರು ಸೇರಿ ಮಾಡುತ್ತಾರೆ. ಹಿಂದಿನಿಂದ ತಮ್ಮ ವಾಹನವನ್ನು ನಮ್ಮ ಪಕ್ಕಕ್ಕೆ ತಂದು ನಿಲ್ಲಿಸಿ ಯಾವುದಾದರೂ ಒಂದು ಮನೆಯ ವಿಳಾಸವನ್ನು ಕೇಳಿದ ಹಾಗೆ ಮಾಡುತ್ತಾರೆ. ವಿಳಾಸ ಹೇಳಲು ಹೊರಟಾಗ ನೇರವಾಗಿ ಕತ್ತಿನಲ್ಲಿರುವ ಸರಕ್ಕೆ ಕೈ ಹಾಕಿ ಕಿತ್ತುಕೊಂಡು ಮೋಟಾರ್‌ಸೈಕಲ್ ಮೇಲೆ ಪರಾರಿಯಾಗುತ್ತಾರೆ. ಹೆಣ್ಣು ಮಕ್ಕಳು ಈ ರೀತಿ ಸರಗಳ್ಳತನದಿಂದ ತಪ್ಪಿಸಿಕೊಳ್ಳಬೇಕಾದರೆ ಎರಡು ಸುಲಭ ಉಪಾಯಗಳಿವೆ.

ಮೊದಲನೆಯ ಉಪಾಯ ಎಲ್ಲರಿಗೂ ಕಾಣುವಂತೆ ಭಾರಿ ಒಡವೆಗಳನ್ನು ಧರಿಸಿ ರಸ್ತೆಯಲ್ಲಿ ಒಬ್ಬಂಟಿಯಾಗಿ ಓಡಾಡಬಾರದು. ತೊಟ್ಟಿರುವ ಆಭರಣಗಳನ್ನು ಸೆರಗಿನಿಂದ ಮುಚ್ಚಿದರೆ ಉತ್ತಮ. ರಸ್ತೆಯಲ್ಲಿ ನಡೆಯುವಾಗ ವಾಹನ ಸಂಚಾರದ ಎದುರುಗಡೆ ಇರುವಂತೆ ನಡೆಯಬೇಕು. ಎಂದರೆ ವಾಹನಗಳು ಬರುವ ದಿಕ್ಕಿಗೆ ಎದುರಾಗಿ ನಡೆಯಬೇಕೇ ಹೊರತು ವಾಹನಗಳು ಬರುವ ದಿಕ್ಕಿನಲ್ಲಿ ನಡೆಯಬಾರದು. ಏಕೆಂದರೆ ಮೋಟಾರ್‌ಸೈಕಲ್‌ನಲ್ಲಾಗಲೀ, ಸೈಕಲ್‌ನಲ್ಲಾಗಲೀ ಕಳ್ಳರು ನಮ್ಮ ಹಿಂದಿನಿಂದ ಬರುವ ಸಂದರ್ಭ ಇರುವುದಿಲ್ಲ. ನಮ್ಮ ಎದುರುಗಡೆ ವಾಹನವೊಂದು ಬಂದು ಅದರಿಂದ ನಮಗೆ ಗಾಬರಿಯಾದರೆ ಜೋರಾಗಿ ಕಿರುಚಿ ವಿರುದ್ಧ ದಿಕ್ಕಿನಲ್ಲಿ ಓಡಬೇಕು. ಅದಷ್ಟು ಮಟ್ಟಿಗೆ ರಾತ್ರಿ ವೇಳೆ ರಸ್ತೆಗಳಲ್ಲಿ ಒಬ್ಬಂಟಿಯಾಗಿ ಅಡ್ಡಾಡಬಾರದು. ಒಂದು ವೇಳೆ ನಿಮ್ಮನ್ನು ಯಾರಾದರೂ ಹಿಂಬಾಲಿಸುತ್ತಿದ್ದಾರೆ ಎಂಬ ಸಂಶಯ ಬಂದರೆ ಕೂಡಲೇ ಜನಸಂದಣಿ ಹೆಚ್ಚಾಗಿರುವ ಜಾಗಕ್ಕೆ ಹೋಗಿ.

ಹಲವಾರು ಬಾರಿ ನಮ್ಮ ಕೈಯಲ್ಲಿರುವ ಸೂಟ್‌ಕೇಸ್, ಕೈಚೀಲ ಇತ್ಯಾದಿಗಳನ್ನು ಕಳ್ಳರು ಅಪಹರಿಸುತ್ತಾರೆ. ಇದು ಸಾಮಾನ್ಯವಾಗಿ ನಡೆಯುವುದು ನಾವು ಬ್ಯಾಂಕಿಗೆ ಹಣ ಕಟ್ಟಲು ಹೋಗುವಾಗ ಅಥವಾ ಹಣ ತರಲು ಹೋಗುವಾಗ. ಸಾಮಾನ್ಯವಾಗಿ ಇಂತಹ ಪ್ರಕರಣಗಳಿಗೆ ತುತ್ತಾಗುವವರು ವ್ಯಾಪಾರಿಗಳು ಅಥವಾ ಅವರ ಸೇವಕರು. ಪ್ರತಿನಿತ್ಯದ ತಮ್ಮ ವ್ಯವಹಾರಕ್ಕೆ ಅವರು ಬ್ಯಾಂಕಿಗೆ ಹೋಗಿ ಬರುವುದರ ಬಗ್ಗೆ ಕಳ್ಳರಿಗೆ ಮಾಹಿತಿ ಇರುತ್ತದೆ. ಹೀಗಾಗಿ ಅವರು ಇಂತಹ ಜನರನ್ನು ಹಿಂಬಾಲಿಸಿ ಹೊಂಚುಹಾಕಿ ಅವರಿಂದ ಹಣದ ಬ್ಯಾಗನ್ನು ಕಸಿಯುತ್ತಾರೆ. ಬ್ಯಾಗನ್ನು ಎರಡು ಮೂರು ರೀತಿಯಲ್ಲಿ ಕಸಿದುಕೊಳ್ಳಬಹುದು. ಜನನಿಬಿಡ ರಸ್ತೆಯಲ್ಲಿ ಎದುರುಗಡೆ ಬಂದು ಜೋರಾಗಿ ಡಿಕ್ಕಿ ಹೊಡೆದು ಆ ಡಿಕ್ಕಿಯಿಂದ ನಾವು ಅಧೀರರಾದಾಗ ಬ್ಯಾಗನ್ನು ಲಪಟಾಯಿಸುತ್ತಾರೆ. ಅಥವಾ ನೆಲದ ಮೇಲೆ ಕೆಲವು ರೂಪಾಯಿಗಳನ್ನು ಚೆಲ್ಲಿ ನಿಮ್ಮ ಹಣ ಕೆಳಕ್ಕೆ ಬಿದ್ದಿದೆ. ಎಂದು ನಮ್ಮ ಗಮನವನ್ನು ಬೇರೆಡೆಗೆ ಸೆಳೆಯುತ್ತಾರೆ. ಈ ರೀತಿ ಗಮನ ಬೇರೆಡೆಗೆ ಹೋದಾಗ ಬ್ಯಾಗನ್ನು ಹಾರಿಸುತ್ತಾರೆ. ಇಂತಹ ಅಪರಾಧಗಳನ್ನು ತಡೆಗಟ್ಟಲು ತೀರಾ ಸುಲಭ ಉಪಾಯವಿದೆ. ಬ್ಯಾಂಕಿಗೆ ಹಣ ಕಟ್ಟಲು ಅಥವಾ ಹಣ ತರಲು ಹೋಗುವಾಗ ನಮ್ಮದೇ ಆದ ವಾಹನದಲ್ಲೋ ಅಥವಾ ಆಟೋರಿಕ್ಷಾದಲ್ಲೋ ಹೋಗುವುದು ಉತ್ತಮ. 8-10ರೂ. ಆಟೋರಿಕ್ಷಾ ಚಾರ್ಜು ಉಳಿಸಲು ಹೋಗಿ ಲಕ್ಷಾನುಗಟ್ಟಲೆ ಹಣ ಕಳೆದುಕೊಳ್ಳುವುದು

ಮೂರ್ಖತನ. ಹೆಣ್ಣು ಮಕ್ಕಳು ರಸ್ತೆಯಲ್ಲಿ ಓಡಾಡುವಾಗ ಕೆಲವು ವೇಳೆ ಕಳ್ಳರು ನಮ್ಮ ಕೈಚೀಲವನ್ನು ಅಪಹರಿಸುವ ಸಾಧ್ಯತೆ ಇರುವುದರಿಂದ ಕೈಚೀಲವನ್ನು ಆದಷ್ಟು ಮಟ್ಟಿಗೆ ದೇಹಕ್ಕೆ ಹತ್ತಿರ ಇಟ್ಟುಕೊಳ್ಳುವುದು ಸೂಕ್ತ. ಕಳ್ಳರು ನಮ್ಮ ಚಲನವಲನಗಳ ಮೇಲೆ ನಿಗಾ ಇಡುವುದರಿಂದ ಪ್ರತಿ ದಿವಸವೂ ದಿನಚರಿಯಂತೆ ನಿಗದಿತ ವೇಳೆಗೆ ಬ್ಯಾಂಕಿಗೆ ಹೋಗಿ ಬರುವುದನ್ನು ಮಾಡಬಾರದು.

ವೇಳೆಯನ್ನು ಬದಲಾಯಿಸುವುದಲ್ಲದೇ ನಾವು ಹೋಗಿ ಬರುವ ಹಾದಿಯನ್ನು ಕೂಡ ಆಗಿಂದಾಗ್ಗೆ ಬದಲಾಯಿಸುತ್ತಾ ಇರಬೇಕು. ಪ್ರತಿ ದಿವಸವೂ ಒಂದೇ ಹಾದಿಯಲ್ಲಿ ನಿಗದಿತ ವೇಳೆಯಲ್ಲಿ ಬ್ಯಾಂಕಿಗೆ ಹೋದರೆ ನಮ್ಮ ಬಳಿ ಹಣ ಇರುವುದು ಕಳ್ಳನಿಗೆ ಖಾತ್ರಿಯಾಗುತ್ತದೆ. ಒಂದು ವೇಳೆ ನಡೆದುಕೊಂಡೇ ಬರಬೇಕಾದಲ್ಲಿ ಕೈಯಲ್ಲಿನ ಬ್ರೀಫ್ ಕೇಸನ್ನು ಅಥವಾ ಬ್ಯಾಗನ್ನು ಚೈನ್ ಮೂಲಕ ಕೈಗೆ ಕಟ್ಟಿಕೊಳ್ಳಬೇಕು. ಇತ್ತೀಚಿನ ದಿನಗಳಲ್ಲಿ ಬ್ಯಾಂಕಿನ ಹಣ ವ್ಯವಹಾರಕ್ಕೆಂದೇ ಹೊಸ ರೀತಿಯ ಬ್ರೀಫ್‌ಕೇಸ್ ಬಂದಿದೆ ಅದನ್ನು ಯಾರಾದರೂ ಕಳ್ಳರು ಕಸಿದುಕೊಂಡ ಕೂಡಲೇ ಅದರ ಒಳಗೆ ಇರುವ ಸೈರನ್ ಜೋರಾಗಿ ಅರಚುತ್ತದೆ. ಹೀಗಾಗಿ ಅದನ್ನು ಅಪಹರಿಸಿದ ಕಳ್ಳ ಸುಲಭವಾಗಿ ಸಿಕ್ಕಿ ಹಾಕಿಕೊಳ್ಳುತ್ತಾನೆ. ಇಂತಹ ಬ್ರೀಫ್‌ಕೇಸ್‌ನ ಬೆಲೆ ಜಾಸ್ತಿ ಇಲ್ಲ

ನಾವು ಪ್ರಯಾಣ ಮಾಡುವಾಗ ಕಿಸೆಗಳ್ಳತನಗಳು ಆಗುವುದು ಬಹಳ ಸಾಮಾನ್ಯ. ಕಿಸೆಗಳ್ಳತನ ಸಿನಿಮಾ ಮಂದಿರ, ರೈಲು ಹಾಗೂ ಬಸ್ ನಿಲ್ದಾಣ ಇತ್ಯಾದಿ ನೂಕುನುಗ್ಗಲು ಇರುವ ಜಾಗಗಳಲ್ಲಿ ಆಗುತ್ತವೆ. ಇದನ್ನು ತಪ್ಪಿಸುವುದು ಸುಲಭ. ಆದಷ್ಟು ಮಟ್ಟಿಗೆ ಹಣವನ್ನು ಒಳಜೇಬುಗಳಲ್ಲಿ ಇಟ್ಟುಕೊಳ್ಳುವುದು ಸೂಕ್ತ. ಇತ್ತೀಚಿನ ದಿನಗಳಲ್ಲಿ ಕ್ರೆಡಿಟ್ ಕಾರ್ಡುಗಳು ಬಂದಿರುವುದರಿಂದ ಆದಷ್ಟು ಮಟ್ಟಿಗೆ ನಗದನ್ನು ಉಪಯೋಗಿಸದೇ ಕಾರ್ಡ್‌ಗಳನ್ನು ಉಪಯೋಗಿಸುವುದು ಕ್ಷೇಮ.

ರಸ್ತೆಗಳಲ್ಲಿ ನಾವು ಅನುಭವಿಸುವ ಇನ್ನೊಂದು ರೀತಿಯ ಅಪರಾಧ ಜಬರಿ ಕಳವು. ಅಂದರೆ ರಾಬರಿ. ಎಷ್ಟೋ ಬಾರಿ ರಸ್ತೆಯಲ್ಲಿ ನಾವು ನಡೆದುಕೊಂಡು ಹೋಗುತ್ತಿರುವಾಗ ಹಠಾತ್ತಾಗಿ ಬಂದ ಅಪರಿಚಿತ ಆಯುಧಗಳನ್ನು ತೋರಿಸಿ ನಮ್ಮನ್ನು ಹೆದರಿಸಿ ಮೈಮೇಲೆ ಇರುವ ಬೆಲೆಬಾಳುವ ವಸ್ತುಗಳನ್ನು ಬಲವಂತವಾಗಿ ಪಡೆಯುತ್ತಾನೆ. ಈ ರೀತಿ ಬಲವಂತದ ಕಳವಿಗೆ ಜಬರಿ ಕಳವು ಎನ್ನುತ್ತಾರೆ. ಇಂತಹವರನ್ನು ತಪ್ಪಿಸಬೇಕಾದರೆ ಆದಷ್ಟು ಮಟ್ಟಿಗೆ ಮೈಮೇಲೆ ಬೆಲೆಬಾಳುವ ವಸ್ತುಗಳನ್ನು ಇಟ್ಟುಕೊಳ್ಳಬಾರದು. ಜನರು ಕಡಿಮೆ ಇರುವ ಜಾಗದಲ್ಲಿ ಒಬ್ಬಂಟಿಗರಾಗಿ ಓಡಾಡಬಾರದು. ಸಾಧ್ಯವಾದರೆ ಒಂದು ವಿಸಲ್ (ಸಿಳ್ಳು) ಇಟ್ಟುಕೊಂಡಿರುವುದು ಸೂಕ್ತ. ವಿಸಲ್ ಊದಿ ಬೇರೆ ಜನರ ಗಮನ ನಮ್ಮತ್ತ ಸೆಳೆಯಲು ಪ್ರಯತ್ನಿಸಬಹುದು. ಈಗ ಪೆಪ್ಪರ್ ಸ್ಪ್ರೇಯಂತಹ ಸ್ಪ್ರೇಗಳು ಲಭ್ಯವಿವೆ. ಇದನ್ನು ಬಳಸಿ ಜಬರಿ ಕಳವು ಮಾಡುವವರನ್ನು ಅಧೀನರನ್ನಾಗಿ ಮಾಡಬಹುದು. ಇದಲ್ಲದೇ ಈ ಒಂದೆ ರೀತಿಯದ

ಟೆಲಿಫೋನ್ ಪ್ರಯಾಣಗಳು ಹಾಗೂ ಮುಂಜಾಗ್ರತೆ ಉಪಯೋಗವನ್ನು ಮಾಡಬಹುದು. ಆದರೆ ಇವನ್ನು ಮಾಡಬೇಕಾದರೆ ನಾವು ಧೈರ್ಯ ಕಳೆಯಬಾರದು.

ರಸ್ತೆಯಲ್ಲಿ ಓಡಾಡುವಾಗ ಯಾವಾಗಲೂ ನಾವು ಎಚ್ಚರದಲ್ಲಿ ಇರಬೇಕು. ಹೆಣ್ಣು ಮಕ್ಕಳನ್ನು ರಸ್ತೆಯಲ್ಲಿ ಒಬ್ಬರೇ ಓಡಾಡುವಾಗ ಅವರನ್ನು ಚುಡಾಯಿಸುವಂತಹ ಅಪರಾಧ ಆಗುವುದೇ ಅಲ್ಲದೆ ಅವರ ಮೇಲೆ ಹಲ್ಲೆ ನಡೆಯಬಹುದು. ಕೆಲವು ಜಾಗಗಳಲ್ಲಿ ಹೆಣ್ಣು ಮಕ್ಕಳ ಮುಖದ ಮೇಲೆ ಆಸಿಡ್ ಹಾಕಿರುವ ಪ್ರಕರಣಗಳೂ ನಡೆದಿವೆ.

ರಸ್ತೆಯಲ್ಲಿ ಆಗುವಂತಹ ಇಂತಹ ಅಪರಾಧಗಳನ್ನು ಮುಂಜಾಗ್ರತಾ ಕ್ರಮಗಳಿಂದ ಖಂಡಿತ ತಪ್ಪಿಸಬಹುದು.

# 27

# ಪ್ರಯಾಣದಲ್ಲಿ ಮೈ ಮರೆತರೆ ಅನಾಹುತ ತಪ್ಪಿದ್ದಲ್ಲ

ಹಲವು ಬಾರಿ ನಾವು ಪ್ರಯಾಣ ಮಾಡುವಾಗ ನಾನಾ ರೀತಿಯ ತೊಂದರೆಗಳಿಗೆ ಸಿಲುಕಿಕೊಂಡು ಪ್ರಯಾಣ 'ಪ್ರಯಾಸ'ವಾಗುತ್ತದೆ. ಪ್ರವಾಸ ಸಮಯದಲ್ಲಿ ಆಗುವಂತಹ ಅಪರಾಧಗಳು ಮತ್ತು ಅವುಗಳಿಂದ ಹೇಗೆ ತಪ್ಪಿಸಿಕೊಳ್ಳಬಹುದು ಎಂದು ಸ್ಥೂಲವಾಗಿ ವಿವರಿಸುತ್ತೇನೆ.

ಬಸ್ಸಿನಲ್ಲೇ ಹೋಗಲಿ, ರೈಲಿನಲ್ಲೇ ಹೋಗಲಿ ಎಷ್ಟೋ ಬಾರಿ ನಾವು ನಮ್ಮ ಸೀಟುಗಳನ್ನು ಮುಂಗಡವಾಗಿ ಕಾದಿರಿಸುವುದಿಲ್ಲ. ಕೂಡಲೇ ಪ್ರಯಾಣಿಸಲು ಟಿಕೇಟ್ ಖರೀದಿಸಲು ರೈಲು ನಿಲ್ದಾಣಕ್ಕೆ, ಬಸ್ಸು ನಿಲ್ದಾಣಕ್ಕೆ ಹೋದಾಗ ಹಲವಾರು ಜನ ಮಧ್ಯವರ್ತಿಗಳು ನಮ್ಮನ್ನು ಮುತ್ತಿಕೊಂಡು ತಾವು ಟಿಕೇಟ್‌ನ್ನು ಕೊಡಿಸುತ್ತೇವೆ ಎಂದು ಮುಂದೆ ಬರುತ್ತಾರೆ. ಕೌಂಟರಿಗೆ ಹೋಗಿ ಟಿಕೇಟ್ ಲಭ್ಯತೆ ವಿಚಾರಿಸಲೂ ಕೂಡ ನಮಗೆ ಆಸ್ಪದವನ್ನು ನೀಡುವುದಿಲ್ಲ. ಎಷ್ಟೋ ಬಾರಿ ಅವರ ಮಾತುಗಳಿಗೆ ಮರುಳಾಗಿ ನಾವು ಅವರಿಂದ ಟಿಕೇಟ್‌ನ್ನು ಪಡೆಯುತ್ತೇವೆ. ಹಲವಾರು ಸಂದರ್ಭಗಳಲ್ಲಿ ಈ ರೀತಿ ಪಡೆದ ಟಿಕೇಟುಗಳು ಖೊಟ್ಟಿ ಆಗಿರಬಹುದು ಅಥವಾ ಮರುಬಳಕೆಯಾದಂತಹ ಟಿಕೇಟುಗಳು ಆಗಿರಬಹುದು. ಟಿಕೇಟಿನ ಹಣ ಪಡೆದ ನಂತರ ಆ ಮಧ್ಯವರ್ತಿ ಮಾಯವಾಗುತ್ತಾನೆ. ರೈಲು, ಬಸ್ಸು ಹತ್ತಿದ ನಂತರವೇ ನಾವು ಮೋಸ ಹೋದ ವಿಷಯ ಗೊತ್ತಾಗುತ್ತದೆ.

ಇನ್ನು ಕೆಲವರು ಬೇರೊಬ್ಬರ ಹೆಸರಿನಲ್ಲಿ ಮೊದಲೇ ರೈಲ್ವೆ ಟಿಕೇಟ್ ಖರೀದಿಸಿ ಆ ಟಿಕೇಟ್‌ಗಳನ್ನು ನಮಗೆ ಮಾರುತ್ತಾರೆ. ಅಂದರೆ ನಾವು ಇನ್ನೊಬ್ಬರ ಹೆಸರಿನಲ್ಲಿ ಪ್ರಯಾಣ ಮಾಡಿದಂತೆ ಆಗುತ್ತದೆ. ರೈಲ್ವೆ ಕಾನೂನಿನ ಪ್ರಕಾರ ಬೇರೊಬ್ಬರ ಹೆಸರಿನಲ್ಲಿ ಪ್ರಯಾಣ ಮಾಡುವುದು ಅಪರಾಧ. [illegible] ಮತ್ತೆ ದಂಡ ಕಟ್ಟಬೇಕಾಗುತ್ತದೆ. ಅಲ್ಲದೇ [illegible] ಜೊತೆಗೆ [illegible]

ಪ್ರಯಾಣದ ಟಿಕೇಟುಗಳನ್ನು ಮುಂಗಡವಾಗಿ ಖರೀದಿಸುವುದು ಉತ್ತಮ. ಅದು ಸಾಧ್ಯವಿರದಿದ್ದಲ್ಲಿ ಅಧಿಕೃತವಾಗಿ ಖರೀದಿಸುವುದು ಸೂಕ್ತ. ಇತ್ತೀಚಿನ ದಿನಗಳಲ್ಲಿ ರೈಲ್ವೆ ಇಲಾಖೆ ತತ್ಕಾಲ್ ಎನ್ನುವ ಯೋಜನೆ ರೂಪಿಸಿದೆ. ಇದರ ಅನ್ವಯ ನಾವು ರೈಲ್ವೆ ಇಲಾಖೆಗೆ ಹೆಚ್ಚಿನ ಹಣ ಕೊಟ್ಟು ಅಧಿಕೃತ ಟಿಕೇಟ್‌ನ್ನು ರೈಲು ನಿಲ್ದಾಣದಲ್ಲೇ ಪಡೆದು ಸಂಚರಿಸಬಹುದು.

ರೈಲು ಹಾಗೂ ಬಸ್ಸಿನಲ್ಲಿ ಪ್ರಯಾಣ ಮಾಡುವಾಗ ಹಲವಾರು ರೀತಿಯಲ್ಲಿ ಮೋಸಗಾರರು ನಮಗೆ ಎದುರಾಗುತ್ತಾರೆ. ಬಹಳಷ್ಟು ಜನ ಸಹ ಪ್ರಯಾಣಿಕರಂತೆ ಬರುತ್ತಾರೆ. ಅವರು ತಮ್ಮ ಪರಿಚಯ ಮಾಡಿಕೊಂಡು ಕೆಲವು ಸಮಯದ ನಂತರ ನಮಗೆ ತಿನ್ನಲು ಖಾದ್ಯ ವಸ್ತುಗಳನ್ನು ಕೊಡುತ್ತಾರೆ. ಇಂತಹ ವಸ್ತುಗಳನ್ನು ದೇವರ ಪ್ರಸಾದ ಎಂದು ಹೇಳಿ ಕೊಡುವುದು ವಾಡಿಕೆ. ಈ ಪ್ರಸಾದದಲ್ಲಿ ಮತ್ತು ಬರಿಸುವ ಔಷಧಿ ಹಾಕಿರುವುದರಿಂದ ಅದನ್ನು ತಿಂದಕೂಡಲೇ ನಾವು ನಿದ್ರಾ ವಶವರಾಗುತ್ತೇವೆ. ಆ ಸಮಯದಲ್ಲಿ ವಂಚಕರು ನಮ್ಮ ಸೂಟ್‌ಕೇಸ್‌ನ್ನೋ ಅಥವಾ ವಸ್ತುಗಳನ್ನೋ ಹಾರಿಸಿಕೊಂಡು ಪಲಾಯನ ಮಾಡುತ್ತಾರೆ.

ಇನ್ನೂ ಕೆಲವು ಬಾರಿ ವಂಚಕರು ನಮ್ಮೊಡನೆ ಗೆಳೆತನ ಬೆಳೆಸಿಕೊಳ್ಳುತ್ತಾರೆ. ನಿಲ್ದಾಣಗಳಲ್ಲಿ ಬಸ್ಸು ಅಥವಾ ರೈಲು ನಿಂತಾಗ ನಾವು ಹೊರಗಡೆ ಹೋಗಬೇಕಾದಲ್ಲಿ ನಮ್ಮ ಸೂಟ್‌ಕೇಸನ್ನು ತಾವು ನೋಡಿಕೊಳ್ಳುವುದಾಗಿ ಭರವಸೆ ನೀಡುತ್ತಾರೆ. ಈ ಭರವಸೆಗೆ ಮಾರುಹೋಗಿ ನಾವು ನಮ್ಮ ವಸ್ತುವನ್ನು ಅಲ್ಲೇ ಬಿಟ್ಟು ಹೋದರೆ ಅವರು ಅದನ್ನ ಕದ್ದು ಪರಾರಿಯಾಗುತ್ತಾರೆ. ಈಚಿನ ದಿನಗಳಲ್ಲಿ ರೈಲು ಪ್ರಯಾಣಿಕರು ಸೀಟಿನ ಕೆಳಗಡೆ ಅಳವಡಿಸುವ ಚೈನಿಗೆ ತಮ್ಮ ಸೂಟ್‌ಕೇಸ್‌ಗಳನ್ನು ಸೇರಿಸಿ ಭದ್ರಪಡಿಸುವ ವ್ಯವಸ್ಥೆಯನ್ನು ಮಾಡಲಾಗಿದೆ. ತಮ್ಮ ಜಾಗವನ್ನು ಬಿಟ್ಟು ಹೊರಗೆ ಹೋಗುವಾಗ ಪ್ರಯಾಣಿಕರು ತಮ್ಮ ವಸ್ತುಗಳನ್ನು ಈ ಮೂಲಕ ಭದ್ರಪಡಿಸುವುದು ಉತ್ತಮ.

ಭಿಕ್ಷುಕರ ವೇಷದಲ್ಲಿ ಹಾಗೂ ಬೂಟ್‌ಪಾಲಿಷ್ ಮಾಡುವವರ ವೇಷದಲ್ಲಿ ಅಪರಾಧಿಗಳು ರೈಲ್ವೆ ಡಬ್ಬಿಗೆ ಬರಬಹುದು. ಇಂತಹವರ ವಿಷಯದಲ್ಲಿ ಬಹಳ ಎಚ್ಚರದಿಂದಿರಬೇಕು. ರೈಲ್ವೆ ಹಾಗೂ ಬಸ್ಸು ನಿಲ್ದಾಣಗಳು ಜೇಬುಗಳ್ಳರಿಗೆ ಸ್ವರ್ಗ. ಹೀಗಾಗಿ ನಾವು ಪ್ರಯಾಣ ಮಾಡುವಾಗ ಹೆಚ್ಚಿನ ಮೊತ್ತದ ಹಣ ನಮ್ಮ ಬಳಿ ಇಟ್ಟುಕೊಳ್ಳಬಾರದು. ದೂರದ ಊರುಗಳಿಗೆ ಪ್ರಯಾಣ ಮಾಡುವ ಸಮಯದಲ್ಲಿ ಟ್ರಾವೆಲರ್ಸ್ ಚೆಕ್‌ಗಳನ್ನು ಖರೀದಿಸಿ ನಮ್ಮ ಜೊತೆ ಇಟ್ಟುಕೊಳ್ಳುವುದು ಸೂಕ್ತ. ಇತ್ತೀಚಿನ ದಿನಗಳಲ್ಲಿ ಕ್ರೆಡಿಟ್ ಕಾರ್ಡುಗಳ ಬಳಕೆ ವ್ಯಾಪಕವಾಗಿರುವುದರಿಂದ ಪ್ರಯಾಣ ಮಾಡುವಾಗ ಕ್ರೆಡಿಟ್ ಕಾರ್ಡುಗಳನ್ನು ಹೆಚ್ಚು ಹೆಚ್ಚಾಗಿ ಉಪಯೋಗಿಸುವುದು ಉತ್ತಮ.

ರೈಲು ಹಾಗೂ ಬಸ್ಸುಗಳಲ್ಲಿ ಕಿಟಕಿಯ ಪಕ್ಕದಲ್ಲಿ ಕುಳಿತು ನಿದ್ದೆ ಮಾಡುವವರ ಮೈಮೇಲಿನ ಆಭರಣಗಳು ಕಳ್ಳತನಕ್ಕೆ ಗುರಿಯಾಗುತ್ತವೆ. ರಾತ್ರಿ ವೇಳೆ ಗಾಳಿ ಬರಲೆಂದು ಕಿಟಕಿ ತೆಗೆದು ಮಲಗಿದಾಗ ಹಾಗೂ ರೈಲು ನಿಲ್ದಾಣಕ್ಕೆ ಬಂದು ನಿಂತಾಗ ಪ್ಲಾಟ್‌ಫಾರ್ಮ್‌ನಿಂದ ಕಿಟಕಿಯೊಳಗೆ ಕೈ ಹಾಕಿ ಸರ, ಬಳೆ ಇತ್ಯಾದಿ ಒಡವೆಗಳನ್ನು ಸುಲಭವಾಗಿ ಕದಿಯುತ್ತಾರೆ. ಹೀಗಾಗಿ ಪ್ರಯಾಣ ಮಾಡುವಾಗ ವಿಶೇಷವಾಗಿ ಹೆಣ್ಣುಮಕ್ಕಳು ಮೈಮೇಲೆ ಆದಷ್ಟು ಕಡಿಮೆ ಆಭರಣ ಧರಿಸುವುದು ಉತ್ತಮ.

ಪ್ರಯಾಣ ಕಾಲದಲ್ಲಿ ಪ್ರಯಾಣಿಕರು ದರೋಡೆಗೆ ತುತ್ತಾಗುವುದು ಈಗಿನ ಕಾಲದಲ್ಲಿ ಸಾಮಾನ್ಯವಾಗಿ ಬಿಟ್ಟಿದೆ. ರಾತ್ರಿ ವೇಳೆ ನಿರ್ಜನ ಪ್ರದೇಶದಲ್ಲಿ ಬಸ್ಸುಗಳು ಹೋದಾಗ ರಸ್ತೆಯ ಮೇಲೆ ಕಲ್ಲುಗಳನ್ನಿಟ್ಟು, ಬಸ್ಸು ನಿಂತಾಗ ಬಸ್ಸಿನ ಹೆಡ್‌ಲೈಟ್‌ಗಳನ್ನು ಒಡೆದು ದರೋಡೆಕಾರರು ಕಾರ್ಯಪ್ರವೃತ್ತರಾಗಿ

ಬಸ್ಸಿನ ಗಾಜಿನ್ನು ಪಿಸ್ತೂಲುಗಳಿಂದ ಕಲ್ಲುಗಳನ್ನು ಹೊಡೆಯಲು ಪ್ರಾರಂಭಿಸುತ್ತಾರೆ. ಈ ಆಕಸ್ಮಿಕ ಪರಿಸ್ಥಿತಿಯಿಂದಾಗಿ ಪ್ರಯಾಣಿಕರು ಅಧೀರರಾದಾಗ ಕೈಯಲ್ಲಿ ಮಾರಕಾಸ್ತ್ರಗಳನ್ನು ಹಿಡಿದು ದರೋಡೆಕೋರರು ಬಸ್ಸಿನೊಳಗೆ ನುಗ್ಗಿ ಮೊದಲು ಚಾಲಕ ಹಾಗೂ ಕಂಡಕ್ಟರಿಗೆ ಥಳಿಸುತ್ತಾರೆ. ಕಂಡಕ್ಟರ್‌ನ ಬಳಿ ಇರುವ ಹಣದ ಚೀಲ ಕಸಿದುಕೊಳ್ಳುತ್ತಾರೆ. ಅನಂತರ ಪ್ರಯಾಣಿಕರ ಮೇಲೆ ಹಲ್ಲೆ ಮಾಡಿ ಅವರ ಮೈಮೇಲಿರುವ ಆಭರಣ ಹಾಗೂ ಹಣವನ್ನು ಬಲಾತ್ಕಾರವಾಗಿ ಕಸಿದುಕೊಳ್ಳುತ್ತಾರೆ.

ಅದೇ ರೀತಿ ರೈಲಿನಲ್ಲಿ ಹೋದಾಗಲೂ ದರೋಡೆಕೋರರ ಕಾಟ ತಪ್ಪಿದ್ದಲ್ಲ. ರೈಲ್ವೆ ಸುರಕ್ಷಾದಳದ ಹಾಗೂ ರಾಜ್ಯ ರೈಲ್ವೆ ಪೊಲೀಸರ ತಂಡಗಳನ್ನು ರಾತ್ರಿ ವೇಳೆ ರೈಲಿನಲ್ಲಿ ಗಸ್ತು ಮಾಡಲು ನೇಮಿಸಿರುವುದರಿಂದ ಕಳೆದ ಕೆಲವು ವರ್ಷಗಳಿಂದ ನಮ್ಮ ರಾಜ್ಯದಲ್ಲಿ ರೈಲ್ವೆ ಡಕಾಯಿತಿ ಪ್ರಕರಣಗಳು ಕಡಿಮೆಯಾಗಿವೆ. ಇದೂ ಅಲ್ಲದೇ ರಾಜ್ಯಪೊಲೀಸರಿಗೆ ವೈರ್‌ಲೆಸ್ ಉಪಕರಣಗಳನ್ನು ಕೊಟ್ಟಿರುವುದರಿಂದ ಡಕಾಯಿತರ ದಾಳಿ ಕಡಿಮೆಯಾಗಿದೆ. ಆದಷ್ಟು ಮಟ್ಟಿಗೆ ರೈಲು ಹಾಗೂ ಬಸ್‌ನಲ್ಲಿ ದೂರದ ಪ್ರಯಾಣ ಮಾಡುವಾಗ ರಾತ್ರಿ ವೇಳೆ ಪ್ರಯಾಣ ಮಾಡಬಾರದು. ರಾಷ್ಟ್ರೀಯ ಹೆದ್ದಾರಿಗಳಲ್ಲಿ ದರೋಡೆಕೋರರು ದಾಳಿ ಮಾಡದೇ ಇರುವುದರಿಂದ ಹೆಚ್ಚಾಗಿ ರಾಷ್ಟ್ರೀಯ ಹೆದ್ದಾರಿಯಲ್ಲಿ ಹೋಗುವ ಬಸ್ಸುಗಳಲ್ಲಿ ರಾತ್ರಿ ಪ್ರಯಾಣ ಮಾಡಲು ಅಡ್ಡಿಯಿಲ್ಲ. ನಮ್ಮ ರಾಜ್ಯದ ಈಶಾನ್ಯ ಜಿಲ್ಲೆಗಳು, ಎಂದರೆ ಬಳ್ಳಾರಿ, ರಾಯಚೂರು, ಗುಲ್ಬರ್ಗಾ, ಅಲ್ಲದೇ ಬೆಳಗಾವಿ ಜಿಲ್ಲೆಗಳು ರೈಲು ಹಾಗೂ ಬಸ್ಸು ದರೋಡೆಗೆ ಪದೆ ಪದೇ ತುತ್ತಾಗುವಂತಹ ಜಿಲ್ಲೆಗಳಾಗಿವೆ.

ಪ್ರಯಾಣ ಮಾಡುವವರು ತಮ್ಮ ವಸ್ತುಗಳನ್ನು ಇನ್ಶೂರೆನ್ಸ್ ಮಾಡಿಸಬೇಕು. ಪ್ರಯಾಣ ಕಾಲದಲ್ಲಿ ಎದುರಾಗುವ ಮತ್ತೊಂದು ರೀತಿಯ ಅಪರಾಧ ಎಂದರೆ ಅಪಘಾತಗಳು. ಅಪಘಾತಗಳಿಗೆ ತುತ್ತಾದಾಗ ನಾವು ಏನೂ ಮಾಡಲು ಸಾಧ್ಯವಿಲ್ಲದಿದ್ದರೂ ಒಂದು ವೇಳೆ ಗಾಯಾಳುಗಳಾದರೆ ಅಥವಾ ಮರಣ ಹೊಂದಿದರೆ ನಮ್ಮ ಗುರುತು ಬೇರೆಯವರಿಗೆ ದೊರೆಯಬೇಕಾದರೆ ನಮ್ಮ ಬಳಿ ಯಾವುದಾದರೂ ಗುರುತಿನ ಚೀಟಿಯಂತಹ ವಸ್ತುವು ಇರಬೇಕು. ಅದರಲ್ಲಿ ನಮ್ಮ ಹೆಸರು, ರಕ್ತದ ಗುಂಪು, ದೂರವಾಣಿ ನಂ. ಇತ್ಯಾದಿಗಳನ್ನು ಬರೆದಿರಬೇಕು.

ಅಪಘಾತದ ಸಮಯದಲ್ಲಿ ಇವು ತುಂಬಾ ಸಹಾಯಕ್ಕೆ ಬರುತ್ತವೆ ಮತ್ತು ಅದರೊಡನೆ ನಮ್ಮ ಆರೋಗ್ಯದ ವಿವರಗಳು ಅಂದರೆ ಬಿ.ಪಿ. ಇದೆಯೇ, ಡಯಾಬಿಟಿಸ್ ಇದೆಯೇ ಎಂಬ ಇತರ ವಿವರಗಳನ್ನು ಬರೆದಿದ್ದರೆ ಉತ್ತಮ.

ಬೇರೆ ಊರಿಗೆ ಹೋದಾಗ ಅಲ್ಲಿ ಹೋಟೆಲ್‌ಗಳಲ್ಲಿ ಇಳಿದುಕೊಳ್ಳಬೇಕಾದ ಅನಿವಾರ್ಯತೆ ಬಂದಾಗ ಮೊದಲೇ ಹೋಟೆಲ್ ಕೋಣೆಗಳನ್ನು ಕಾಯ್ದಿರಿಸುವುದು ಉಚಿತ. ರೈಲ್ವೆ ಹಾಗೂ ಬಸ್ ನಿಲ್ದಾಣಗಳಲ್ಲಿ ಹೋಟೆಲ್‌ಗಳ ರೂಮು ಕೊಡಿಸುತ್ತೇವೆ ಎಂದು ಮುಗಿಬೀಳುವ ಜನರಿಂದ ದೂರ ಇರುವುದು ಲೇಸು. ಹೋಟೆಲ್‌ನಲ್ಲಿ ರೂಮುಗಳನ್ನು ಪಡೆದಾಗ ನಮ್ಮ ಬಳಿ ಇರುವ ಅಮೂಲ್ಯ ವಸ್ತುಗಳನ್ನು ಹೋಟೆಲ್‌ನ ಲಾಕರ್‌ಗಳಲ್ಲಿ ಇಡುವುದು ಸೂಕ್ತ. ಆದಷ್ಟು ಮಟ್ಟಿಗೆ ಹೋಟೆಲ್‌ನ ಹೊರಗೆ ಹೋಗುವಾಗ ಬೆಲೆಬಾಳುವ ವಸ್ತುಗಳನ್ನು ರೂಮಿನಲ್ಲಿ ಇಡಬಾರದು.

ಪ್ರವಾಸ ಮಾಡುವಾಗ ಮೇಲೆ ಹೇಳಿದಂತಹ ಕನಿಷ್ಠ ಮುನ್ನೆಚ್ಚರಿಕೆ ಕ್ರಮಗಳನ್ನು ಅನುಸರಿಸಿದರೆ ನಮ್ಮ ಪ್ರವಾಸ ಸುಖವಾಗಿಯೂ ಉಲ್ಲಾಸಕರ ಅನುಭವ ತರುತ್ತದೆ.

# 28

## ಮನೆ ಬಾಗಿಲು ತೆರೆಯುವ ಮುನ್ನ ...

ಇತ್ತೀಚಿನ ದಿನಗಳಲ್ಲಿ ರಾಷ್ಟ್ರದ ವಿವಿಧ ಭಾಗಗಳಲ್ಲಿ ಹಿರಿಯ ನಾಗರಿಕರು ಪದೇ ಪದೇ ಅಪರಾಧಿಗಳ ಆಕ್ರಮಣಕ್ಕೆ ತುತ್ತಾಗುತ್ತಿದ್ದಾರೆ. ಬಹಳಷ್ಟು ಜನ ವಂಚನೆ, ಕಳ್ಳತನ, ದರೋಡೆ ಮುಂತಾದ ಅಪರಾಧಗಳಿಗೆ ಗುರಿಯಾಗುತ್ತಿದ್ದರೆ ಹಲವಾರು ಹಿರಿಯ ನಾಗರಿಕರು ಕೊಲೆ ಹಾಗೂ ಅತ್ಯಾಚಾರದಂತಹ ಘೋರ ಅಪರಾಧಗಳಿಗೂ ತುತ್ತಾಗುತ್ತಿದ್ದಾರೆ.

ಬಾಲಕ-ಬಾಲಕಿಯರು ಹಾಗೂ ಮಹಿಳೆಯರ ಜತೆಗೆ ಹಿರಿಯ ನಾಗರಿಕರನ್ನು ದುರ್ಬಲ ವರ್ಗದವರು ಎಂದೇ ಗುರುತಿಸಲಾಗುತ್ತಿದೆ. ತಮ್ಮ ಆಕ್ರಮಣವನ್ನು ಸಮರ್ಪಕವಾಗಿ ಎದುರಿಸಲು ಸಾಧ್ಯವಿಲ್ಲದ ಈ ವರ್ಗದ ಮೇಲೆ ಅಪರಾಧಿಗಳು ಸದಾ ಕಣ್ಣಿಟ್ಟಿರುತ್ತಾರೆ. ಇತ್ತೀಚಿನ ದಿನಗಳಲ್ಲಿ ಕುಟುಂಬದ ಸದಸ್ಯರ ಸಂಖ್ಯೆ ಕಡಿಮೆಯಾಗುತ್ತಾ ಬಂದು, ಹಿರಿಯ ದಂಪತಿಗಳು ತಾವಿಬ್ಬರೇ ಜೀವನ ಮಾಡುವಂತಹ ಸಂದರ್ಭಗಳು ಹೆಚ್ಚಾಗುತ್ತಿವೆ. ಮಕ್ಕಳು, ಮೊಮ್ಮಕ್ಕಳು ಹಾಗೂ ಹತ್ತಿರದ ಕುಟುಂಬ ವರ್ಗದವರು ದೂರದಲ್ಲಿ ವಾಸ ಮಾಡುತ್ತಿರುವುದರಿಂದ ಹಿರಿಯ ನಾಗರಿಕರು ಸ್ವಾವಲಂಬಿಗಳಾಗಿ ಜೀವನ ಸಾಗಿಸುತ್ತಿರುವುದು ಅಪರಾಧಿಗಳಿಗೆ ಅನುಕೂಲ ವಾತಾವರಣ ಸೃಷ್ಟಿಸಿದೆ.

ಹಿರಿಯ ನಾಗರಿಕರ ಮೇಲೆ ಆಗುತ್ತಿರುವ ಅಪರಾಧಗಳು ಗಣನೀಯವಾಗಿ ಹೆಚ್ಚಾಗುತ್ತಿರುವ ಹಿನ್ನಲೆಯಲ್ಲಿ ಹಿರಿಯ ನಾಗರಿಕರು ತಮ್ಮನ್ನು ತಾವು ಸಮರ್ಪಕವಾಗಿ ರಕ್ಷಣೆ ಮಾಡಿಕೊಳ್ಳಬೇಕಾದ ಅನಿವಾರ್ಯತೆ ಕಂಡು ಬಂದಿದೆ. ಯಾವುದೇ ರಕ್ಷಣಾ

ವಿಧಿಯಾದರೂ ಅದರ ಮುಖ್ಯ ಅಂಶ 'ಆಕ್ಸೆಸ್ ಕಂಟ್ರೋಲ್' ಅಂದರೆ ದರೋಡೆಕೋರರು ತಮ್ಮ ಹತ್ತಿರ ಸುಲಭವಾಗಿ ಬಾರದಿರುವಂತೆ ಮಾಡಿಕೊಳ್ಳುವ ವ್ಯವಸ್ಥೆ. ಇದಕ್ಕೆ ಹಿರಿಯರು ಆದ್ಯತೆ ನೀಡಬೇಕು. ಮೊಟ್ಟಮೊದಲಿಗೆ ಮನೆಯಲ್ಲಿನ ರಕ್ಷಣೆ ಬಗ್ಗೆ ಹೆಚ್ಚಿನ ಗಮನ ನೀಡಬೇಕು. ಮನೆಗಳಿಗೆ ಅತ್ಯುತ್ತಮ ಭದ್ರತಾ ವ್ಯವಸ್ಥೆ ಅಂದರೆ ಭದ್ರವಾದ ಮುಂಬಾಗಿಲು ಹಾಗೂ ಹಿಂಬಾಗಿಲು ಹಾಗೂ ಕಿಟಕಿಗಳ ವ್ಯವಸ್ಥೆ ಇರಬೇಕು. ಸಾಧ್ಯವಾದರೆ ಮನೆಯ ಹೊರಗಡೆ ಕಾವಲುಗಾರನ ವ್ಯವಸ್ಥೆ ಇರಬೇಕು. ಇಲ್ಲವಾದಲ್ಲಿ ಮನೆ ಕಾಯುವಂತಹ ನಾಯಿಯ ವ್ಯವಸ್ಥೆಯನ್ನಾದರೂ ಇಟ್ಟುಕೊಳ್ಳಬಹುದು. ಮನೆಯ ಮುಂದೆ ಕಾವಲುಗಾರನಾಗಲೀ ಅಥವಾ ನಾಯಿಯಾಗಲೀ ಇದ್ದಾರೆಂದರೆ ಅಪರಾಧಿಗಳು ಮನೆಯೊಳಗೆ ಪ್ರವೇಶಿಸಲು ಭಯಬೀಳುತ್ತಾರೆ. ಅಪಾರ್ಟ್‌ಮೆಂಟ್‌ಗಳಲ್ಲಿ ಕಾವಲುಗಾರನ ವ್ಯವಸ್ಥೆ ಇದ್ದರೂ ಮನೆ ಬಾಗಿಲನ್ನು ಅಪರಿಚತರಿಗೆ ತೆರೆಯುವಾಗ ಹುಷಾರಾಗಿರಬೇಕು.

ಹಲವಾರು ಅಪರಾಧಿಗಳು ಮನೆಯೊಳಗೆ ಪ್ರವೇಶ ಮಾಡಲು ವಿಧವಿಧವಾದ ಉಪಾಯಗಳನ್ನು ಅನುಸರಿಸುತ್ತಾರೆ. ಇದರಲ್ಲಿ ಮುಖ್ಯವಾದದ್ದು. ಕೊರಿಯರ್ ಎಂದು ಹೇಳಿಕೊಂಡು ಬರುವುದು, ಇಲ್ಲವೇ ಪೋಸ್ಟ್‌ಮ್ಯಾನ್, ಟೆಲಿಫೋನ್ ಕಂಪನಿಯವ ವಿದ್ಯುಚ್ಛಕ್ತಿ ಲೈನ್‌ಮ್ಯಾನ್, ಅಥವಾ ನೀರಿನ ಮೀಟರ್ ಓದುವವನು ಅಥವಾ ಟಿವಿ ರಿಪೇರಿ ಮಾಡುವವನು ಇತ್ಯಾದಿ ಸಬೂಬುಗಳನ್ನು ಹೇಳಿ ಜನ ಬರುತ್ತಾರೆ. ಸಾಮಾನ್ಯವಾಗಿ ಇಂತಹ ಜನರಿಗೆ ಅವರವರ ಸಂಸ್ಥೆಗಳು ಪರಿಚಯ ಪತ್ರಗಳನ್ನು ಕೊಟ್ಟಿರುತ್ತಾರೆ. ಇಂತಹ ಪತ್ರಗಳನ್ನು ತಪಾಸಣೆ ಮಾಡಿ ಅವರನ್ನು ಮನೆಯೊಳಗೆ ಬಿಡುವುದು ಉಚಿತ. ಕೆಲವರು ಖೊಟ್ಟಿ ಪತ್ರಗಳನ್ನು ಉಪಯೋಗಿಸುವ ಸಂದರ್ಭಗಳೂ ಇವೆ. ಇದರ ಬಗ್ಗೆಯೂ ಎಚ್ಚರ ಅಗತ್ಯ. 'ಬಾಯಾರಿದೆ, ನೀರು ಕೊಡಿ' ಎಂದು ಮನೆಯೊಳಗೆ ಬಂದು ನೀರು ತರಲು ಹೋಗುವ ವೃದ್ಧರಿಗೆ ಹಿಂದಿನಿಂದ ಬಂದು ಹೊಡೆದಂತಹ ಘಟನೆಗಳು ನಡೆದಿವೆ. ಈ ಬಗ್ಗೆಯೂ ಎಚ್ಚರದಿಂದಿರಬೇಕು. ಮನೆಬಾಗಿಲಿಗೆ ಬರುವ ಸೇಲ್ಸ್‌ಮನ್‌ಗಳ ಬಗ್ಗೆ ಹೆಚ್ಚಿನ ಎಚ್ಚರ ಅಗತ್ಯ.

ಯಾರಿಗೇ ಆಗಲೀ ಬಾಗಿಲು ತೆರೆಯುವ ಮೊದಲು ಬಾಗಿಲ ಅಥವಾ ಕಿಟಕಿಯಿಂದ ಹೊರಗಡೆ ಯಾರು ಬಂದಿದ್ದಾರೆ ಎನ್ನುವುದನ್ನು ಪರಿಶೀಲಿಸಬೇಕು. ಪ್ರತಿಬಾಗಿಲಿಗೂ ಮ್ಯಾಜಿಕ್ ಐ ರಂಧ್ರವನ್ನು ಹಾಕಿಸಬಹುದು. ಇಲ್ಲವೇ ಬಾಗಿಲಿನ ಬಳಿಯಲ್ಲಿಯೇ ಕಿಟಕಿಯೊಂದನ್ನು ಅಳವಡಿಸಿ, ಕಿಟಕಿ ಮೂಲಕ ಹೊರಗಡೆ ಯಾರು ಬಂದಿದ್ದಾರೆ ಎಂದು ಖಾತ್ರಿ ಮಾಡಿಕೊಳ್ಳಬಹುದು. ಇತ್ತೀಚಿನ ದಿನಗಳಲ್ಲಿ ಟೆಲಿಫೋನ್ ಇರುವಂತಹ ಕ್ಯಾಮರಾಗಳು ಮಾರುಕಟ್ಟೆಯಲ್ಲಿ ಬಂದಿವೆ, ಈ ಕ್ಯಾಮರಾ ಬಾಗಿಲ ಮುಂದೆ ಯಾರು ನಿಂತಿದ್ದಾರೆಂದು ತೋರಿಸುತ್ತದೆ. ಆಗಂತುಕರ ಜೊತೆ ಫೋನ್‌ನಲ್ಲಿ ಮಾತನಾಡಿ ಅನಂತರ ಮನೆ ಬಾಗಿಲು ತೆರೆಯಬಹುದು.

ಕೆಲವು ಸಂದರ್ಭಗಳಲ್ಲಿ ಆಗಂತುಕರ ಆಘಾತಕಾರಿ ಸುದ್ದಿಗಳನ್ನು ತಂದು ಬಾಗಿಲು ತೆರೆಯಲು ಹೇಳುತ್ತಾರೆ. ಉದಾಹರಣೆಗೆ ನಿಮ್ಮ ಮಗನಿಗೆ ಹಾರ್ಟ್ ಅಟ್ಯಾಕ್ ಆಗಿದೆ ಆಸ್ಪತ್ರೆಗೆ

ಸೇರಿಸಿದ್ದಾರೆ ಎನ್ನಬಹುದು. ಇಲ್ಲವೇ ನಿಮ್ಮ ಮೊಮ್ಮಗಳಿಗೆ ಆಕ್ಸಿಡೆಂಟ್ ಆಗಿ ಆಸ್ಪತ್ರೆಗೆ ಸೇರಿಸಲಾಗಿದೆ ದಯವಿಟ್ಟು ಬನ್ನಿ ಎಂದು ಹೇಳಬಹುದು. ಇಂತಹ ಸುದ್ದಿಗಳನ್ನು ಆಗಂತುಕರ ಮೂಲಕ ಬಂದಾಗ ಅವುಗಳ ಸತ್ಯಾಸತ್ಯತೆ ಪರೀಕ್ಷಿಸಿಯೇ ಮನೆಬಾಗಿಲು ತೆರೆಯಬೇಕು. ಗಾಬರಿಯಲ್ಲಿ ಆಗಂತುಕರ ಜೊತೆ 'ಆಸ್ಪತ್ರೆ'ಗೆಂದು ಹೊರಟರೆ ನಿಮಗೆ ಅಪಾಯವೇ ಕಾದಿದೆ.

ಕೆಲವು ವ್ಯಕ್ತಿಗಳು ಮನೆಯಲ್ಲಿರುವ ಆಭರಣಗಳನ್ನು ಪಾಲಿಶ್ ಮಾಡಿಕೊಡುತ್ತೇವೆಂದು ಬರುತ್ತಾರೆ. ಇನ್ನು ಕೆಲವರು ನಿಮ್ಮ ಕೈಗೆ ರೂ. 500 ಅಥವಾ ರೂ. 1000 ರ ನೋಟು ಕೊಟ್ಟು, 'ಇದನ್ನು ನೀವು ಮುಟ್ಟಿ. ಇದರಿಂದ ನಿಮಗೆ ಒಳ್ಳೆಯದಾಗುತ್ತದೆ. ನಿಮ್ಮ ಪೂಜೆ ಕೋಣೆಯಲ್ಲಿ ಇಟ್ಟು ದೇವರನ್ನು ಪೂಜಿಸುತ್ತೇವೆ' ಎಂದು ಹೇಳಿ ಮೋಸ ಮಾಡುತ್ತಾರೆ. ಹೀಗಾಗಿ ಪರಿಚಯ ಇಲ್ಲದ ಯಾವುದೇ ವ್ಯಕ್ತಿಯನ್ನು ಮನೆಯೊಳಗೆ ಸೇರಿಸುವ ಮೊದಲು ಆ ವ್ಯಕ್ತಿಯ ಉದ್ದೇಶವನ್ನು ಖಾತ್ರಿ ಪಡಿಸಿಕೊಳ್ಳುವುದು ಅತಿ ಅವಶ್ಯಕ.

ಕೆಲವು ವ್ಯಕ್ತಿಗಳು ಸೇವಕರ ಸೋಗಿನಲ್ಲಿ ನಿಮ್ಮ ಮನೆಗೆ ಬರುತ್ತಾರೆ. ಇಂತಹ ವ್ಯಕ್ತಿಯ ಪೂರ್ವಚರಿತ್ರೆಯನ್ನು ನೀವು ತಿಳಿಯದೇ ಆತ ಕಡಿಮೆ ಸಂಬಳಕ್ಕೆ ದೊರೆಯುವ ಅಡಿಗೆಯವನಾಗಿಯೋ, ಮನೆಕೆಲಸದವನಾಗಿಯೋ ಅಥವಾ ಕಾರ್ ಚಾಲಕನಾಗಿಯೋ ಬಂದ ಎನ್ನುವ ಸಂತೋಷದಿಂದ ಅವನಿಗೆ ನೌಕರಿ ಕೊಡುತ್ತೀರಿ. 2 / 3 ತಿಂಗಳಾದ ಮೇಲೆ ಆತ ನಿಮ್ಮ ನಂಬಿಕೆಯನ್ನು ಗಳಿಸಿ ಆನಂತರ ನಿಮ್ಮ ಮೇಲೆ ಅಪರಾಧವನ್ನು ಎಸಗುತ್ತಾನೆ. ಇತ್ತೀಚಿನ ದಿನಗಳಲ್ಲಿ ಹಲವಾರು ರಾಜ್ಯಗಳ ಪೊಲೀಸರು ಮನೆ ಕೆಲಸದವರ ಪೂರ್ವ ಚರಿತ್ರೆ ಪರಿಶೀಲಿಸುವ ವ್ಯವಸ್ಥೆ ಮಾಡಿದ್ದಾರೆ. ನಿಮ್ಮ ಮನೆಗೆ ಯಾರನ್ನಾದರೂ ಕೆಲಸಕ್ಕೆ ತೆಗೆದುಕೊಳ್ಳುವ ಮೊದಲು ಆ ವ್ಯಕ್ತಿಯ ಹೆಸರು, ತಂದೆಯ ಹೆಸರು, ಜನ್ಮ ದಿನಾಂಕ, ಆತನ ಕಾಯಂ ವಿಳಾಸವನ್ನು ಒಂದು ಬಿಳಿಯ ಹಾಳೆಯಲ್ಲಿ ಪಡೆಯಬೇಕು. ಆ ವ್ಯಕ್ತಿಯ ಭಾವ ಚಿತ್ರವೊಂದನ್ನು ತೆಗೆಯಬೇಕು. ಆತ ಆಕೆಯ ಹೆಬ್ಬೆರಳು ಗುರುತನ್ನು ಪಡೆದು, ಈ ವಿವರಗಳನ್ನು ಸಮೀಪದ ಪೊಲೀಸ್ ಠಾಣೆಗೆ ಕೊಟ್ಟರೆ ಪೊಲೀಸರು ನೀವು ಸೇವಕರನ್ನಾಗಿ ಇಟ್ಟುಕೊಳ್ಳಲು ಬಯಸುವ ವ್ಯಕ್ತಿಯ ಪೂರ್ವ ಚರಿತ್ರೆ ಪರಿಶೀಲಿಸಿ ಆತ ನಂಬಿಕಸ್ಥನೇ ಅಥವಾ ಇಲ್ಲವೇ ಎಂದು ತಿಳಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಬೇರೆ ಬೇರೆ ರಾಜ್ಯಗಳಿಂದ ನಗರ ಪ್ರದೇಶಗಳಿಗೆ ವಲಸೆ ಹೋಗುವವರ ಸಂಖ್ಯೆ ಜಾಸ್ತಿಯಾಗುತ್ತಿದೆ. ಹೀಗಾಗಿ ಯಾರನ್ನೇ ಕೆಲಸಕ್ಕೆ ತೆಗೆದುಕೊಳ್ಳುವ ಮೊದಲು ಆತನ ಪೂರ್ವಚರಿತ್ರೆಯನ್ನು ಅವಶ್ಯಕವಾಗಿ ತಿಳಿದುಕೊಳ್ಳಬೇಕಾಗಿದೆ. ಈ ರೀತಿಯ ಸೇವೆಗೆ ಪೊಲೀಸ್ ಇಲಾಖೆ ಯಾವ ಶುಲ್ಕವನ್ನೂ ಪಡೆಯುವುದಿಲ್ಲ.

ಹಲವಾರು ಬಾರಿ ಹಿರಿಯ ನಾಗರಿಕರ ಮೇಲಿನ ದಾಳಿಗಳು ಅವರವರ ಸಂಬಂಧಿಕರಿಂದಲೇ ಆಗುತ್ತದೆ. ಮುಂಬೈನಲ್ಲಿ ಕೆಲವು ವರ್ಷಗಳ ಹಿಂದೆ ಬಾಲಕನಾಗಿದ್ದ ತನ್ನ ಅಜ್ಜಿಯನ್ನು ಆಕೆಯ ಮೊಮ್ಮಗ ಕೊಲೆ ಮಾಡಿ ಮನೆಯಲ್ಲಿ ಇರುವ ಹಣವನ್ನು ದೋಚಿದ್ದ. ಈ ರೀತಿ ಘಟನೆಗಳು ಪುನರಾವರ್ತನೆ ಆಗುತ್ತಿವೆ. ಹೀಗಾಗಿ ನಿಮ್ಮ

ಪರಿಚಯದವರೇ ಆದರೂ ಅವರು ಮನೆಗೆ ಬಂದಾಗ ಅವರ ಚಲನವಲನಗಳ ಬಗ್ಗೆ ಅನುಮಾನ ಬಂದಾಗ ನೀವು ಸುಲಭವಾಗಿ ಪೊಲೀಸರಿಗೆ ಸುದ್ದಿ ಮುಟ್ಟಿಸಬಹುದು. ಒಬ್ಬಂಟಿಗರಾಗಿ ವಾಸಿಸುತ್ತಿರುವ ಹಿರಿಯ ಪ್ರಜೆಗಳು ಬಿಎಸ್‌ಎನ್‌ಎಲ್ ಸಂಸ್ಥೆಯನ್ನು ಸಂಪರ್ಕಿಸಿದರೆ ಅವರು ನಿಮ್ಮ ಟೆಲಿಫೋನ್‌ಗೆ ಪೊಲೀಸ್ ಹಾಟ್‌ಲೈನ್ ಸಂಪರ್ಕ ಕಲ್ಪಿಸುತ್ತಾರೆ. ಒಂದು ವೇಳೆ ನಿಮ್ಮ ಮನೆ ಟೆಲಿಫೋನ್ ರಿಸೀವರ್ 20 ಸೆಕೆಂಡುಗಳಿಗಿಂತ ಹೆಚ್ಚಿನ ಕಾಲ ಹುಕ್‌ಆಫ್ ಆಗಿದ್ದು ಯಾರೂ ಮಾತನಾಡದೇ ಹೋದರೆ ಪೊಲೀಸ್ ಕಂಟ್ರೋಲ್ ರೂಂನಲ್ಲಿ ಈ ಬಗ್ಗೆ ಸಂಕೇತ ಹೋಗಿ ನಿಮ್ಮ ಮನೆಗೆ ಕೆಲವೇ ನಿಮಿಷಗಳಲ್ಲಿ ಪೊಲೀಸರು ಧಾವಿಸುತ್ತಾರೆ. ಸದ್ಯಕ್ಕೆ ಈ ಸೌಕರ್ಯ ಬೆಂಗಳೂರು ನಗರದಲ್ಲಿದ್ದು, ಇದು ಉಚಿತ ಸೌಕರ್ಯವಾಗಿದ್ದು ಈ ವ್ಯವಸ್ಥೆ ಉಪಯೋಗಿಸಲು ಬಿಎಸ್‌ಎನ್‌ಎಲ್ ಫೋನ್ ಸಂಪರ್ಕ ಮಾತ್ರ ಅವಶ್ಯ. ಇದೇ ವ್ಯವಸ್ಥೆಯಲ್ಲದ ಬೇರೆ ಬೇರೆ ತರಹದ ಅಲರಾಂ ವ್ಯವಸ್ಥೆಗಳನ್ನು ಕೂಡ ಮಾಡಿಕೊಳ್ಳಬಹುದು. ಮನೆಗೆ ಸೈರನ್ ಅನ್ನು ಅಳವಡಿಸಿ ನೀವು ತೊಂದರೆಗೆ ಈಡಾದಾಗ ಗುಪ್ತವಾಗಿ ಬಟನ್ ಮೂಲಕ ಸೈರನನ್ನು ಚಾಲೂ ಮಾಡಿ ಇತರರಿಗೆ ನೀವು ತೊಂದರೆಯಲ್ಲಿದ್ದೀರಿ ಎಂದು ತಿಳಿಸಬಹುದು.

ಇತ್ತೀಚೆಗಷ್ಟೇ ಪರಿಚಯವಾದ ವ್ಯಕ್ತಿಗಳಿಗೆ ನಿಮ್ಮ ಬಗ್ಗೆ ಹೆಚ್ಚಿನ ಮಾಹಿತಿ ಕೊಡಬೇಡಿ. ವೃದ್ಧೆಯೊಬ್ಬರು ಚೀಟಿ ನಡೆಸುತ್ತಿದ್ದು, ಆ ವ್ಯವಹಾರದಲ್ಲಿ ಭಾಗವಹಿಸುವ ವ್ಯಕ್ತಿ ಒಬ್ಬನಿಗೆ ತಮ್ಮ ಹಣಕಾಸಿನ ವ್ಯವಹಾರಗಳನ್ನು ತಿಳಿಸಿದ್ದರಿಂದ ಆ ವ್ಯಕ್ತಿ ವೃದ್ಧೆಯ ಮನೆಗೆ ಬಂದು ಆಕೆಯ ಕೊಲೆ ಮಾಡಿ ಆಕೆಯ ಹಣವನ್ನು ದೋಚಿದ ನಿದರ್ಶನ ಇನ್ನೂ ಹಸಿರಾಗಿದೆ.

ನೆರೆಹೊರೆಯವರೊಂದಿಗೆ ಉತ್ತಮ ವ್ಯವಹಾರದಲ್ಲಿ ಇದ್ದು ನಿಮ್ಮ ನೆರವಿಗೆ ಅವರು ಬರುವಂತಹ ವ್ಯವಸ್ಥೆ ಮಾಡಿಕೊಳ್ಳುವುದು ಉತ್ತಮ. ಪ್ರತಿದಿನವೂ ಎರಡು ಮೂರು ಸಲ ನೀವು ಸುರಕ್ಷಿತವಾಗಿದ್ದೀರಿ ಎಂದು ನಿಮ್ಮ ಹತ್ತಿರದವರಿಗೆ ತಿಳಿಸುವುದು ಸೂಕ್ತ.

ಸಾಧ್ಯವಿದ್ದಲ್ಲಿ ವೃದ್ಧಾಶ್ರಮಗಳಲ್ಲಿ ವಾಸಿಸುವ ವ್ಯವಸ್ಥೆಯನ್ನು ಮಾಡಿಕೊಳ್ಳಬಹುದು. ಅಂತಹ ಜಾಗಗಳಲ್ಲಿ ಇತರರ ಸಹಾಯ ಸಹಕಾರ ದೊರೆಯುವುದಲ್ಲದೆ ರಕ್ಷಣೆಯೂ ದೊರೆಯುತ್ತದೆ. ಅಲ್ಲದೆ ಬೇರೆ ವೃದ್ಧರ ಕಂಪೆನಿಯೂ ಸಿಗುತ್ತದೆ.

ಒಟ್ಟಿನಲ್ಲಿ ವೃದ್ಧರು ಅಪರಿಚಿತರನ್ನು ನಂಬದೇ ತಮ್ಮ ಭದ್ರತೆಯ ಬಗ್ಗೆ ಮುಂಜಾಗರೂಕತಾ ಕ್ರಮಗಳನ್ನು ತೆಗೆದುಕೊಳ್ಳುವುದು ಅತಿ ಅವಶ್ಯ.

# 29

## ಇಂಟರ್‌ನೆಟ್ ಮೂಲಕ ವಂಚನೆ - ಹೆಚ್ಚಿನ ಎಚ್ಚರಿಕೆ

ನಿವೃತ್ತರಾದ ಹಿರಿಯ ಪೊಲೀಸ್ ಅಧಿಕಾರಿಯೊಬ್ಬರಿಗೆ ಇತ್ತೀಚೆಗೆ ಇ-ಮೇಲ್ ಮೂಲಕ ಸಂದೇಶವೊಂದು ಬಂದಿತ್ತು. ನೈಜೀರಿಯಾದ ಬ್ಯಾಂಕ್ ಒಂದರಿಂದ ನಿಮ್ಮ ಹೆಸರಿಗೆ ಒಂದು ಲಕ್ಷ ಡಾಲರ್‌ಗಳನ್ನು ವರ್ಗಾವಣೆ ಮಾಡಲಾಗುತ್ತಿದೆ. ಈ ಬಗ್ಗೆ ನಿಮಗೆ ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ ಮೂಲಕ ಹಣವನ್ನು ಬಿಡುಗಡೆ ಮಾಡಲಾಗುತ್ತದೆ. ನೀವು ಕೂಡಲೇ ಈ ಸಂದೇಶದಲ್ಲಿ ಹೆಸರಿಸಲಾಗಿರುವ ರಿಸರ್ವ್ ಬ್ಯಾಂಕ್, ಮುಂಬೈನ ಅಧಿಕಾರಿಯನ್ನು ಸಂಪರ್ಕಿಸುವುದು ಎಂದು ಆ ಸಂದೇಶದದಲ್ಲಿ ಹೇಳಲಾಗಿತ್ತು. ಆ ನಿವೃತ್ತ ಪೊಲೀಸ್ ಅಧಿಕಾರಿ ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾದ ಸಿಬ್ಬಂದಿಯೆಂದು ಹೇಳಿಕೊಳ್ಳಲಾದ ವ್ಯಕ್ತಿಯ ನಂಬರ್‌ಗೆ ಫೋನ್ ಮಾಡಿದರು. ಫೋನ್ ಪಡೆದ ಮಹಿಳೆ 'ಹೌದು ನಿಮ್ಮ ಹೆಸರಿನಲ್ಲಿ ಹಣ ಬಂದಿದೆ. ನೀವು ಈ ಹಣವನ್ನು ಪಡೆಯಲು ಒಂದು ಲಕ್ಷ ರೂ.ಗಳನ್ನು ವಹಿವಾಟು ಶುಲ್ಕವೆಂದು ಕೊಡಬೇಕು. ಈ ಶುಲ್ಕವನ್ನು ನನಗೆ ಮುಟ್ಟಿಸಿದ ನಂತರ ನಿಮಗೆ ಹಣವನ್ನು ಬಿಡುಗಡೆ ಮಾಡಲಾಗುತ್ತದೆ. ನಿಮ್ಮ ಬ್ಯಾಂಕ್‌ನ ಅಕೌಂಟ್ ನಂಬರ್‌ಗೆ ಹಣ ಮುಟ್ಟುತ್ತದೆ. ದಯವಿಟ್ಟು ನಿಮ್ಮ ಬ್ಯಾಂಕ್‌ನ ಅಕೌಂಟ್ ನಂ. ಮತ್ತಿತರ ವಿವರಗಳನ್ನು ಕೊಡಿ' ಎಂದಳು. ನಿವೃತ್ತ ಪೊಲೀಸ್ ಅಧಿಕಾರಿ ಆ ಮಹಿಳೆ ತಿಳಿಸಿದ ವಿಳಾಸಕ್ಕೆ ಒಂದು ಲಕ್ಷ ರೂ.ಗಳನ್ನು ರವಾನಿಸಿದರು. ಇದಾದ ಕೆಲವು ಕಾಲಗಳ ನಂತರ ನಿಮ್ಮ ಹಣ ನಮಗೆ ಬಂದು ಮುಟ್ಟಿದೆ. ಆದರೆ ವಿದೇಶಿ ವಿನಿಮಯ ದರಗಳಲ್ಲಿ ಸ್ವಲ್ಪ ವ್ಯತ್ಯಾಸಗಳು ಇರುವುದರಿಂದ ನೀವು ಇನ್ನೂ ಒಂದು ಲಕ್ಷ ರೂ.ಗಳನ್ನು ತುಂಬಬೇಕಾಗುತ್ತದೆ ಎಂದ

ಆ ಮಹಿಳೆ. ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾದ ಲೆಟರ್‌ಹೆಡ್ ಇದ್ದ ಹಲವು ಕಾಗದಪತ್ರಗಳನ್ನು ಇ-ಮೇಲ್ ನಲ್ಲಿ ರವಾನಿಸಿದಳು. ನಿವೃತ್ತ ಅಧಿಕಾರಿ ಇನ್ನೊಂದು ಲಕ್ಷ ರೂ. ಹಣ ಅವಳಿಗೆ ಕಳುಹಿಸಿದರು. ಸುಮಾರು ಎರಡು ವಾರಗಳಾದರೂ ಏನೂ ಆಗದಿದ್ದಾಗ ಅವರು ಮುಂಬೈನ ರಿಸರ್ವ್ ಬ್ಯಾಂಕ್ ಅಧಿಕಾರಿಗಳನ್ನು ಸಂಪರ್ಕಿಸಿದರು. ರಿಸರ್ವ್ ಬ್ಯಾಂಕ್ ಅಧಿಕಾರಿಗಳು ನೀವು ನಿವೃತ್ತ ಪೊಲೀಸ್ ಅಧಿಕಾರಿಯಾಗಿ ಇಷ್ಟು ಸುಲಭವಾಗಿ ಮೋಸ ಹೋಗುತ್ತೀರೆಂದು ನಮಗೆ ಅನಿಸಿರಲಿಲ್ಲ. ರಿಸರ್ವ್ ಬ್ಯಾಂಕ್ ಇಂತಹ ವ್ಯವಹಾರಗಳಲ್ಲಿ ತೊಡಗಿಸಿಕೊಳ್ಳುವುದಿಲ್ಲ. ನಿಮಗೆ ಗೊತ್ತಿಲ್ಲವೇ ಎಂದು ಹೇಳಿ ಪೊಲೀಸ್ ಠಾಣೆಯಲ್ಲಿ ದೂರು ನೀಡಲು ಅವರಿಗೆ ಹೇಳಿದರು. ದೂರೇನೋ ದಾಖಲಾಯಿತು. ಆದರೆ ಆರೋಪಿತರು ನಾಪತ್ತೆ ಆಗಿದ್ದರು. ಪೊಲೀಸ್ ಅಧಿಕಾರಿ ಹಣ ಕಳೆದುಕೊಂಡರು.

ಪೊಲೀಸ್ ಇಲಾಖೆಯಲ್ಲೇ 30 ವರ್ಷಗಳ ಸೇವೆ ಸಲ್ಲಿಸಿದ ಅಧಿಕಾರಿಗಳೇ ಹೀಗೆ ಮೋಸ ಹೋಗುವಾಗ ಬೇರೆಯವರ ಪಾಡೇನು ಎಂದು ಊಹಿಸಲೂ ಅಸಾಧ್ಯ. ಇಂಟರ್‌ನೆಟ್ ಮೂಲಕ ಪ್ರತಿದಿನವೂ ಲಕ್ಷಾನುಲಕ್ಷ ಜನರಿಗೆ ನಿಮಗೆ ಲಾಟರಿ ಬಂದಿದೆ ಅಥವಾ ವಿದೇಶದ ಶ್ರೀಮಂತನೊಬ್ಬ ಅಪಘಾತದಲ್ಲಿ ಸತ್ತಿರುತ್ತಾನೆ. ಅವನಿಗೆ ಯಾರೂ ವಾರಸುದಾರರು ಇಲ್ಲದ ಕಾರಣ ಅವನ ಇಡೀ ಆಸ್ತಿಯನ್ನು ನಿಮಗೆ ವರ್ಗಾಯಿಸಲಾಗುವುದು ಎನ್ನುವಂತಹ ಸಂದೇಶಗಳು ಬರುತ್ತವೆ. ಶೀಘ್ರದಲ್ಲಿ ಕೋಟಿಗಟ್ಟಲೆ ಆಸ್ತಿ ಮಾಡುವ ಆಸೆಯಿಂದ ಸಾರ್ವಜನಿಕರು ಇಂತಹ ಇ-ಮೇಲ್‌ಗಳಿಗೆ ಉತ್ತರಿಸಿದರೆ ಮೋಸಗಾರರು ಮತ್ತೊಂದು ಇ-ಮೇಲ್ ಕಳಿಸಿ ನಿಮ್ಮಿಂದ ಹಣವನ್ನು ಸುಲಿಯುತ್ತಾರೆ. ನಿಮ್ಮ ಬ್ಯಾಂಕ್ ಖಾತೆ ಸಂಖ್ಯೆ, ಬ್ಯಾಂಕ್ ಹೆಸರು, ನಿಮಗೆ ಇಂಟರ್‌ನೆಟ್ ಬ್ಯಾಂಕಿಂಗ್ ಸೌಲಭ್ಯ ಇರುವ ವಿವರಗಳು, ನಿಮ್ಮ ಪಾಸ್‌ವರ್ಡ್ ಇತ್ಯಾದಿ ದಾಖಲೆಗಳನ್ನು ನಿಮ್ಮಿಂದ ಪಡೆದು ನಿಮಗೇ ಮೋಸಗೈಯುತ್ತಾರೆ. ಹಠಾತ್ ಶ್ರೀಮಂತರಾಗುವ ಕನಸುಗಳನ್ನು ಅಮಾಯಕ ಜನ ಎಂದಿನವರೆಗೆ ಬಿಡುವುದಿಲ್ಲವೋ ಅಲ್ಲಿಯವರೆಗೆ ಇಂತಹ ಮೋಸದ ಪ್ರಕರಣಗಳು ಜರುಗುತ್ತಲೇ ಇರುತ್ತವೆ.

ಇತ್ತೀಚಿನ ದಿನಗಳಲ್ಲಿ ಇನ್ನೊಂದು ರೀತಿಯ ಮೋಸ ನಡೆಯುತ್ತಿದೆ. ನೀವು ವ್ಯವಹರಿಸುವ ಬ್ಯಾಂಕ್‌ನಿಂದ ಬಂದಂತಹ ಸಂದೇಶವನ್ನು ಸೃಷ್ಟಿಸಿ ನಿಮ್ಮ ಇಂಟರ್‌ನೆಟ್ ಬ್ಯಾಂಕಿಂಗ್ ವ್ಯವಸ್ಥೆಯನ್ನು ಮತ್ತಷ್ಟು ಸುಭದ್ರಗೊಳಿಸುತ್ತಿದ್ದೇವೆ. ಈ ಕಾರಣಕ್ಕಾಗಿ ನಿಮ್ಮ ಅಕೌಂಟ್ ನಂಬರ್ ಮತ್ತು ಪಾಸ್‌ವರ್ಡ್‌ಗಳನ್ನು ತಿಳಿಸಿ ಎನ್ನುವ ಸಂದೇಶ ಬರುತ್ತದೆ. ನೀವು ಅಕೌಂಟ್ ಹೊಂದಿರುವ ಬ್ಯಾಂಕಿನಿಂದಲೇ ಇಂತಹ ಸಂದೇಶ ಬಂದಿದೆ ಎಂದು ಭಾವಿಸಿ [illegible] ನಿಮ್ಮ ಅಕೌಂಟ್ ನಂಬರ್ ಮತ್ತು ಪಾಸ್‌ವರ್ಡ್‌ಗಳನ್ನು ಇ-ಮೇಲ್ ಕಳಿಸಿದ ವ್ಯಕ್ತಿಗೆ ತಿಳಿಸುತ್ತೀರಿ. ನಿಮ್ಮ ಈ ವೈಯುಕ್ತಿಕ ವಿವರಗಳು ಆ ಅಪರಿಚಿತ ವ್ಯಕ್ತಿಗೆ [illegible] [illegible] ನಿಮ್ಮ ಬ್ಯಾಂಕ್ ಖಾತೆಯಲ್ಲಿರುವ ಹಣವನ್ನು ಬೇರೊಂದು ಖಾತೆಗೆ [illegible]

ಮಾಡಲಾಗಿರುತ್ತದೆ. ಬ್ಯಾಂಕ್ ಗ್ರಾಹಕರು ಅರಿಯಬೇಕಾದ ಅತ್ಯಂತ ಮುಖ್ಯ ಅಂಶವೇನೆಂದರೆ ಯಾವುದೇ ಬ್ಯಾಂಕ್ ತನ್ನ ಗ್ರಾಹಕರ ಇಂಟರ್‌ನೆಟ್ ಬ್ಯಾಂಕಿಂಗ್ ಪಾಸ್‌ವರ್ಡ್ ಅನ್ನು ಕೇಳುವುದೇ ಇಲ್ಲ. ಇಂತಹ ಸಂದೇಶಗಳು ಬಂದಾಗ ನಿಮ್ಮ ಇ-ಮೇಲ್ ಸಂದೇಶದ ಒಂದು ಮೂಲೆಯಲ್ಲಿ full headers ಎನ್ನುವ ಬರವಣಿಗೆಯ ಮೇಲೆ ಮೌಸ್ ಅನ್ನು ಕ್ಲಿಕ್ ಮಾಡಿ ನಿಮಗೆ ಬಂದ ಇ-ಮೇಲ್ ಸಂದೇಶ ಎಲ್ಲಿಂದ ಬಂದಿದೆ ಎಂದು ಸುಲಭವಾಗಿ ತಿಳಿಯಬಹುದು. ಸಾಮಾನ್ಯವಾಗಿ ಈ ಸಂದೇಶಗಳು ವಿದೇಶದಿಂದ ಬರುತ್ತವೆ. Full headers ನೋಡಿ ಸಂದೇಶ ಎಲ್ಲಿಂದ ಬಂದಿದೆ ಎಂದು ತಿಳಿದುಕೊಂಡು ಸಂಬಂಧಪಟ್ಟವರ ಮೇಲೆ ಕ್ರಮ ತೆಗೆದುಕೊಳ್ಳಬಹುದು ಇಲ್ಲವೇ ಈ ಸಂದೇಶಗಳನ್ನು ತಿರಸ್ಕರಿಸಬಹುದು. ಸಾಮಾನ್ಯವಾಗಿ ನಿಮ್ಮ ಪಾಸ್‌ವರ್ಡ್‌ನ್ನು ಪಡೆದು ನಿಮ್ಮ ಬ್ಯಾಂಕ್ ಖಾತೆಯಲ್ಲಿರುವ ಹಣವನ್ನು ಬೇರೊಂದು ಖಾತೆಗೆ ವರ್ಗಾಯಿಸಿದಾಗ ಆ ಬೇರೊಂದು ಖಾತೆಯ ವಿವರಗಳು ಸುಲಭವಾಗಿ ಲಭ್ಯವಾಗುತ್ತದೆ. ಪೋಲೀಸರು ನಿಮ್ಮ ಹಣ ಎಲ್ಲಿಗೆ ಹೋಯಿತು ಎಂದು ಸುಲಭವಾಗಿ ಪತ್ತೆ ಮಾಡಬಹುದು. ಆದರೆ ಮೋಸಗಾರರು ಈ ರೀತಿಯ ಪತ್ತೆಯಿಂದ ತಪ್ಪಿಸಿಕೊಳ್ಳಲು ತಂತ್ರವೊಂದನ್ನು ರೂಪಿಸಿಕೊಂಡಿದ್ದಾರೆ. ಅದೇನೆಂದರೆ ಯಾರೋ ಅಮಾಯಕರ ಸಹಜ ಅಕೌಂಟ್‌ಗಳಿಗೆ ಹಣವನ್ನು ವರ್ಗಾಯಿಸಿ ಅವರಿಂದ ತಮ್ಮ ಖಾತೆಗೆ ಹಣವನ್ನು ಮರು ವರ್ಗಾಯಿಸಿಕೊಳ್ಳುತ್ತಾರೆ. ಇಂತಹ ಒಂದು ಪ್ರಕರಣ ಹೀಗಿದೆ.

ಕರ್ನಾಟಕದ ಒಂದು ನಗರದಲ್ಲಿ ಒಬ್ಬ ದೊಡ್ಡ ಕಾಂಟ್ರಾಕ್ಟರ್ ಬಳಿ ಮೇಸ್ತ್ರಿಯೊಬ್ಬ ಬಂದು ಕೆಲಸಕ್ಕೆ ಸೇರಿಕೊಂಡ. ಆತ ಉತ್ತರಪ್ರದೇಶದಿಂದ ಬಂದಿದ್ದು, ಚೆನ್ನಾಗಿಯೇ ಕೆಲಸ ಮಾಡುತ್ತಿದ್ದ. ಒಂದು ತಿಂಗಳು ಕಳೆದ ನಂತರ ಆತ ಕಾಂಟ್ರಾಕ್ಟರ್‌ನ್ನು ಕಂಡು ನನ್ನ ಹೆಂಡತಿಗೆ ಆಸ್ಪತ್ರೆಗೆ ಸೇರಿಸಲಾಗಿದೆ. ಚಿಕಿತ್ಸೆಗಾಗಿ ಒಂದು ಲಕ್ಷ ರೂ. ಬೇಕಾಗಿದೆ. ದಯವಿಟ್ಟು ಈ ಹಣವನ್ನು ಸಾಲದ ರೂಪದಲ್ಲಿ ಕೊಡಿ. ನಿಮಗೆ ಕೂಡಲೇ ಹಿಂತಿರುಗಿಸುತ್ತೇನೆ ಎಂದ. ಮೇಸ್ತ್ರಿ ಅಪರಿಚಿತನಾದ್ದರಿಂದ ಆ ಕಾಂಟ್ರಾಕ್ಟರ್ ಸಾಲ ಕೊಡಲು ಬರುವುದಿಲ್ಲವೆಂದು ತಪ್ಪಿಸಿಕೊಂಡ. ಎರಡು ದಿನಗಳ ನಂತರ ಅದೇ ಮೇಸ್ತ್ರಿ ಕಾಂಟ್ರಾಕ್ಟರ್ ಬಳಿ ಬಂದು, "ಸರ್ ನೀವು ಸಾಲ ಕೊಡದಿದ್ದರೂ ಪರವಾಗಿಲ್ಲ. ನನ್ನ ಗೆಳೆಯನೊಬ್ಬನು ಈ ಹಣವನ್ನು ಸಾಲ ಕೊಡಲು ಒಪ್ಪಿದ್ದಾನೆ ಅವನು ದೆಹಲಿಯಲ್ಲಿ ಇದ್ದಾನೆ. ನನಗೆ ಅವನು ಹಣವನ್ನು ಕಳಿಸಬೇಕಾದರೆ ನನ್ನ ಬಳಿ ಯಾವುದೇ ಬ್ಯಾಂಕ್ ಅಕೌಂಟ್ ಇಲ್ಲ. ಹೀಗಾಗಿ ನಿಮ್ಮ ಬ್ಯಾಂಕ್ ಅಕೌಂಟ್ ವಿವರಗಳನ್ನು ಕೊಡಿ. ನಿಮ್ಮ ಬ್ಯಾಂಕ್ ಖಾತೆಗೆ ಒಂದು ಲಕ್ಷ ರೂ. ಹಣ ಜಮಾವಣೆ ಆಗುತ್ತದೆ. ಜಮಾ ಆದ ನಂತರ ನೀವು ಹಣವನ್ನು ನಿಮ್ಮ ಖಾತೆಯಿಂದ ತೆಗೆದು ನನಗೆ ನೀಡಿದರೆ ಸಾಕು ಎಂದು ಕೋರಿದ. ಆತನ ಕೋರಿಕೆಗೆ ಕಾಂಟ್ರಾಕ್ಟರ್ ಸುಲಭವಾಗಿ ಒಪ್ಪಿದ. ಮಾರನೇ ದಿನ ಕಾಂಟ್ರಾಕ್ಟರ್ ಅಕೌಂಟ್‌ಗೆ ದೆಹಲಿಯ ಬ್ಯಾಂಕ್ ಒಂದರಿಂದ ಒಂದು ಲಕ್ಷ ರೂ. ಜಮಾ ಆಯಿತು. ಅವರು ಕೂಡಲೇ ಆ ಹಣವನ್ನು ತಮ್ಮ ಖಾತೆಯಿಂದ ತೆಗೆದು ಮೇಸ್ತ್ರಿಗೆ ಕೊಟ್ಟರು. ಹಣ ಪಡೆದ ಮೇಸ್ತ್ರಿ 'ಸರ್ ನಾನು

ಈಗ ನನ್ನ ಹೆಂಡತಿ ಚಿಕಿತ್ಸೆ ಮಾಡಿಸಲು ಊರಿಗೆ ಹೋಗುತ್ತೇನೆ. ರಜಾ ಕೊಡಿ ಎಂದು ಹೇಳಿ" ಹಣವನ್ನು ಪಡೆದು ಅಲ್ಲಿಂದ ಮಾಯವಾದ. ಇದಾದ ಎರಡು ದಿನದ ನಂತರ ಪೊಲೀಸರು ಕಾಂಟ್ರಾಕ್ಟರ್ ಬಳಿ ಬಂದು ನೀನು ದೆಹಲಿಯ ಬ್ಯಾಂಕ್ ಖಾತೆದಾರನೊಬ್ಬನಿಗೆ ಇಂಟರ್‌ನೆಟ್ ಮೂಲಕ ಮೋಸ ಮಾಡಿ ಅವನ ಹಣವನ್ನು ನಿನ್ನ ಖಾತೆಗೆ ಪಡೆದುಕೊಂಡಿದ್ದೀಯ. ನಿನ್ನನ್ನು ಬಂಧಿಸಬೇಕಾಗಿದೆ ಎಂದರು. ಅಮಾಯಕ ಕಾಂಟ್ರಾಕ್ಟರ್ ನಡೆದ ವಿಷಯ ಹೇಳಿದ. ಪೊಲೀಸರು ನೀನು ಈ ವಂಚನೆ ಪ್ರಕರಣದಲ್ಲಿ ಹೇಸರಕತ್ತೆ [mule] ಆಗಿದ್ದೀಯ ಎಂದು ಹೇಳಿ ಅವನಿಂದ ಮೇಸ್ತ್ರಿ ಬಗ್ಗೆ ವಿಚಾರಿಸಿದರು. ಆದರೆ ಈ ಮೇಸ್ತ್ರಿಯ ವಿವರಗಳು ಕಾಂಟ್ರಾಕ್ಟರ್ ಬಳಿ ಇಲ್ಲದೆ ಹೋದ್ದರಿಂದ ಪ್ರಕರಣವು ಪತ್ತೆ ಆಗಲೇ ಇಲ್ಲ.

ಬ್ಯಾಂಕ್‌ಗಳಲ್ಲಿ ಇಂಟರ್‌ನೆಟ್ ಮೂಲಕ ಹಣ ವರ್ಗಾವಣೆ ಮಾಡುವಂತಹ ಖಾತೆಗಳನ್ನು ಹೊಂದಿರುವ ಗ್ರಾಹಕರು ಎಚ್ಚರಿಕೆಯನ್ನು ವಹಿಸಬಹುದಾಗಿದೆ. ಅದೇನೆಂದರೆ ನಿಮ್ಮ ಖಾತೆಯಿಂದ 5000 ರೂ ಗಳಿಗಿಂತ ಹೆಚ್ಚು ಹಣವನ್ನು ತೆಗೆದರೆ ಅಥವಾ ನಿಮ್ಮ ಖಾತೆಗೆ 5000 ರೂಗಳಿಗಿಂತ ಹೆಚ್ಚು ಹಣವನ್ನು ತುಂಬಿದರೆ ನಿಮ್ಮ ಮೊಬೈಲ್ ಫೋನ್ ಮೂಲಕ ಎಸ್‌ಎಂಎಸ್ ಅಲರ್ಟ್‌ಗಳನ್ನು ಪಡೆಯುವ ವಿಧಾನಕ್ಕೆ ನೋಂದಾಯಿಸಬಹುದು. ನಿಮಗೆ ಅರಿವಿಲ್ಲದೇ ನಿಮ್ಮ ಖಾತೆಯಿಂದ ಹಣವನ್ನು ತೆಗೆದರೆ ಅಥವಾ ಹಣವನ್ನು ತುಂಬಿದರೆ ಕೂಡಲೇ ನಿಮಗೆ ಮಾಹಿತಿ ಬಂದು ಒಂದು ವೇಳೆ ಈ ರೀತಿಯ ಚಟುವಟಿಕೆ ಸಂದೇಹಾಸ್ಪದವಾಗಿದ್ದರೆ ನೀವು ಕೂಡಲೇ ನಿಮ್ಮ ಬ್ಯಾಂಕ್‌ನ್ನು ಸಂಪರ್ಕಿಸಿ ಮುಂದೆ ಮೋಸ ಹೋಗದಂತೆ ಎಚ್ಚರಿಕೆ ವಹಿಸಬಹುದು. ಇಲ್ಲದಿದ್ದರೆ ನಿಮ್ಮ ಖಾತೆಯಿಂದ ಹೊರಗಡೆ ಎಷ್ಟು ಹಣ ತೆಗೆಯಬಹುದು ಎನ್ನುವುದರ ಬಗ್ಗೆ ಒಂದು ಮಿತಿಯನ್ನು ಹಾಕಬಹುದು.

ಸಾಮಾನ್ಯವಾಗಿ ಇಂಟರ್‌ನೆಟ್ ಬ್ಯಾಂಕಿಂಗ್ ದುರುಪಯೋಗ ಮಾಡಿಕೊಳ್ಳುವ ವ್ಯಕ್ತಿಗಳು ತಮ್ಮ ಹೆಸರಿನಲ್ಲಿ ಯಾವುದಾದರೊಂದು ಬ್ಯಾಂಕ್‌ನಲ್ಲಿ ಖಾತೆಯೊಂದನ್ನು ತೆರೆದು ಸುಮಾರು 2-3 ತಿಂಗಳುಗಳ ಕಾಲ ಮಾತ್ರ ಆ ಖಾತೆಯನ್ನು ಚಾಲ್ತಿಯಲ್ಲಿಟ್ಟು ಆಮೇಲೆ ಖಾತೆಯನ್ನು ಮುಚ್ಚಿ ಪರಾರಿಯಾಗುತ್ತಾರೆ. ಈ ರೀತಿ ಮಾಡದೇ ಇರಲು ಇತ್ತೀಚಿನ ದಿನಗಳಲ್ಲಿ ಬ್ಯಾಂಕ್ ಖಾತೆಯನ್ನು ತೆರೆಸುವುದರ ಬಗ್ಗೆ ಹೆಚ್ಚಿನ ಗಮನ ಹರಿಸಬೇಕೆಂದು ರಿಸರ್ವ್ ಬ್ಯಾಂಕ್ ಎಲ್ಲಾ ಬ್ಯಾಂಕ್‌ಗಳಿಗೂ ಆದೇಶ ನೀಡಿದೆ. ಆದರೂ ಹಲವಾರು ಬ್ಯಾಂಕ್ ಅಧಿಕಾರಿಗಳು ತಮ್ಮ ಬ್ಯಾಂಕಿಗೆ ಹೆಚ್ಚಿನ ಡೆಪಾಸಿಟ್ ಬರಲಿ ಎನ್ನುವ ದುರಾಸೆಯಿಂದ ಅಪರಿಚಿತ ವ್ಯಕ್ತಿಗಳು ಅಕೌಂಟ್ ತೆರೆಯಲು ಸಹಕರಿಸುತ್ತಾರೆ. ಮೈಸೂರಿನ ಬ್ಯಾಂಕ್ ಒಂದರಲ್ಲಿ ಬಿಹಾರದ ವ್ಯಕ್ತಿಯೊಬ್ಬ ಕೇವಲ ತನ್ನ ಡ್ರೈವಿಂಗ್ ಲೈಸೆನ್ಸ್ ಮಾತ್ರ ನೀಡಿ ಖಾತೆಯೊಂದನ್ನು ತೆರೆದು ಇಂಟರ್‌ನೆಟ್ ಮೂಲಕ ಒಂದು ಕೋಟಿ ರೂಗಳಿಗೂ ಹೆಚ್ಚು ಹಣವನ್ನು ಪಡೆದು ಇಂದಿಗೂ ನಾಪತ್ತೆಯಾಗಿದ್ದಾನೆ.

ಬ್ಯಾಂಕಿನ ಇಂಟರ್‌ನೆಟ್ ಅಕೌಂಟ್ ಹೊಂದಿದಾಗ ನಿಮ್ಮ ಪಾಸ್‌ವರ್ಡ್‌ಗಳನ್ನು ಕಾಲಕಾಲಕ್ಕೆ ಬದಲಾಯಿಸಬೇಕು. ನಿಮಗೆ ನಂಬಿಕೆ ಇರುವ ಕಂಪ್ಯೂಟರ್ ಮೂಲಕವೇ ಬ್ಯಾಂಕಿನ ವ್ಯವಹಾರ ನಡೆಸಬೇಕು. ಇಂಟರ್‌ನೆಟ್ ಪಾರ್ಲರ್‌ಗಳ ಮೂಲಕ ಬ್ಯಾಂಕಿನ ವ್ಯವಹಾರ ಮಾಡಲೇಕೂಡದು. ಇಂತಹ ಪಾರ್ಲರ್‌ಗಳಲ್ಲಿ 'ಕೀ ಲಾಗರ್' ಎನ್ನುವ ತಂತ್ರಾಂಶವನ್ನು ಅಳವಡಿಸಿ ನೀವು ಕೀ ಬೋರ್ಡ್‌ನಲ್ಲಿ ಟೈಪ್ ಮಾಡುವ ನಿಮ್ಮ ಅಕೌಂಟ್ ಸಂಖ್ಯೆ ಹಾಗೂ ಪಾಸ್‌ವರ್ಡ್‌ಗಳನ್ನು ನಿಮಗರಿವಿಲ್ಲದೆಯೇ ಕದಿಯಬಹುದು.

ಕಳೆದ ಕೆಲವು ತಿಂಗಳುಗಳಲ್ಲಿ ಹೊಸ ರೀತಿಯ ವಂಚನೆ ಪ್ರಕರಣಗಳನ್ನು ಗಮನಿಸಲಾಗಿದೆ. ನೌಕರಿ ಬಯಸುವ ಅಭ್ಯರ್ಥಿಗಳಿಗೆ ಕೆಲಸ ಕೊಡಿಸುವ ಸೈಟ್‌ಗಳಾದ ನೌಕರಿ ಡಾಟ್ ಕಾಂ ಇತ್ಯಾದಿ ವೆಬ್‌ಸೈಟ್‌ಗಳಿಗೆ ಸಲ್ಲಿಸುವ ಅರ್ಜಿಯ ಮೂಲಕ ಅರ್ಜಿದಾರರ ವಿಳಾಸ ಹಾಗೂ ವಿದ್ಯಾರ್ಹತೆಗಳನ್ನು ಪತ್ತೆ ಹಚ್ಚಲಾಗುತ್ತದೆ. ಅರ್ಜಿದಾರರಿಗೆ ಇ-ಮೇಲ್ ಮೂಲಕ ಸಂದೇಶವೊಂದನ್ನು ಕಳುಹಿಸಲಾಗುತ್ತದೆ. ಇಂತಹ ಸಂದೇಶಗಳು ವಿದೇಶೀ ಸಂಸ್ಥೆಗಳಿಂದ ಬಂದಂತಹ ಸಂದೇಶಗಳಾಗಿರುತ್ತದೆ. ನಿಮಗೆ ನಮ್ಮ ಸಂಸ್ಥೆಯಲ್ಲಿ ನೌಕರಿಯನ್ನು ಕೊಡುತ್ತೇವೆ. ನಿಮಗೆ ವಾರ್ಷಿಕ ವೇತನ ಇಂತಿಷ್ಟು ಎಂದು ತಿಳಿಸಿ. ನಮ್ಮ ದೇಶದಲ್ಲಿ ನೀವು ನೆಲೆಸಬೇಕಾದರೆ ಹಾಗೂ ಕೆಲಸ ಮಾಡಬೇಕಾದರೆ ಹಲವೊಂದು ನಿಯಮಗಳನ್ನು ಪಾಲಿಸಬೇಕು. ಈ ಕಾರಣಕ್ಕಾಗಿ ಇಂತಿಷ್ಟು ಶುಲ್ಕ ನಮಗೆ ಕಳುಹಿಸಿ ಆನಂತರ ನಿಮ್ಮ ನೌಕರಿ ಆದೇಶವನ್ನು ಕಳುಹಿಸಲಾಗುವುದು ಎಂದು ಹೇಳಿ ಹಣವನ್ನು ಲಪಟಾಯಿಸಲಾಗುತ್ತಿದೆ.

ಇಂಟರ್‌ನೆಟ್ ವಂಚಕರ ಬಗ್ಗೆ ತೀರಾ ಹೆಚ್ಚಿನ ಅವಶ್ಯಕತೆ ಅಗತ್ಯ.

# 30

## ಎಲ್ಲೆಲ್ಲೂ 'ಬಿಹಾರ ನ್ಯಾಯ'! ಏಕೆ ?

ಇದೇ ಸೆಪ್ಟೆಂಬರ್ ನಾಲ್ಕರಂದು ಲಕ್ನೋದಲ್ಲಿ ರಿಯಾ ಸಿಂಗ್ ಎನ್ನುವ ಮಗು ಕಾಣೆಯಾದಾಗ ಅದರ ಪಾಲಕರು ಪೊಲೀಸ್ ಠಾಣೆಗೆ ದೂರು ನೀಡಿದರು. ಪೊಲೀಸರು ದೂರು ದಾಖಲಿಸದೆ ಮಗುವನ್ನು ಹುಡುಕಲು ಪಾಲಕರಿಗೆ ಹೇಳಿದರು. ಅಷ್ಟರಲ್ಲಿ ಮಗುವಿನ ಪೋಷಕರಿಗೆ ಫೋನ್ ಕರೆಯೊಂದು ಬಂದು ಕರೆ ಮಾಡಿದಾತ ಮಗು ತನ್ನ ಬಳಿ ಇದೆ ಎಂದು ಹೇಳಿದ. ಪೋಷಕರು ಮತ್ತೆ ಪೊಲೀಸರಲ್ಲಿಗೆ ಹೋದರು. ಫೋನ್ ಕರೆ ಪತ್ತೆ ಮಾಡಿದ ಪೊಲೀಸರು ಮಗುವಿನ ಮನೆಯ ಪಕ್ಕದಲ್ಲಿಯೇ ವಾಸಿಸುತ್ತಿದ್ದ ಶಿವಕುಮಾರ್ ಎನ್ನುವ ಬಡಗಿಯನ್ನು ಪತ್ತೆ ಮಾಡಿದರು. ಆತ ರಿಯಾಳ ಮೇಲೆ ಅತ್ಯಾಚಾರ ನಡೆಸಿ ಕೊಂದು ದೇಹವನ್ನು ಪೆಟ್ಟಿಗೆಯೊಂದರಲ್ಲಿ ಹಾಕಿದ್ದ. ಪೊಲೀಸರು ಆತನನ್ನು ಠಾಣೆಗೆ ಕರೆದುಕೊಂಡು ಹೊರಟಿದ್ದಾಗ ರೊಚ್ಚಿಗೆದ್ದ ಬಡಾವಣೆಯ ನಾಗರೀಕರು ಪೊಲೀಸ್ ತಂಡದ ಮೇಲೆರಗಿ ಶಿವಕುಮಾರನ ಮೇಲೆ ಹಲ್ಲೆ ಮಾಡಿ ಅವನನ್ನು ಸ್ಥಳದಲ್ಲಿಯೇ ಕೊಂದು ಹಾಕಿದರು.

ಕಳೆದ ಕೆಲವು ದಿನಗಳಲ್ಲಿ ಇಂತಹದೇ ಬೇರೆ ಬೇರೆ ಘಟನೆಗಳು ನಡೆದ ವರದಿಗಳೂ ಬಂದಿವೆ. ರಾಜಸ್ಥಾನದ ಜೋರಾಜ್ ಹಳ್ಳಿಯಲ್ಲಿ ಮಹಿಳೆಯೊಬ್ಬಳನ್ನು ರೇಪ್ ಮಾಡಿ ಕೊಲೆ ಮಾಡಿದ ಘಟನೆಯಾದಾಗ ಆ ಹಳ್ಳಿಯ ಪಂಚಾಯತಿ ಸದಸ್ಯರು ಆ ಹಳ್ಳಿಯ ಐದುನೂರು ಪುರುಷರನ್ನು ನಗ್ನರನ್ನಾಗಿಸಿ ಯಾರು ಈ ಅಪರಾಧ ಮಾಡಿರುವುದು ಎಂದು ಪತ್ತೆ ಮಾಡಲು ಹೊರಟಿದ್ದಾರೆ (ಆರೋಪಿಯನ್ನು ಇದೀಗಷ್ಟೇ ಪೊಲೀಸರು ಪತ್ತೆ ಹಚ್ಚಿದ್ದಾರೆ). ಬಿಹಾರದ ವೈಶಾಲಿಯಲ್ಲಿ ದರೋಡೆ ಮಾಡಲು ಬಂದ ಹತ್ತು ಜನರ ಗುಂಪೊಂದರ ಮೇಲೆ

ಹಲ್ಲೆ ಮಾಡಿದ ಗ್ರಾಮಸ್ಥರು ಒಂಭತ್ತು ಮಂದಿಯನ್ನು ಸ್ಥಳದಲ್ಲೇ ಕೊಂದು ಹಾಕಿದ್ದಾರೆ. ಅದೇ ರಾಜ್ಯದ ಭಾಗಲಪುರದಲ್ಲಿ ಕಳ್ಳತನ ಮಾಡಿದ ಆರೋಪ ಹೊತ್ತ ಮೂವರ ಕಣ್ಣುಗಳನ್ನು ಗ್ರಾಮಸ್ಥರು ಕಿತ್ತು ಹಾಕಿದ್ದಾರೆ. ನಮ್ಮ ರಾಜ್ಯದಲ್ಲಿಯೇ ಶಾಲಾ ಬಾಲಕಿಯೊಬ್ಬಳ ಮೇಲೆ ಮಾನಭಂಗ ಹಾಗೂ ಅತ್ಯಾಚಾರ ಮಾಡ ಹೊರಟ ಶಿಕ್ಷಕನೊಬ್ಬನನ್ನು ಗ್ರಾಮದ ಜನರು ಥಳಿಸಿ ಕೊಠಡಿಯೊಂದರಲ್ಲಿ ಕೂಡಿ ಹಾಕಿ, ತೊಂದರೆಗೊಳಗಾದ ವಿದ್ಯಾರ್ಥಿನಿಯನ್ನು ಲಗ್ನವಾಗಲು ಒತ್ತಡ ಹೇರಿದ್ದಾರೆ. ಟೆಲಿವಿಷನ್ ಛಾನಲ್ ಒಂದು ಕುಟುಕು ಕಾರ್ಯಾಚರಣೆ ನಡೆಸಿ ದೆಹಲಿಯ ಶಾಲಾ ಶಿಕ್ಷಕಿಯೊಬ್ಬಳು ವಿದ್ಯಾರ್ಥಿನಿಯರನ್ನು ವೇಶ್ಯಾ ವೃತ್ತಿಗೆ ಒತ್ತಾಯಿಸುತ್ತಿದ್ದಾಳೆ ಎಂದು ಚಿತ್ರಿಸಿದಾಗ ರೊಚ್ಚಿಗೆದ್ದ ಜನರು ಶಾಲೆಗೆ ದಾಳಿ ಮಾಡಿ ಶಾಲಾ ಉಪಕರಣಗಳನ್ನು ಧ್ವಂಸ ಮಾಡಿದ್ದಾರೆ. (ಕುಟುಕು ಕಾರ್ಯಾಚರಣೆ ಸಂಪೂರ್ಣ ಅಸತ್ಯ ಎಂದು ನಂತರವಷ್ಟೇ ತಿಳಿದು ಬಂದಿದೆ. ಆದರೆ ಶಾಲೆಗೆ ಹಾಗೂ ಶಿಕ್ಷಕಿ ಉಮಾಗೆ ಹಾನಿಯಾದದ್ದು ತಪ್ಪಲೇ ಇಲ್ಲ).

## ಸಾರ್ವಜನಿಕರಿಂದಲೇ ನ್ಯಾಯ?!

ಮೇಲಿನ ಎಲ್ಲಾ ಪ್ರಕರಣಗಳಲ್ಲಿಯೂ ಸಾರ್ವಜನಿಕರೇ ಕ್ಷಿಪ್ರ ನ್ಯಾಯವನ್ನು ದಯಪಾಲಿಸಿ ಬಿಟ್ಟಿದ್ದಾರೆ. ಮೇಲು ನೋಟಕ್ಕೆ ಈ ಪ್ರಕರಣಗಳಲ್ಲಿ ಎದ್ದು ಕಾಣುವ ಅಂಶ ಜನರು ನ್ಯಾಯ ವಿತರಣಾ ವ್ಯವಸ್ಥೆಯಲ್ಲಿ ವಿಶ್ವಾಸವನ್ನು ಕಳೆದುಕೊಂಡಿರುವುದು. ಬಿಹಾರದ ಹಳ್ಳಿಯ ಜನ ಒಂಭತ್ತು ಜನರ ಪ್ರಾಣ ತೆಗೆಯುವ ಕೆಲವು ವಾರಗಳ ಹಿಂದೆ ತಮ್ಮ ಹಳ್ಳಿಗೆ ಒಂದೇ ಕಿಲೋಮೀಟರ್ ದೂರವಿದ್ದ ಪೊಲೀಸ್ ಠಾಣೆಗೆ ಹೋಗಿ ತಮ್ಮ ಹಳ್ಳಿಗೆ ದರೋಡೆಕೋರರ ಭೀತಿ ಇರುವುದರಿಂದ ಪೊಲೀಸ್ ತಂಡವನ್ನು ಕಳಿಸಲು ಗ್ರಾಮಸ್ಥರು ಕೋರಿಕೆ ಸಲ್ಲಿಸಿದ್ದರೆಂದು ತಿಳಿದುಬಂದಿದೆ. ಸಿಬ್ಬಂದಿ ಕೊರತೆಯಿಂದಾಗಿ ಪೊಲೀಸರು ಅಲ್ಲಿಗೆ ಹೋಗಿರಲಿಲ್ಲವೆಂದು ವರದಿಯಾಗಿದೆ. ಗ್ರಾಮಸ್ಥರೇ ಗಸ್ತು ತಿರುಗಿ ಸಂಶಯಾಸ್ಪದವಾಗಿ ತಮ್ಮ ಹಳ್ಳಿಗೆ ಬಂದಿದ್ದ ಕಳ್ಳರಿಗೆ ಗತಿ ಕಾಣಿಸಿದ್ದಾರೆ. ಬೋರಾಜ್‌ನ ಗ್ರಾಮಸ್ಥರು ತಮ್ಮ ಹಳ್ಳಿಯ ಮಹಿಳೆಯೊಬ್ಬಳ ಶವ ಊರ ಹೊರಗೆ ನಗ್ನ ಸ್ಥಿತಿಯಲ್ಲಿ ದೊರೆತಾಗ ಪೊಲೀಸ್ ಠಾಣೆಗೆ ಹೋಗದೇ, ತಮ್ಮ ಹಳ್ಳಿಯ ಯಾವ ವ್ಯಕ್ತಿ ಈ ಅಪರಾಧ ಎಸಗಿದ್ದಾನೆ ಎಂದು ಕಂಡು ಹಿಡಿಯಲು ತಾವೇ ತನಿಖೆಗೆ ಮುಂದಾಗಿದ್ದಾರೆ. ಲಕ್ನೋದಲ್ಲಿನ ಪೊಲೀಸರು ರಿಯಾ ಸಿಂಗ್ ಕಾಣೆಯಾದಾಗ ತೀವ್ರಗತಿಯಲ್ಲಿ ತಾವೇ ತನಿಖೆ ನಡೆಸಿ ಆರೋಪಿಯ ಪತ್ತೆ ಮಾಡಿ ಅವನನ್ನು ಸರಿಯಾದ ಬೆಂಗಾವಲಿನಲ್ಲಿ ಠಾಣೆಗೆ ಕರೆದೊಯ್ದಿದ್ದರೆ ಸಾರ್ವಜನಿಕರು ಆರೋಪಿಯನ್ನು ಕೊಲೆ ಮಾಡುತ್ತಿರಲಿಲ್ಲ.

ಪೊಲೀಸರ ಬಗ್ಗೆ ಜನರಿಗೆ ವಿಶ್ವಾಸ ಕಡಿಮೆಯಾಗುತ್ತಾ ಬರುತ್ತಿದೆ. ಇದಕ್ಕೆ ಮುಖ್ಯ ಕಾರಣ ಸಾರ್ವಜನಿಕರ ಕುಂದು ಕೊರತೆಗಳಿಗೆ ಪೊಲೀಸರು ಶೀಘ್ರವಾಗಿ ಸ್ಪಂದಿಸದಿರುವುದು. ಠಾಣೆಯೊಂದಕ್ಕೆ ದೂರು ತೆಗೆದುಕೊಂಡು ಹೋದರೆ ಕ್ಷಿಪ್ರಗತಿಯಲ್ಲಿ ಆ ದೂರು ದಾಖಲಾಗಿ ತನಿಖೆ ಆರಂಭವಾಗುತ್ತದೆ ಎಂದು ಯಾರೂ ಭಾವಿಸುವುದಿಲ್ಲ. ದರೋಡೆ, ಕೊಲೆ, ಅತ್ಯಾಚಾರ

ಅಲ್ಲದೇ ರಸ್ತೆ ಅಪಘಾತ ಪ್ರಕರಣಗಳಲ್ಲಿ ಮಾತ್ರವೇ ಪೊಲೀಸರು ಬೇಗನೇ ಸ್ಥಳಕ್ಕೆ ಧಾವಿಸುತ್ತಾರೆ. ಇತರ ಪ್ರಕರಣಗಳಲ್ಲಿ ಎಷ್ಟು ದುಂಬಾಲು ಬಿದ್ದರೂ ಪೊಲೀಸರು ತಮ್ಮ ಕರ್ತವ್ಯವನ್ನು ಶೀಘ್ರದಲ್ಲಿ ಮಾಡುವುದಿಲ್ಲ ಎನ್ನುವುದು ಸಾರ್ವಜನಿಕ ಅಭಿಪ್ರಾಯವಾಗಿದೆ.

## ಆರೋಪಿ ಪತ್ತೆ ವಿಳಂಬ

ಪೊಲೀಸರು ಆರೋಪಿಯನ್ನು ಪತ್ತೆ ಮಾಡಲು ವಿಳಂಬ ಮಾಡುತ್ತಾರೆ. ಆರೋಪಿ ಪತ್ತೆ ಆದರೂ ಪ್ರಕರಣವನ್ನು ನ್ಯಾಯಾಲಯದಲ್ಲಿ ದಾಖಲಿಸಲು ವಿಳಂಬವಾಗುತ್ತದೆ. ಎಷ್ಟೋ ಬಾರಿ ಕುಖ್ಯಾತ ಆರೋಪಿಗಳು ಶೀಘ್ರದಲ್ಲಿಯೇ ಜಾಮೀನಿನ ಮೇಲೆ ಹೊರಬಂದು ಮತ್ತೆ ಅಪರಾಧ ಮಾಡತೊಡಗುತ್ತಾರೆ. ಒಂದು ವೇಳೆ ಆರೋಪಿ ಜೈಲಿಗೆ ಹೋದರೂ ಜೈಲಿನಿಂದಲೇ ಕುಕೃತ್ಯಗಳನ್ನು ಮಾಡುತ್ತಾರೆ. ಜೈಲಿನಲ್ಲಿ ಅವನಿಗೆ 'ರಾಜೋಪಚಾರ' ಸಿಗುತ್ತದೆ. ದಾಖಲಾದ ಪ್ರಕರಣದ ನ್ಯಾಯಾಲಯದ ವಿಚಾರಣೆ ವಿಳಂಬವಾಗುತ್ತದೆ. ನೂರಕ್ಕೆ ಅರವತ್ತು ಆರೋಪಿಗಳಿಗೆ ಬಿಡುಗಡೆ ಆಗುತ್ತದೆ. ಶಿಕ್ಷೆಯಾದ ಆರೋಪಿಗಳ ಶಿಕ್ಷೆಯ ಪ್ರಮಾಣವೂ ಕಡಿಮೆ ಎಂದು ಬಹಳ ಜನರು ದೂರುತ್ತಾರೆ.

ಈ ದೂರುಗಳೆಲ್ಲಾ ನಿರಾಧಾರವಾದವು ಎಂದು ತಳ್ಳಿ ಹಾಕುವಂತಿಲ್ಲ. ರಾಜ್ಯದ ಗಮನ ಸೆಳೆದ ಹಲವಾರು ಗುರುತರ ಪ್ರಕರಣಗಳಲ್ಲಿ ಆರೋಪಿಗಳು ಇನ್ನೂ ಶಿಕ್ಷೆಗೆ ಒಳಗಾಗಿಲ್ಲ. ಇತ್ತೀಚೆಗೆ ಬೆಳಗಾವಿಯಲ್ಲಿ ಪೊಲೀಸ್ ಎನ್‌ಕೌಂಟರ್‌ನಲ್ಲಿ ಮೃತನಾದ ಶಿಂತ್ರೆ ಪ್ರಕರಣವನ್ನೇ ನೋಡೋಣ. ಹಲವಾರು ಭಾರೀ ಪ್ರಕರಣಗಳಲ್ಲಿ ಆತ ಶಾಮೀಲಾಗಿದ್ದರೂ ಗಡಿಪಾರು ಮಾಡಲ್ಪಟ್ಟಿದ್ದರೂ ಆತ ಸುಧಾರಿಸಿಯೇ ಇರಲಿಲ್ಲ ಎನ್ನಲಾಗಿದೆ. ಬೆಳಗಾವಿಯ ಮಹಿಳೆಯೊಬ್ಬಳು ಆತ ಪೊಲೀಸ್ ಎನ್‌ಕೌಂಟರ್‌ಗೆ ಬಲಿಯಾದದ್ದು ಹೆಣ್ಣು ಮಕ್ಕಳಿಗೆ ಸಂತಸ ತಂದಿತು ಎಂದು ಟಿ.ವಿ. ಸಂದರ್ಶನ ನೀಡಿದ್ದು ಗಮನಾರ್ಹ.

ಅದೇ ರೀತಿ ಧಾರವಾಡದ ಜೈಲಿನಲ್ಲಿ ಕುಖ್ಯಾತ ರೌಡಿಯೊಬ್ಬ ಮೊಬೈಲ್ ಫೋನುಗಳು, ಹಣ ಹಾಗೂ ಇತರ ಆಕ್ಷೇಪಾರ್ಹ ವಸ್ತುಗಳನ್ನು ಇಟ್ಟುಕೊಂಡದ್ದನ್ನು ಇತ್ತೀಚೆಗೆ ಪತ್ತೆ ಮಾಡಲಾಗಿದೆ.

## ಬೇಗ ಶಿಕ್ಷೆ ಆಗಬೇಕು

ತಪ್ಪು ಮಾಡಿದ ವ್ಯಕ್ತಿಗೆ ಅತಿ ಶೀಘ್ರದಲ್ಲಿ ಶಿಕ್ಷೆ ಆಗಬೇಕು. ಅಪರಾಧ ಮಾಡಿದ ವ್ಯಕ್ತಿ ಎಷ್ಟೇ ದೊಡ್ಡವನಾಗಿರಲೀ ಕಾನೂನು ಆತನಿಗೆ ಅನುಕಂಪವನ್ನು ತೋರಿಸಬಾರದು ಎನ್ನುವುದು ಸಾರ್ವಜನಿಕ ಅಭಿಪ್ರಾಯ. ಸಿನಿಮಾ ತಾರೆಯರಾದ ಸಲ್ಮಾನ್ ಖಾನ್ ಹಾಗೂ ಸಂಜಯ್‌ದತ್‌ರಿಗೆ ಶಿಕ್ಷೆ ಆದಾಗ ಮೂಡಿದ ಅಭಿಪ್ರಾಯ ಇದನ್ನು ಎತ್ತಿ ತೋರಿಸುತ್ತದೆ. ಕಾನೂನು ವ್ಯವಸ್ಥೆಯಲ್ಲಿ ಅಪರಾಧಿಗೆ ಕ್ಷಿಪ್ರ ಶಿಕ್ಷೆ ದೊರಕಿಸುವ ದಿಸೆಯಲ್ಲಿ ವ್ಯಾಪಕ ಬದಲಾವಣೆಗಳಾಗಬೇಕಾಗಿದೆ. ಈಗಾಗಲೇ ಮಳಿಮಠ್ ಆಯೋಗ ನೀಡಿರುವ ಹಲವಾರು ಸಲಹೆಗಳು ಬೇಗನೇ ಕಾರ್ಯರೂಪಕ್ಕೆ ಬರಬೇಕಾಗಿದೆ. ಈ ಹಿಂದೆ ಸುಪ್ರೀಂಕೋರ್ಟ್ ತನ್ನ

ತೀರ್ಪಿನಲ್ಲಿ ಎರಡು ವರ್ಷಗಳಿಗಿಂತ ಕಡಿಮೆ ಶಿಕ್ಷೆ ನೀಡುವಂತಹ ಅಪರಾಧಗಳ ಪ್ರಕರಣಗಳು ಎರಡು ವರ್ಷಕ್ಕಿಂತ ಮೇಲಿನ ಅವಧಿಯಲ್ಲಿ ಇತ್ಯರ್ಥವಾಗದಿದ್ದರೆ ಅಂತಹವುಗಳನ್ನು ಮುಚ್ಚಬಹುದು ಎಂದು ಆದೇಶಿಸಿತ್ತು. ಇಂತಹ ಕ್ರಮದಿಂದ ಸುಧಾರಣೆ ಆಗಬಹುದು. ನ್ಯಾಯಾಂಗ ವ್ಯವಸ್ಥೆಯಲ್ಲಿರುವ ಸಿಬ್ಬಂದಿ ಕೊರತೆ ನಿವಾರಣೆ, ಕಂಪ್ಯೂಟರೀಕರಣ ಇತ್ಯಾದಿಗಳಿಂದ ಪರಿಸ್ಥಿತಿ ಸುಧಾರಿಸಬಹುದು. ನ್ಯಾಯಾಂಗ ವ್ಯವಸ್ಥೆಯಲ್ಲಿ ತಪ್ಪಿತಸ್ಥನಿಗೆ ಬೇಗನೇ ಶಿಕ್ಷೆ ಆಗುತ್ತದೆ ಎನ್ನುವ ಅರಿವು ಸಾರ್ವಜನಿಕರಿಗೆ ಮೂಡಿದಾಗ ಅವರು ಕಾನೂನನ್ನು ತಮ್ಮ ಕೈಗೇ ತೆಗೆದುಕೊಳ್ಳಲು ಹಿಂಜರಿಯಬಹುದು.

ಅದೇ ರೀತಿಯಲ್ಲಿಯೇ ಪೊಲೀಸ್ ಹಾಗೂ ಬಂದೀಖಾನೆ ಇಲಾಖೆಗಳಲ್ಲಿಯೂ ಸುಧಾರಣೆಗಳು ಬರಬೇಕಾಗಿದೆ. ಪೊಲೀಸ್ ವ್ಯವಸ್ಥೆ ಸುಧಾರಣೆಗಾಗಿ ಈಗಾಗಲೇ ಸುಪ್ರೀಂಕೋರ್ಟ್ ಹಲವಾರು ಹೆಜ್ಜೆಗಳನ್ನು ಇಟ್ಟಿದೆ. ರಾಜ್ಯಗಳು ಪೊಲೀಸ್ ಕಾನೂನುಗಳ ಬದಲಾವಣೆಗಾಗಿ ಕಾರ್ಯಪ್ರವೃತ್ತವಾಗಬೇಕಾಗಿದೆ. ಸಾರ್ವಜನಿಕರಿಗೆ ಪೊಲೀಸ್ ಠಾಣೆಗಳಲ್ಲಿ ಶೀಘ್ರ ಪರಿಹಾರ ದೊರೆತರೆ ಜನರು ಕಾನೂನನ್ನು ತಮ್ಮ ಕೈಗೆ ತೆಗೆದುಕೊಳ್ಳುವುದಿಲ್ಲ.

## ಸಂಪರ್ಕದ ಕೊರತೆ

ಪೊಲೀಸರು ಹಾಗೂ ಸಾರ್ವಜನಿಕರ ಮಧ್ಯೆ ಇರುವ ಭಾರೀ ಸಂಪರ್ಕದ ಕೊರತೆ ಕಡಿಮೆಯಾಗಬೇಕಾಗಿದೆ. ಪೊಲೀಸರು ತಾವು ಜನಸ್ನೇಹಿಗಳು ಎಂದು ತಮ್ಮ ದೈನಂದಿನ ನಡವಳಿಕೆಯಿಂದ ಜನರಿಗೆ ಮನವರಿಕೆ ಮಾಡಿಕೊಡಬೇಕಾದ ಕಾಲ ಬಂದಿದೆ. ಇಲಾಖೆಯ ಕಾರ್ಯದಲ್ಲಿ ಹೆಚ್ಚಿನ ಪಾರದರ್ಶಕತೆ ಬರಬೇಕಾಗಿದೆ. ಪೊಲೀಸ್ ಠಾಣೆಗೆ ದೂರುಗಳು ಬಂದ ಕೂಡಲೇ ಎಂತಹ ಕೇಸಾದರೂ ಅವುಗಳ ಬಗ್ಗೆ ತೀವ್ರ ವಿಚಾರಣೆ ನಡೆಸಬೇಕಾಗಿದೆ. ತನಿಖೆಯ ಪ್ರಗತಿಯ ಬಗ್ಗೆ ಕಾಲಕಾಲಕ್ಕೆ ಫಿರ್ಯಾದಿಗೆ ತಿಳುವಳಿಕೆ ನೀಡಬೇಕಾಗಿದೆ.

ಬಂದೀಖಾನೆಗಳು ತೀವ್ರ ಸಿಬ್ಬಂದಿ ಕೊರತೆ ಎದುರಿಸುತ್ತಿವೆ. ಕೈದಿಗಳ ಬಗ್ಗೆ ನಿಗಾವಹಿಸಲು ಸಿಬ್ಬಂದಿಗಳು ಸಾಕಾಗದೇ ಹೋದಾಗ ಜೈಲಿನಲ್ಲಿಯೂ ಕುಕೃತ್ಯಗಳು ನಡೆಯುತ್ತವೆ. ವಿಚಾರಣಾಧೀನ ಕೈದಿಗಳು ಹಾಗೂ ಶಿಕ್ಷೆಗೊಳಗಾದ ಕೈದಿಗಳನ್ನು ಬೇರೆ ಬೇರೆ ಜೈಲುಗಳಲ್ಲಿ ಇಡುವುದು ಸೂಕ್ತ.

ಇಂದಿನ ಪರಿಸ್ಥಿತಿಗೆ ಮಾಧ್ಯಮಗಳ ಕೊಡುಗೆ ಕಡಿಮೆಯೇನಿಲ್ಲ. ಸಾರ್ವಜನಿಕರೇ ಕಾನೂನನ್ನು ಕೈಗೆ ತೆಗೆದುಕೊಂಡ ಘಟನೆಗಳನ್ನು ದೃಶ್ಯ ಮಾಧ್ಯಮಗಳು ವೈಭವೀಕರಿಸುತ್ತವೆ. ಬಿಸಿಬಿಸಿ ಮಸಾಲಾ ಸುದ್ದಿಗಳನ್ನು ಜನರಿಗೆ ಕೊಡುವ ಪೈಪೋಟಿಯಿಂದ ಹಲವಾರು ಮಾಧ್ಯಮ ಮಿತ್ರರು ನ್ಯಾಯ ವಿತರಣಾ ವ್ಯವಸ್ಥೆಯಲ್ಲಿ ಮೂಗು ತೂರಿಸುತ್ತಾ ಇದ್ದಾರೆ. ದೆಹಲಿಯ ಶಿಕ್ಷಕಿ ಉಮಾ ಖುರಾನಾ ಮೇಲೆ ಅನಾವಶ್ಯಕ ಆರೋಪ ಹೊರಿಸಿ ಆಕೆಗೆ ದೈಹಿಕ ಹಾಗೂ ಮಾನಸಿಕ ಆಘಾತಕ್ಕೆ ಕಾರಣವಾದ ಟಿ.ವಿ. ಚಾನೆಲ್ ತಣ್ಣನೇ ಕುಳಿತಿದೆ. ಮುಂಬೈನಲ್ಲಿ ಬಾಲಕನೊಬ್ಬ ಅಪಹರಣಗೊಂಡಾಗ ದೃಶ್ಯ ಚಾನೆಲ್‌ಗಳು ನಡೆದುಕೊಂಡ ರೀತಿಯಿಂದ ಬಾಲಕನ ಕೊಲೆ ಆಯಿತು ಎಂದು ಅಪಹೃತ ಬಾಲಕನ ತಂದೆ ಹೇಳಿದ್ದಾನೆ. ಮಾಧ್ಯಮಗಳು, ಅವರಿಷ್ಟ

ದೃಶ್ಯ ಮಾಧ್ಯಮಗಳು, ತಮ್ಮ ಜವಾಬ್ದಾರಿ ಅರಿತು ಎಲ್ಲ ಅಪರಾಧಗಳನ್ನೂ ವೈಭವೀಕರಿಸುವ ಚಾಳಿಯನ್ನು ಬಿಡಬೇಕಾದ ಕಾಲ ಬಂದಿದೆ.

ಸಾರ್ವಜನಿಕರು ತಾವೇ ಅಪರಾಧಗಳ ತನಿಖೆ ಮಾಡಿ ತಾವೇ ನ್ಯಾಯ ಒದಗಿಸಿಕೊಡುವ ಘಟನೆಗಳು ತಪ್ಪದಿದ್ದರೆ ಇಡೀ ವ್ಯವಸ್ಥೆಯೇ ಬುಡಮೇಲು ಆಗುತ್ತದೆ. ದೇಶದಲ್ಲಿ ಅರಾಜಕತೆ ತಾಂಡವವಾಡುತ್ತದೆ. "ಕಣ್ಣಿಗೊಂದು ಕಣ್ಣು, ಹಲ್ಲಿಗೊಂದು ಹಲ್ಲು" ಎನ್ನುವಂತಹ ಪ್ರತೀಕಾರ ನ್ಯಾಯ ವ್ಯವಸ್ಥೆ ಬಂದು ಅನಾಗರೀಕ ಸಮಾಜದತ್ತ ದೇಶ ಹೆಜ್ಜೆ ಹಾಕುತ್ತದೆ. ಇಂತಹ ಘಟನೆಗಳು ನಿಲ್ಲಬೇಕಾದರೆ ಕ್ರಿಮಿನಲ್ ನ್ಯಾಯ ವಿತರಣಾ ವ್ಯವಸ್ಥೆಯಲ್ಲಿ ವ್ಯಾಪಕ ಬದಲಾವಣೆಗಳಾಬೇಕು ಹಾಗೂ ಮಾಧ್ಯಮಗಳು ಇನ್ನೂ ಹೆಚ್ಚು ಜವಾಬ್ದಾರಿಯುತವಾಗಬೇಕು. ಎಲ್ಲಕ್ಕಿಂತ ಮಿಗಿಲಾಗಿ ಜನರು ಸುಶಿಕ್ಷಿತರಾಗಬೇಕು. ದೇಶದಲ್ಲಿ ಎಲ್ಲಿ ಶಿಕ್ಷಣ ಮಟ್ಟ ಕಡಿಮೆ ಇದೆಯೋ ಅಂತಹಾ ಕಡೆಗಳಲ್ಲೇ ಸಾರ್ವಜನಿಕರು ಹೆಚ್ಚಾಗಿ ಕಾನೂನನ್ನು ಕೈಗೆತ್ತಿಕೊಳ್ಳುತ್ತಿರುವುದು ಈ ಅನಿಸಿಕೆಗೆ ಪೂರಕವಾಗಿದೆ.

# 31

## ಎನ್ಕೌಂಟರ್ ಅಸಲಿ : ನಕಲಿ

2005 ನವೆಂಬರ್ 26 ರಂದು ಸೊಹರಾಬುದ್ದೀನ್ ಎನ್ನುವವರನ್ನು ನಕಲಿ ಎನ್ಕೌಂಟರ್‌ನಲ್ಲಿ ಕೊಲ್ಲಲಾಯಿತೆಂಬ ಆರೋಪದ ಮೇಲೆ ಕಳೆದ ತಿಂಗಳು ಗುಜರಾತಿನ ಇಬ್ಬರು ರಾಜಸ್ತಾನದ ಒಬ್ಬ ಐಪಿಎಸ್ ಅಧಿಕಾರಿ ಬಂಧನಕ್ಕೊಳಪಟ್ಟಿದ್ದಾರೆ. ಸೊಹರಾಬುದ್ದೀನ್. ಅವರ ಹೆಂಡತಿ ಕೌಸರ್‌ಬೀ, ಹಾಗೂ ಗೆಳೆಯ ತುಳಸಿ ಪ್ರಜಾಪತಿಯನ್ನು ಮಹಾರಾಷ್ಟ್ರದ ಸಾಂಗ್ಲಿಯಲ್ಲಿ ಗುಜರಾತ್ ಪೊಲೀಸರು ಬಂಧಿಸಿದ್ದರಂತೆ. ಸೊಹರಾಬುದ್ದೀನ್‌ರನ್ನು ಅಹಮ್ಮದಾಬಾದ್‌ನ ಹೊರವಲಯದಲ್ಲಿ ನಕಲಿ ಎನ್ಕೌಂಟರ್‌ನಲ್ಲಿ ಕೊಂದು ಎರಡು ದಿನಗಳ ನಂತರ ಕೌಸರ್‌ಬೀಯನ್ನೂ ಕೊಂದು ಆಕೆಯ ಶವವನ್ನು ಸುಡಲಾಯಿತು ಎನ್ನುವ ಆಘಾತಕಾರಿ ಅಂಶಗಳೂ ಬೆಳಕಿಗೆ ಬಂದಿವೆ. ತುಳಸಿ ಪ್ರಜಾಪತಿಯ ಸುಳಿವು ಇನ್ನೂ ಸಿಕ್ಕಿಲ್ಲ.

ಕಳೆದ ಜನವರಿಯಲ್ಲಿ ಜಮ್ಮು ಕಾಶ್ಮೀರ ರಾಜ್ಯದ ಗಾಂದರಬಲದಲ್ಲಿ ರಾಷ್ಟ್ರೀಯ ರೈಫಲ್ಸ್ ಪಡೆಯ ಸಿಬ್ಬಂದಿ ಹಾಗೂ ಸ್ಥಳೀಯ ಪೊಲೀಸರು ಐವರು ಅಮಾಯಕ ನಾಗರೀಕನ್ನು ಆತಂಕವಾದಿಗಳು ಎಂದು ಘೋಷಿಸಿ ಹಾಡಹಗಲೇ ನಕಲಿ ಎನ್ಕೌಂಟರ್‌ನಲ್ಲಿ ಕೊಲೆ ಮಾಡಿದ ಸುದ್ದಿ ಇಡೀ ದೇಶವನ್ನೇ ತಲ್ಲಣಗೊಳಿಸಿತ್ತು. ಪದೋನ್ನತಿ ಹಾಗೂ ಉತ್ತಮ ಜಾಗಗಳಿಗೆ ಪೋಸ್ಟಿಂಗ್ ಪಡೆಯಲು ಈ ಅಧಿಕಾರಿಗಳು ನಕಲಿ ಎನ್ಕೌಂಟರ್‌ಗಳನ್ನು ಮಾಡಿದ್ದಾಗಿ ಒಪ್ಪಿಕೊಂಡರು. ಎನ್ಕೌಂಟರ್‌ಗಳ ನಂತರ ಸಿಗುವ ಪ್ರೋತ್ಸಾಹ ಧನಕ್ಕಾಗಿ ಈ ಕೊಲೆಗಳನ್ನು

ಮಾಡಿದ್ದೇವೆ ಎಂದು ಕೆಲವು ಹಿರಿಯ ಅಧಿಕಾರಿಗಳು ತನಿಖಾ ಸಮಯದಲ್ಲಿ ಹೇಳಿ ನಾಗರಿಕ ಸಮಾಜವನ್ನು ತಲ್ಲಣಗೊಳಿಸಿದ್ದರು.

ಸೊಹರಾಬುದ್ದೀನ್‌ನ ಸಹೋದರ ರುಬಾಬುದ್ದೀನ್ ಸುಪ್ರೀಂಕೋರ್ಟ್‌ನಲ್ಲಿ ಅರ್ಜಿ ಸಲ್ಲಿಸಿ ತನ್ನ ಅಣ್ಣನ ಎನ್ಕೌಂಟರ್ ಕೊಲೆ ಹಾಗೂ ಕಾಣೆಯಾಗಿರುವ ತನ್ನ ಅತ್ತಿಗೆಯ ಪತ್ತೆ ಬಗ್ಗೆ ವಿಚಾರಣೆ ನಡೆಸಬೇಕೆಂದು ಮಾಡಿದ ಮನವಿಯ ಮೇರೆಗೆ ಸುಪ್ರೀಂಕೋರ್ಟ್ ಕಳೆದ ಮಾರ್ಚ್‌ನಲ್ಲಿ ತನಿಖೆಗೆ ಆದೇಶ ಹೊರಡಿಸಿತ್ತು. ಎನ್ಕೌಂಟರ್‌ನಲ್ಲಿ ಸತ್ತ ಸೊಹರಾಬುದ್ದೀನ್ ಲಷ್ಕರ್-ಎ-ತೊಯಿಬಾ ಜೊತೆ ಸಂಪರ್ಕ ಹೊಂದಿದ್ದ; ಈತ ರಾಜಸ್ತಾನದವನಾಗಿದ್ದು, ಮುಖ್ಯಮಂತ್ರಿ ನರೇಂದ್ರ ಮೋದಿಯವರನ್ನು ಕೊಲ್ಲಲು ಬಂದಿದ್ದ ಎಂದು ಗುಜರಾತ್ ಪೊಲೀಸರು ಎನ್ಕೌಂಟರ್ ನಂತರ ವಿವರಿಸಿದ್ದರು. ಸುಪ್ರೀಂಕೋರ್ಟ್ ಆದೇಶಿಸಿದ ತನಿಖೆಯ ನಂತರ ಒಂದಾದ ಮೇಲೊಂದರಂತೆ ಸತ್ಯಾಂಶ ಹೊರಬರುತ್ತಿವೆ. ಸೊಹರಾಬುದ್ದೀನ್ ಆತಂಕವಾದಿಯಾಗಿರದೇ ಮಾಮೂಲಿ ಕ್ರಿಮಿನಲ್ ಆಗಿದ್ದ ಹಾಗೂ ಕೌಸರ್ ಬೀ ಸಹ ಈಗ ಬದುಕಿ ಉಳಿದಿಲ್ಲ ಎನ್ನುವುದು ಈವರೆಗೆ ತಿಳಿದುಬಂದ ಸಂಗತಿಗಳು.

### ಎನ್ಕೌಂಟರ್ ಹೊಸದೇನಲ್ಲ!

ನಕಲಿ ಎನ್ಕೌಂಟರ್‌ಗಳು ಪೊಲೀಸ್ ಅಧಿಕಾರಿಗಳಿಗೆ ಹೊಸದೇನಲ್ಲ. ಪಂಜಾಬ್ ರಾಜ್ಯದಲ್ಲಿ ಆತಂಕವಾದ ತಾರಕಕ್ಕೇರಿದ ಸಂದರ್ಭದಲ್ಲಿ ಹಲವಾರು ಜನ ಅಮಾಯಕರನ್ನು ಪೊಲೀಸರು ಈ ವಿಧಾನ ಬಳಸಿಯೇ ಕೊಂದಿದ್ದು ಈಗಾಗಲೇ ಜನಜನಿತವಾಗಿದೆ. ಈಶಾನ್ಯ ರಾಜ್ಯಗಳಲ್ಲೂ ರಕ್ಷಣಾ ದಳಗಳು ಹಾಗೂ ಪೊಲೀಸರು ಹಲವಾರು ಅಮಾಯಕರನ್ನು ಹೀಗೆಯೇ ಹತ್ಯೆ ಮಾಡಿರುವ ಸುದ್ದಿಗಳೂ ಬಂದಿವೆ.

ಎನ್ಕೌಂಟರ್ ಎಂದರೆ ಏನು? ಯಾರಾದರೂ ಕುಖ್ಯಾತ ಆರೋಪಿ ಇಲ್ಲವೇ ಆತಂಕವಾದಿಗೆ ಪೊಲೀಸರು ಶರಣಾಗಲು ಹೇಳಿದರೂ ಆತ ಪ್ರತಿಯಾಗಿ ಪೊಲೀಸರನ್ನೇ ಕೊಲೆ ಮಾಡಲು ಯತ್ನಿಸಿದಾಗ ಇಲ್ಲವೇ ಪರಾರಿಯಾಗಲು ಯತ್ನಿಸಿದಾಗ ಆತನ ಬಂಧನಕ್ಕಾಗಿಯೋ ಅಥವಾ ಆತ್ಮರಕ್ಷಣೆಗಾಗಿಯೋ ಅವನ ಜೀವ ತೆಗೆದರೆ ಅದಕ್ಕೆ ಎನ್ಕೌಂಟರ್ ಇಲ್ಲವೇ ಪೊಲೀಸ್ ಜತೆಗಿನ ಚಕಮಕಿಯಲ್ಲಿನ ಸಾವು ಎನ್ನಬಹುದು.

ನಕಲಿ ಎನ್ಕೌಂಟರ್ ಎಂದರೆ ಯಾರನ್ನು ಕೊಲೆ ಮಾಡಬೇಕೆಂದು ಪೊಲೀಸರು ಹಾಗೂ ರಕ್ಷಣಾ ದಳಗಳು ಮೊದಲೇ ತೀರ್ಮಾನಿಸಿರುತ್ತಾರೆಯೋ, ಅಂತಹವರನ್ನು ಯಾವುದಾದರೊಂದು ಜಾಗದಲ್ಲಿ ಬಂಧಿಸಿ, ನಿರ್ಜನ ಪ್ರದೇಶಕ್ಕೆ ಒಯ್ದು ಅವರ ಮೇಲೆ ಗುಂಡು ಹಾರಿಸಿ ಅಮಾನುಷವಾಗಿ ಹತ್ಯೆ ಮಾಡುತ್ತಾರೆ. ನಂತರ ಶವದ ಬಳಿ ಶಸ್ತ್ರಾಸ್ತ್ರಗಳು ಮತ್ತು ಮದ್ದುಗುಂಡುಗಳನ್ನು ಇಟ್ಟು ಸಾಕ್ಷ್ಯಾಧಾರಗಳನ್ನು ತಾವೇ ಸೃಷ್ಟಿಮಾಡಿ, ತಾವು ಗುಂಡು ಹಾರಿಸದಿದ್ದರೆ ತಮ್ಮ ಪ್ರಾಣಕ್ಕೇ ಅಪಾಯ ಬರುತ್ತಿತ್ತು ಎನ್ನುವಂತೆ ನಂಬಿಕೆ ಬರುವ ಹಾಗೆ ಮಾಡುತ್ತಾರೆ. ಇತ್ತೀಚಿನ ದಿನಗಳಲ್ಲಿ ನಮ್ಮ ದೇಶದಲ್ಲಿ ಅಸಲಿ ಎನ್ಕೌಂಟರ್‌ಗಳಿಗಿಂತ ನಕಲಿ ಎನ್ಕೌಂಟರ್‌ಗಳು ಹೆಚ್ಚಾಗಿ ನಡೆಯುತ್ತಿವೆ ಎನ್ನುವುದು ನಿರ್ವಿವಾದವಾದ ಅಂಶ.

ಸಾಮಾನ್ಯವಾಗಿ ನಕಲಿ ಎನ್ಕೌಂಟರ್‌ಗಳಲ್ಲಿ ಸಾವನ್ನಪ್ಪುತ್ತಿರುವವರು ಹೊರದೇಶದ ಹಾಗೂ ನಮ್ಮ ದೇಶದ ಆತಂಕವಾದಿಗಳು, ಕುಖ್ಯಾತ ಭೂಗತ ಕ್ರಿಮಿನಲ್‌ಗಳು, ನಕ್ಸಲೀಯರು ಇತ್ಯಾದಿ. ಪಾಕಿಸ್ತಾನ ಹಾಗೂ ಬಾಂಗ್ಲಾದೇಶದಿಂದ ನಮ್ಮ ದೇಶಕ್ಕೆ ನುಸುಳಿ ಬಂದು ಆತಂಕವಾದಿ ಕೃತ್ಯಗಳನ್ನು ಮಾಡಿರುವ ಹಲವಾರು ವ್ಯಕ್ತಿಗಳು ಈಗಾಗಲೇ ಜಮ್ಮು ಕಾಶ್ಮೀರ, ಪಂಜಾಬ್, ಈಶಾನ್ಯ ರಾಜ್ಯಗಳು, ಆಂಧ್ರಪ್ರದೇಶ, ಗುಜರಾತ್ ಇತ್ಯಾದಿ ಕಡೆಗಳಲ್ಲಿ ಸಾವನ್ನಪ್ಪಿದ್ದಾರೆ. ಇವರಲ್ಲಿ ಎಷ್ಟು ಮಂದಿ ನಿಜವಾದ ಆತಂಕವಾದಿಗಳು ಎನ್ನುವ ಅಂಕಿ ಸಂಖ್ಯೆ ಯಾರ ಬಳಿಯೂ ಇಲ್ಲ.

ಎನ್ಕೌಂಟರ್‌ಗಳನ್ನು ಸಮರ್ಥಿಸಿಕೊಳ್ಳಲು ಕೆಲವು ಪೊಲೀಸರು ಕೊಡುವ ಉತ್ತರವೆಂದರೆ, ಆತಂಕವಾದಿಗಳು ತಮ್ಮ ಕುಕೃತ್ಯಗಳಿಂದ ನೂರಾರು ಜನರ ಪ್ರಾಣ ಹಾನಿ ಮಾಡುವುದರಿಂದ ಹಾಗೂ ಕೋಟ್ಯಂತರ ರೂಪಾಯಿ ಬೆಲೆಬಾಳುವ ಆಸ್ತಿ ನಷ್ಟ ಮಾಡುವುದರಿಂದ ಅಂತಹ ಜನರನ್ನು ಬದುಕಲು ಬಿಟ್ಟರೆ ಇನ್ನಷ್ಟು ಅಮಾಯಕರ ಪ್ರಾಣ ತೆಗೆಯುತ್ತಾರೆ. ಈ ಕಾರಣಕ್ಕಾಗಿ ಇವರ ಹತ್ಯೆ ಅನಿವಾರ್ಯ ಎಂದು.

ನಿಧಾನ ನ್ಯಾಯಾಂಗ

ಪಾರ್ಲಿಮೆಂಟ್ ಭವನದ ಮೇಲೆ ದಾಳಿ ಮಾಡಿದ ಪಾಕಿಸ್ತಾನಿ ಉಗ್ರವಾದಿಗಳಿಗೆ ಸರಿಯಾದ ಶಿಕ್ಷೆ ಆಗಲಿಲ್ಲ. ರಾಜೀವ್ ಗಾಂಧಿ ಹತ್ಯೆ ಮಾಡಿದ ಉಗ್ರವಾದಿಗಳು ಇನ್ನೂವರೆಗೆ ಮರಣದಂಡನೆ ಅನುಭವಿಸಿಲ್ಲ. ನಮ್ಮ ನ್ಯಾಯಾಂಗ ವ್ಯವಸ್ಥೆ ನಿಧಾನ. ಜಾಮೀನಿನ ಮೇಲೆ ಅಪರಾಧಿಗಳು ಹೊರಬರುತ್ತಾರೆ. ಈ ವ್ಯವಸ್ಥೆಯಲ್ಲಿ ಹಲವಾರು ಕುಖ್ಯಾತ ಅಪರಾಧಿಗಳು ತಾವು ನಡೆಸಿದ ಕೃತ್ಯಕ್ಕೆ ತಕ್ಕಂತೆ ಶಿಕ್ಷೆಯನ್ನೇ ಅನುಭವಿಸುತ್ತಿಲ್ಲ. ಇದರಿಂದ ಸಮಾಜಕ್ಕೆ ತೊಂದರೆಯಾಗುತ್ತಿದೆ. ಈ ಕಾರಣಕ್ಕಾಗಿ ಆತಂಕವಾದಿ ಹಾಗೂ ಕುಖ್ಯಾತ ರೌಡಿಗಳನ್ನು ಕೊಲ್ಲುವುದರಲ್ಲಿ ತಪ್ಪೇನಿದೆ ಎಂದು ಕೆಲವು ಪೊಲೀಸರು ವಾದಿಸುತ್ತಾರೆ.

ಕೆಲ ಪೊಲೀಸರು ಬಹುಮಾನವನ್ನು ಗಳಿಸಲು ಇಲ್ಲವೇ ಶೀಘ್ರಗತಿಯ ಪದೋನ್ನತಿ ಪಡೆಯಲು ನಕಲಿ ಎನ್ಕೌಂಟರ್‌ಗಳನ್ನು ಮಾಡುತ್ತಾರೆ. ಎನ್ಕೌಂಟರ್‌ಗಳನ್ನು ನಡೆಸಿದ ಸರಿಸುಮಾರು ಎಲ್ಲಾ ಪೊಲೀಸ್ ಅಧಿಕಾರಿಗಳೂ ತಮಗೆ ರಾಷ್ಟ್ರಪತಿಗಳ ಶೌರ್ಯ ಪ್ರಶಸ್ತಿ ಸಿಗಬೇಕು ಎಂದು ಹಂಬಲಿಸುವುದು ಸಹಜ. ಈ ಪ್ರಶಸ್ತಿ ಒಂದು ಹೆಗ್ಗಳಿಕೆಯಾಗಿರುವುದರಿಂದಲೂ ಮತ್ತು ಪದಕಗಳಿಸಿದ ಅಧಿಕಾರಿಗೆ ಹಲವಾರು ಆರ್ಥಿಕ ಸವಲತ್ತುಗಳು ಸಿಗುವುದರಿಂದ ನಕಲಿ ಎನ್ಕೌಂಟರ್‌ಗಳು ಆಗುತ್ತಿವೆ.

ನಕಲಿ ಎನ್ಕೌಂಟರ್‌ಗಳನ್ನು ಮಾಡುವ ಮೂರನೇ ಕಾರಣ ಪೊಲೀಸರಿಗೆ ತಲೆನೋವಾಗಿ ಪರಿಣಮಿಸುವ ವ್ಯಕ್ತಿಯನ್ನು ಶೀಘ್ರದಲ್ಲಿಯೇ ಮುಗಿಸಿಬಿಟ್ಟರೆ ತಮ್ಮ ಕೆಲಸ ಹಗುರವಾಗುತ್ತದೆ ಎನ್ನುವ ಭಾವನೆ, ಈ ಕಾರಣದಿಂದಲೇ ಕುಖ್ಯಾತ ರೌಡಿಗಳು, ರೌಡಿಸ್ಟ್‌ಗಳನ್ನು ನಕಲಿ ಎನ್ಕೌಂಟರ್‌ಗಳಲ್ಲಿ ಸಾಯಿಸಲಾಗುತ್ತಿದೆ.

ಇತ್ತೀಚಿಗೆ ಬೆಳಕಿಗೆ ಬಂದಿರುವ ಇನ್ನೊಂದು ಅಘಾತಕಾರಿ ಬೆಳವಣಿಗೆ ಎಂದರೆ ಪೊಲೀಸರೇ ಕುಖ್ಯಾತ ವ್ಯಕ್ತಿಗಳಿಂದ ಸುಪಾರಿಯನ್ನು ಪಡೆದು ಆ ವ್ಯಕ್ತಿ ಗಳ ಎದುರಾಳಿ ಗ್ಯಾಂಗ್‌ಗಳ ಸದಸ್ಯರನ್ನು ಕೊಂದುಬಿಡುವುದು. 10 ವರ್ಷಗಳ ಹಿಂದೆ ಮುಂಬೈ ನಗರದಲ್ಲಿ ಒಂದಾದ ಮೇಲೊಂದರಂತೆ ಸುಮಾರು 55 ಎನ್ಕೌಂಟರ್‌ಗಳು ನಡೆದು ಕರ್ನಾಟಕ ಮೂಲದ ಪೊಲೀಸ್ ಅಧಿಕಾರಿಯೊಬ್ಬನಿಗೆ "ಎನ್ಕೌಂಟರ್‌ಗಳ ರಾಜ" ಎಂದು ಕಿರೀಟ ನೀಡಲಾಗಿತ್ತು. ಈ ಪೊಲೀಸ್ ಅಧಿಕಾರಿಯ ಜೊತೆ ಇದ್ದ ಪತ್ರಕರ್ತನೊಬ್ಬ ಈ ಪೊಲೀಸ್ ಅಧಿಕಾರಿ, ಕುಖ್ಯಾತ ಕ್ರಿಮಿನಲ್‌ಗಳಿಂದ ಸುಪಾರಿ ಪಡೆದು ನಕಲಿ ಎನ್ಕೌಂಟರ್‌ಗಳನ್ನು ಮಾಡಿದ ಎನ್ನುವ ಸುದ್ದಿ ಸ್ಫೋಟಿಸಿದ ಕೂಡಲೇ ಆ ಪೊಲೀಸ್ ಅಧಿಕಾರಿಯನ್ನು ಅಮಾನತು ಮಾಡಿ, ಅವನ ಮನೆಯ ಮೇಲೆ ದಾಳಿ ನಡೆಸಲಾಗಿದೆ. ಆತನೇನಾದರೂ, ಹಣದ ಆಮಿಷಕ್ಕೆ ನಕಲಿ ಎನ್ಕೌಂಟರ್‌ಗಳನ್ನು ಮಾಡಿದ್ದು ನಿಜವಾಗಿದ್ದಲ್ಲಿ ಇಡೀ ಪೊಲೀಸ್ ವ್ಯವಸ್ಥೆ ನಾಚಿಕೆಯಿಂದ ತಲೆತಗ್ಗಿಸಬೇಕಾಗುತ್ತದೆ.

ಚಾಲ್ತಿಯಲ್ಲಿರುವ ಕ್ರಿಮಿನಲ್ ಕಾನೂನಿನನ್ವಯ ತನ್ನ ಜೀವವನ್ನು ಉಳಿಸಿಕೊಳ್ಳುವ ಸಲುವಾಗಿ ಇನ್ನೊಬ್ಬ ವ್ಯಕ್ತಿಯನ್ನು ಸಾಯಿಸಿದರ ಅದು ಅಪರಾಧವಲ್ಲ. ಅದೇರೀತಿ ಯಾವನಾದರೂ ಒಬ್ಬ ವ್ಯಕ್ತಿ ಮರಣದಂಡನೆ ಅಥವಾ ಜೀವಾವಧಿ ಶಿಕ್ಷೆ ವಿಧಿಸುವಂತಹ ಅಪರಾಧವನ್ನು ಮಾಡಿದ್ದು ಅವನನ್ನು ಬಂಧಿಸುವ ಸಂದರ್ಭದಲ್ಲಿ ಪೊಲೀಸರು ಆ ವ್ಯಕ್ತಿಯನ್ನು ಸಾಯಿಸಬಹುದು. ಬೇರೆ ಯಾವುದೇ ಸಂದರ್ಭದಲ್ಲಿ ಪೊಲೀಸ್ ಅಧಿಕಾರಿ ಇನ್ನೊಬ್ಬ ವ್ಯಕ್ತಿಯನ್ನು ಸಾಯಿಸಿದರೆ 'ಅದು ಅಪರಾಧ' ಎಂದೇ ಭಾವಿಸಬೇಕು.

ಶಿಕ್ಷೆ ಮಾತ್ರ ತಡೆಯಬಲ್ಲದು

ನಕಲಿ ಎನ್ಕೌಂಟರ್‌ಗಳನ್ನು ತಪ್ಪಿಸಬೇಕಾದಲ್ಲಿ ಇದಕ್ಕೆ ಕಾರಣವಾದ ವ್ಯಕ್ತಿಗಳಿಗೆ ಅತ್ಯಂತ ಗುರುತರವಾದ ಶಿಕ್ಷೆ ಆಗಲೇಬೇಕು. ಎನ್ಕೌಂಟರ್ ಸಾವುಗಳ ಬಗ್ಗೆ 'ರಾಷ್ಟ್ರೀಯ ಮಾನವ ಹಕ್ಕು ಆಯೋಗ' 1997 ರಲ್ಲೇ ರಾಜ್ಯಗಳಿಗೆ ಸುತ್ತೋಲೆ ಕಳಿಸಿದ್ದು ಅದು ಸರಿಯಾಗಿ ಜಾರಿಯಾಗಿಲ್ಲ ಎಂದು ತಿಳಿದ ನಂತರ 2003 ರಲ್ಲಿ ರಾಜ್ಯದ ಮುಖ್ಯಮಂತ್ರಿಗಳಿಗೆ ಪತ್ರವೊಂದನ್ನು ಬರೆಯಿತು. ಅದರಲ್ಲಿ, 'ಪೊಲೀಸ್ ಎನ್ಕೌಂಟರ್‌ಗಳು ನಡೆದ ಕೂಡಲೇ ಮಾನವ ಹಕ್ಕು ಆಯೋಗಕ್ಕೆ ಮಾಹಿತಿ ನೀಡಬೇಕು, ರಾಜ್ಯದಲ್ಲಿ ನಡೆಯುವ ಎನ್ಕೌಂಟರ್‌ಗಳ ಬಗ್ಗೆ ಸಿ.ಐ.ಡಿ. ತನಿಖೆ ನಡೆಯಬೇಕು. ಎಲ್ಲಾ ಎನ್ಕೌಂಟರ್‌ಗಳಲ್ಲೂ ಮ್ಯಾಜಿಸ್ಟ್ರೇಟ್ ತನಿಖೆ ನಡೆಯಬೇಕು. ತನಿಖೆ ನಡೆಯುವಾಗ ಎನ್ಕೌಂಟರ್‌ನಿಂದ ಸತ್ತ ವ್ಯಕ್ತಿಯ ಸಂಬಂಧಿಕರು ಹಾಜರಿರಬೇಕು. ವಿಚಾರಣೆಯಲ್ಲಿ ಯಾವುದಾದರೂ ಅಧಿಕಾರಿ ತಪ್ಪಿತಸ್ಥ ಎಂದು ಕಂಡುಬಂದರೆ ಆತನ ಮೇಲೆ ಕ್ರಿಮಿನಲ್ ಹಾಗೂ ಆಡಳಿತಾತ್ಮಕ ಕ್ರಮ ಜರುಗಿಸಬೇಕು. ಮೃತ ವ್ಯಕ್ತಿಯ ಸಂಬಂಧಿಕರಿಗೆ ಪರಿಹಾರ ಧನ ಕೊಡಬೇಕು. ಎನ್ಕೌಂಟರ್‌ಗಳನ್ನು ಮಾಡಿದ ಅಧಿಕಾರಿಗಳಿಗೆ ಎನ್ಕೌಂಟರ್ ನಡೆದ ಕೂಡಲೇ ಶೌರ್ಯ ಪ್ರಶಸ್ತಿಯನ್ನು ನೀಡಬಾರದು' ಎಂಬಿತ್ಯಾದಿ ಆದೇಶಗಳು ಇವೆ. ಆದರೂ ಹಲವಾರು ರಾಜ್ಯಗಳಲ್ಲಿ ಈ ಆದೇಶ ಸರಿಯಾಗಿ ಪಾಲನೆಯಾಗುತ್ತಿಲ್ಲ.

ಇದಕ್ಕೆ ಮುಖ್ಯ ಕಾರಣ, ನಕಲಿ ಎನ್ಕೌಂಟರ್‌ಗಳನ್ನು ತೀವ್ರ ರೀತಿಯಲ್ಲಿ ಖಂಡಿಸುವುದರಲ್ಲಿ ಸಮಾಜ ವಿಫಲವಾಗಿದೆ. ಒಬ್ಬ ಕುಖ್ಯಾತ ವ್ಯಕ್ತಿಯಾಗಲೀ ಅಥವಾ ಆತಂಕವಾದಿಯಾಗಲೀ ಸತ್ತ ಕೂಡಲೇ ಆತನಿಗೆ ತಕ್ಕ ಶಾಸ್ತಿಯಾಗಿದೆ ಎನ್ನುವ ಭಾವನೆ ಸಮಾಜದಲ್ಲಿ ಇದ್ದು ಎನ್ಕೌಂಟರ್ ಮಾಡಿದ ಅಧಿಕಾರಿಯನ್ನು ಅಟ್ಟಕ್ಕೆ ಏರಿಸಲಾಗುತ್ತಿದೆ. ಪ್ರಜಾತಂತ್ರ ವ್ಯವಸ್ಥೆಯಲ್ಲಿ ಒಬ್ಬ ಆರೋಪಿಗೆ ಶಿಕ್ಷೆ ನೀಡಬೇಕಾಗಿದ್ದು ನ್ಯಾಯಾಲಯವೇ ಹೊರತು ಪೊಲೀಸರಲ್ಲ. ನ್ಯಾಯಾಲಯದ ಕರ್ತವ್ಯವನ್ನು ಪೊಲೀಸರು ಮಾಡುವುದು ಸರಿಯಲ್ಲ ಎಂದು ತಪ್ಪು ಮಾಡುವ ಪೊಲೀಸರಿಗೆ ಬುದ್ಧಿ ಹೇಳುವ ಪರಿಪಾಠವನ್ನು ನಮ್ಮ ಸಮಾಜ ಇನ್ನೂ ಬೆಳೆಸಿಕೊಂಡಿಲ್ಲ. ಹೀಗಾಗಿ ಕೇವಲ ಕೋರ್ಟ್‌ಗಳ ಮಧ್ಯ ಪ್ರವೇಶದಿಂದ ಮಾತ್ರ ನಕಲಿ ಎನ್ಕೌಂಟರ್‌ಗಳು ಬೆಳಕಿಗೆ ಬರುತ್ತಿವೆ.

ಎನ್ಕೌಂಟರ್‌ಗಳನ್ನು ಮಾಡುವ ಪೊಲೀಸರಿಗೆ ಅತ್ಯಂತ ಘೋರ ಶಿಕ್ಷೆ ನೀಡಬೇಕಾದ ಅವಶ್ಯಕತೆ ಇದೆ. ಇದಲ್ಲದೆ ಕಾಲಕಾಲಕ್ಕೆ ಮಾನವ ಹಕ್ಕುಗಳ ಬಗ್ಗೆ ಪೊಲೀಸರಿಗೆ ತರಬೇತಿ ನೀಡಬೇಕಾದ ಅವಶ್ಯಕತೆಯೂ ಇದೆ.

ಇಲಾಖೆಯ ಹೊಣೆ

ನಕಲಿ ಎನ್ಕೌಂಟರ್‌ಗಳ ಬಗ್ಗೆ ಪೊಲೀಸ್ ಇಲಾಖೆಯೂ ತೀವ್ರ ರೀತಿಯ ಪ್ರತಿರೋಧ ತೋರಿಸಬೇಕಾಗಿದೆ. ಇಂತಹ ಸುದ್ದಿ ಬಂದ ಕೂಡಲೇ ಇಲಾಖೆಯ ಹಿರಿಯ ಅಧಿಕಾರಿಗಳು ಕಾರ್ಯತತ್ಪರರಾಗಿ. ತಪ್ಪು ಮಾಡಿದ ಕಿರಿಯ ಸಿಬ್ಬಂದಿಯ ಮೇಲೆ ಶೀಘ್ರ ರೀತಿಯ ಕಾನೂನು ಕ್ರಮ ತೆಗೆದುಕೊಳ್ಳಬೇಕಾಗಿದೆ. ನಾಗರಿಕರು ನಕಲಿ ಎನ್ಕೌಂಟರ್‌ಗಳ ಬಗ್ಗೆ ಧ್ವನಿ ಎತ್ತದೇ ಇದ್ದಾಗ ಇಲಾಖೆಯ ಹಿರಿಯ ಅಧಿಕಾರಿಗಳೇ ನಾಗರಿಕರ ಧ್ವನಿಯಾಗ ಬೇಕಾಗಿದೆ. ಎಲ್ಲಿಯವರೆಗೆ ನಕಲಿ ಎನ್ಕೌಂಟರ್ ಮಾಡಿದ ಅಧಿಕಾರಿಗಳಿಗೆ ಬಹುಮಾನ ಹಾಗೂ ಮೆಡಲ್‌ಗಳ ಶಿಫಾರಸು ಆಗುತ್ತದೆಯೋ ಅಲ್ಲಿಯವರೆಗೆ ಹಿರಿಯ ಅಧಿಕಾರಿಗಳೇ ತಮ್ಮ ಮೌನದಿಂದ ನಕಲಿ ಎನ್ಕೌಂಟರ್‌ಗಳಲ್ಲಿ ಶಾಮೀಲಾಗಿದ್ದಾರೆ ಎಂದೇ ಸಮಾಜ ಭಾವಿಸುತ್ತದೆ.

ಗುಜರಾತ್ ಹಾಗೂ ಜಮ್ಮು ಕಾಶ್ಮೀರದ ಹಿರಿಯ ಪೊಲೀಸ್ ಅಧಿಕಾರಿಗಳೇ ಅಹ್ಮದಾಬಾದ್ ಹಾಗೂ ಗಂದರ್‌ಬಾಲ್ ಪ್ರಕರಣಗಳನ್ನು ಪತ್ತೆ ಮಾಡಿದ್ದರಿಂದ ನಕಲಿ ಎನ್ಕೌಂಟರ್‌ಗಳು ಕಡಿಮೆ ಆಗಬಹುದು ಎನ್ನುವ ಆಶಾಭಾವನೆ ಮೂಡುತ್ತದೆ.

# 32

## ಪೊಲೀಸ್ ಕ್ರೌರ್ಯಕ್ಕೆ ಕಡಿವಾಣ ಸಾಧ್ಯ

ಕಳೆದ ವಾರ ಮಾಧ್ಯಮಗಳಲ್ಲಿ ಪೊಲೀಸ್ ಅಧಿಕಾರಿಯೊಬ್ಬ ತನ್ನ ಮೋಟಾರ್ ಸೈಕಲ್‌ಗೆ ಒಬ್ಬ ವ್ಯಕ್ತಿಯನ್ನು ಹಗ್ಗದಿಂದ ಕಟ್ಟಿ ದರದರ ಎಳೆದುಕೊಂಡು ಹೋಗುತ್ತಿದ್ದ ಚಿತ್ರ ಹಾಗೂ ಸುದ್ದಿ ಪ್ರಕಟವಾಯಿತು. ಘಟನೆ ನನಗೆ ನೆನಪಾಗಿದ್ದು ಕೆಲ ದಶಕಗಳ ಹಿಂದಿನ ಸಿನಿಮಾಗಳಲ್ಲಿ ವಿಲನ್‌ಗಳು ಹೀರೋಗಳನ್ನು ಈ ರೀತಿ ವಾಹನಕ್ಕೆ ಕಟ್ಟಿ ಎಳೆದೊಯ್ಯುತ್ತಿದ್ದಂತಹ ದೃಶ್ಯಗಳು. ಬಿಹಾರದ ಭಾಗಲ್‌ಪುರ ಜಿಲ್ಲೆಯ ಪೊಲೀಸರು ಔರಂಗ್ ಜೇಬ್ ಎಂಬ ಸರಗಳ್ಳನನ್ನು ಅಮಾನವೀಯವಾಗಿ ನಡೆಸಿಕೊಂಡ ಸುದ್ದಿ ಓದಿ ಭಾಗಲ್‌ಪುರ ಪೊಲೀಸರು ನಮ್ಮ ಸಿನಿಮಾ ವಿಲನ್‌ಗಳಿಗೆ ಕಡಿಮೆ ಏನೂ ಅಲ್ಲ ಅನ್ನಿಸಿತು. ಸ್ಥಳದಲ್ಲಿದ್ದ ನಾಗರಿಕರು ಸರ್ಕಸ್‌ನ ಪ್ರೇಕ್ಷಕರಂತೆ ಘಟನೆಯನ್ನು ಆಸ್ವಾದಿಸುತ್ತಿದ್ದುದು ಅಚ್ಚರಿಯ ಸಂಗತಿ.

1980ರಲ್ಲೂ ಭಾಗಲ್‌ಪುರದ ಪೊಲೀಸರು ಇಂತಹದೇ ಕೃತ್ಯವೊಂದನ್ನು ಮಾಡಿ ಕುಖ್ಯಾತಿಯನ್ನು ಗಳಿಸಿದ್ದರು. ತಮ್ಮ ಊರಿನ ಕ್ರಿಮಿನಲ್‌ಗಳು ಮುಂದೆ ಅಪರಾಧಗಳನ್ನು ಮಾಡಬಾರದು ಎನ್ನುವ 'ಘನ' ಉದ್ದೇಶದಿಂದ 31 ವಿಚಾರಣಾಧೀನ ಕೈದಿಗಳ ಕಣ್ಣುಗಳನ್ನು ತೆಗೆದು ಅಂಧರನ್ನಾಗಿ ಮಾಡಿದ್ದರು. ಭಾಗಲ್‌ಪುರದಲ್ಲಿ ಚರಿತ್ರೆ ಮತ್ತೆ ಪುನರಾವರ್ತನೆ ಆಗಿದೆ. ನಮ್ಮ ಪೊಲೀಸರಲ್ಲಿ ಅಪರಾಧಿ ಮನೋಭಾವ ಕಡಿಮೆ ಆಗದಿರುವುದನ್ನು ಈ ಪ್ರಕರಣ ಮತ್ತೆ ತೋರಿಸುತ್ತಿದೆ.

ಕಾರಣ ಇಲ್ಲದೆ ನಾಗರಿಕನೊಬ್ಬನನ್ನು ಹಿಂಸಿಸುವ ಅಧಿಕಾರ ಪೊಲೀಸರಿಗೆ ಇಲ್ಲ. ಒಬ್ಬ ವ್ಯಕ್ತಿ ಅಪರಾಧ ಮಾಡಿದರೆ ಆ ವ್ಯಕ್ತಿಗೆ ಶಿಕ್ಷೆ ಕೊಡಬೇಕಾದವರು ನ್ಯಾಯಾಧೀಶರೇ ಹೊರತು ಪೊಲೀಸರಲ್ಲ. ಕಾನೂನು ಸುವ್ಯವಸ್ಥೆ ಸಂದರ್ಭಗಳಲ್ಲಿ ಪೊಲೀಸರು ಸಾರ್ವಜನಿಕರ ಮೇಲೆ ಬಲಪ್ರಯೋಗವನ್ನು ಮಾಡಬಹುದು. 1993ರಲ್ಲಿ ದೇಶದಲ್ಲಿ ಮಾನವ ಹಕ್ಕುಗಳ ರಕ್ಷಣಾ ಕಾಯ್ದೆ ಜಾರಿಯಾಗಿದೆ. ರಾಷ್ಟ್ರ ಹಾಗೂ ರಾಜ್ಯ ಮಟ್ಟದಲ್ಲಿಯೂ ಮಾನವ ಹಕ್ಕು ರಕ್ಷಣಾ ಆಯೋಗಗಳು ಸ್ಥಾಪಿತವಾಗಿವೆ. ಪೊಲೀಸರು ಮಾನವ ಹಕ್ಕುಗಳನ್ನು ಉಲ್ಲಂಘನೆ ಮಾಡಬಾರದು ಎನ್ನುವ ನಿಯಮ ರೂಪಿತವಾಗಿದ್ದರೂ ಇತ್ತೀಚಿನ ದಿನಗಳಲ್ಲಿ ಮಾನವ ಹಕ್ಕುಗಳ ಉಲ್ಲಂಘನೆ ಆಗುತ್ತಿರುವುದು ಆತಂಕಕ್ಕೆ ಕಾರಣವಾಗಿದೆ.

ಕಾನೂನಿಗೆ ವಿರುದ್ಧವಾಗಿ ಪೊಲೀಸರು ಮಾನವ ಹಕ್ಕುಗಳ ಉಲ್ಲಂಘನೆ ಮಾಡುವುದನ್ನು ತಪ್ಪಿಸಲು ಸಾರ್ವಜನಿಕರ ನಿಗಾ ಈಗ ಅವಶ್ಯಕವಾಗಿದೆ. ಪೊಲೀಸರ ಬಲಪ್ರಯೋಗದ ಬಗ್ಗೆ ಬಹುತೇಕ ಜನರು ಚಕಾರ ಎತ್ತುವುದಿಲ್ಲ. ಕೆಲವರು ತಪ್ಪು ಮಾಡಿದ ವ್ಯಕ್ತಿಗೆ ತಕ್ಷಣ ತಕ್ಕ ಶಾಸ್ತಿ ಆಗಬೇಕೆಂದು ಭಾವಿಸಿ ಸ್ಥಳದಲ್ಲಿಯೇ ಅವನನ್ನು ಹಿಡಿದು ಬಡಿಯುತ್ತಾರೆ. ಭಾಗಲ್‌ಪುರದಲ್ಲಿ ಆದದ್ದು ಇದೇ. ಸರಗಳ್ಳ ಔರಂಗಜೇಬ್ ಸಾರ್ವಜನಿಕರಿಗೆ ಸಿಕ್ಕಿಬಿದ್ದಾಗ ಮೊದಲಿಗೆ ಅವನನ್ನು ಹೊಡೆದವರು ಸ್ಥಳದಲ್ಲಿದ್ದ ನಾಗರಿಕರು. ಅನಂತರ ಅವನನ್ನು ಪೊಲೀಸರಿಗೆ ಒಪ್ಪಿಸಿದವರೂ ಅವರೇ. ಪೊಲೀಸರು ಅವನನ್ನು ಮೋಟಾರ್ ಸೈಕಲ್‌ಗೆ ಕಟ್ಟಿ ಎಳೆದುಕೊಂಡು ಹೋದಾಗ ಖುಷಿ ಪಟ್ಟವರೂ ಅವರೇ. ಹಲವಾರು ಸಂದರ್ಭಗಳಲ್ಲಿ ನಾಗರಿಕರು ನನ್ನ ಜೊತೆ ಮಾತನಾಡುವಾಗ ಪೊಲೀಸ್ ಅಧಿಕಾರಿಗಳು ಖಡಕ್ಕಾಗಿ ಇರಬೇಕು. ಕಳ್ಳನಿಗೆ ಎರಡು ಏಟು ಹೊಡೆದರೆ ಮಾತ್ರ ಆತ ಬಾಯಿ ಬಿಡುತ್ತಾನೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಆಶ್ಚರ್ಯವೆಂದರೆ ಇಂತಹ ಅಭಿಪ್ರಾಯವನ್ನು ಸುಶಿಕ್ಷಿತರೂ, ಸಮಾಜದ ಉನ್ನತ ಸ್ಥಾನದಲ್ಲಿ ಇರುವಂತಹ ವ್ಯಕ್ತಿಗಳೂ ಅನುಮೋದಿಸುತ್ತಾರೆ. ಹೀಗಾಗಿ ನಾವು ರಾಜ್ಯ ಮಟ್ಟದಲ್ಲಿ ಹಾಗೂ ರಾಷ್ಟ್ರ ಮಟ್ಟದಲ್ಲಿ ಮಾನವ ಹಕ್ಕು ಆಯೋಗಗಳನ್ನು ಸ್ಥಾಪಿಸಿದರೂ ಪೊಲೀಸ್ ದೌರ್ಜನ್ಯದ ಎಲ್ಲಾ ಪ್ರಕರಣಗಳು ಈ ಆಯೋಗಗಳ ಮೆಟ್ಟಿಲನ್ನು ಹತ್ತುವುದೇ ಇಲ್ಲ. ಗಮನಾರ್ಹವಾದ ಸಂಗತಿ ಎಂದರೆ ಹೆಚ್ಚಿನ ಪ್ರಕರಣಗಳಲ್ಲಿ ಮಾನವ ಹಕ್ಕು ಆಯೋಗಗಳೇ ಮಾಧ್ಯಮಗಳ ವರದಿಗಳ ಆಧಾರದ ಮೇಲೆ ಸ್ವಯಂ ಪ್ರೇರಿತವಾಗಿ ಕ್ರಮವನ್ನು ಜರುಗಿಸುತ್ತಿವೆ. ಈ ಪ್ರಕರಣದಲ್ಲಿ ಭಾಗಲ್‌ಪುರದ ಪೊಲೀಸ್ ವರಿಷ್ಠಾಧಿಕಾರಿ ಹಾಗೂ ಬಿಹಾರದ ಡಿಜಿಪಿ ಅವರಿಗೂ ಈಗಾಗಲೇ ರಾಷ್ಟ್ರೀಯ ಮಾನವ ಹಕ್ಕು ಆಯೋಗ ಸ್ವಯಂಪ್ರೇರಿತವಾಗಿ ನೋಟೀಸ್ ನೀಡಿದೆ. ಮಾನವ ಹಕ್ಕುಗಳ ಉಲ್ಲಂಘನೆಯನ್ನು ಎತ್ತಿ ತೋರಿಸುವ ಕಾರ್ಯವನ್ನು ಹೆಚ್ಚಾಗಿ ಮಾಧ್ಯಮಗಳು ಮಾಡುತ್ತಿವೆಯೇ ಹೊರತು ಸಾರ್ವಜನಿಕರಲ್ಲ.

ಅಪರಾಧಿಯೊಬ್ಬನ ಮೇಲೆ ದೌರ್ಜನ್ಯ ನಡೆಸಿದರೆ ಸಾರ್ವಜನಿಕರು ಟೀಕಿಸುವುದಿಲ್ಲ ಎನ್ನುವ ಮನಃಸ್ಥಿತಿ ಹಲವಾರು ಪೊಲೀಸರಿಗೆ ಇರುವುದರಿಂದ ತಮ್ಮ ಕೃತ್ಯ ಕಾನೂನು ವಿರೋಧಿ ಎಂದು ಅವರು ಭಾವಿಸುವುದೇ ಇಲ್ಲ. ಹೀಗಾಗಿಯೇ ಸಮಸ್ಯೆ ಜಟಿಲವಾಗಿದೆ.

ಸಾಮಾನ್ಯವಾಗಿ ಕಾನೂನನ್ನು ಕೈಗೆ ತೆಗೆದುಕೊಂಡ ಪೊಲೀಸರ ಮೇಲೆ ಎರಡು ರೀತಿಯ ಕ್ರಮಗಳನ್ನು ಜರುಗಿಸಬಹುದು. ಮೊದಲನೆಯದು ಇಲಾಖಾ ವಿಚಾರಣೆ ಹಾಗೂ ಎರಡನೆಯದು ಕ್ರಿಮಿನಲ್ ಕೇಸಿನ ದಾಖಲೆ. ಪೊಲೀಸರು ಸಣ್ಣಪುಟ್ಟ ತಪ್ಪುಗಳನ್ನು ಮಾಡಿದರೆ ಸಾಮಾನ್ಯವಾಗಿ ಇಲಾಖಾ ವಿಚಾರಣೆಯನ್ನು ಆದೇಶಿಸಲಾಗುತ್ತದೆ. ಇಲಾಖಾ ಮಟ್ಟದಲ್ಲಿಯೇ ನಡೆಯುವುದರಿಂದ ಹಾಗೂ ಈ ವಿಚಾರಣೆಯಲ್ಲಿ ನ್ಯಾಯವಾದಿಗಳು ಭಾಗವಹಿಸುವುದಿಲ್ಲವಾದ್ದರಿಂದ ಬಹುತೇಕ ಆರೋಪಿತ ಅಧಿಕಾರಿಗಳು ಶಿಕ್ಷೆಗೆ ಒಳಗಾಗುವುದಿಲ್ಲ. ಇಲ್ಲವೇ ನಿರೀಕ್ಷಿತ ಪ್ರಮಾಣದ ಶಿಕ್ಷೆ ಅನುಭವಿಸುವುದಿಲ್ಲ. ಇದಲ್ಲದೇ ವಿಚಾರಣೆ ವರ್ಷಗಟ್ಟಲೆ ನಡೆಯುತ್ತಲೇ ಇರುತ್ತದೆ. ಈ ಕಾರಣದಿಂದ ಸಂಬಂಧಿಸಿದ ಸಾಕ್ಷಿಗಳು ಸುಲಭವಾಗಿ ದೊರಕುವುದಿಲ್ಲ. ತತ್ಪರಿಣಾಮವಾಗಿ ಆರೋಪಿತ ಅಧಿಕಾರಿ ಬಚಾವ್ ಆಗುತ್ತಾನೆ ಇಲ್ಲವೇ ಅತಿ ಕಡಿಮೆ ಶಿಕ್ಷೆ ಪಡೆಯುತ್ತಾನೆ.

ಕ್ರಿಮಿನಲ್ ಪ್ರಕರಣಗಳಲ್ಲಿ ಈ ರೀತಿ ಆಗುವುದಿಲ್ಲ. ಸಾಮಾನ್ಯವಾಗಿ ಬಹುತೇಕ ಇಂತಹ ಪ್ರಕರಣಗಳಲ್ಲಿ ಆರೋಪಿತ ಪೊಲೀಸ್ ಅಧಿಕಾರಿಗಳಿಗೆ ಶಿಕ್ಷೆ ಆಗುತ್ತದೆ. ಆದರೆ ಪ್ರಕರಣಗಳ ವಿಚಾರಣೆ ವಿಳಂಬವಾಗುವುದರಿಂದ ಶೀಘ್ರದಲ್ಲಿ ಶಿಕ್ಷೆ ನೀಡುವ ಸಾಧ್ಯತೆ ಕಡಿಮೆ.

ಪೊಲೀಸರು ಮಾನವ ಹಕ್ಕುಗಳ ಉಲ್ಲಂಘನೆ ಮಾಡದಿರಬೇಕಾದರೆ, ಮೊದಲಿಗೆ ಅವರಿಗೆ ಉತ್ತಮ ತರಬೇತಿಯ ಅಗತ್ಯವಿದೆ. ನಮ್ಮ ರಾಜ್ಯದಲ್ಲಿ ಪೊಲೀಸ್ ಕಾನ್ಸ್‌ಟೇಬಲ್‌ಗಳ, ಪೊಲೀಸ್ ಸಬ್ ಇನ್ಸ್‌ಪೆಕ್ಟರ್‌ಗಳ ಮೂಲಭೂತ ತರಬೇತಿ ಪಠ್ಯಕ್ರಮದಲ್ಲಿ ಮಾನವ ಹಕ್ಕುಗಳ ಬಗ್ಗೆ ಕಲಿಸಿಕೊಡಲಾಗುತ್ತಿದೆ. ಐಪಿಎಸ್ ಅಧಿಕಾರಿಗಳ ತರಬೇತಿಯ ಪಠ್ಯಕ್ರಮದಲ್ಲೂ ಮಾನವ ಹಕ್ಕುಗಳ ವಿಷಯ ಅಳವಡಿಕೆಯಾಗಿದೆ. ಆದರೆ ಒಬ್ಬ ಪೊಲೀಸ್ ಅಧಿಕಾರಿ ಕೆಲಸಕ್ಕೆ ಸೇರಿದ ನಂತರ ಒಮ್ಮೆ ತರಬೇತಿ ಪಡೆಯುತ್ತಾನೆ. ಸಿಬ್ಬಂದಿ ಕೊರತೆಯಿಂದಾಗಿ 30 ವರ್ಷಗಳ ಅಧಿಕಾರಾವಧಿಯಲ್ಲಿ ಪೊಲೀಸ್ ಅಧಿಕಾರಿ, ಅಥವಾ ಕಾನ್ಸ್‌ಟೇಬಲ್ ಕೇವಲ 1-2 ಬಾರಿ ಮಾತ್ರ ಪುನರ್ ಮನನ ತರಬೇತಿ ಪಡೆಯಬಹುದೇನೋ. ಕಾಲಕಾಲಕ್ಕೆ ಪೊಲೀಸ್ ಅಧಿಕಾರಿಗಳಿಗೆ ಮಾನವ ಹಕ್ಕುಗಳ ಬಗ್ಗೆ ತರಬೇತಿ ನೀಡುವ ಅವಶ್ಯಕತೆ ಹಿಂದಿಗಿಂತ ಇಂದು ಹೆಚ್ಚಾಗಿದೆ.

ಪೊಲೀಸ್ ಇಲಾಖೆಯ ಸುಧಾರಣೆಗಳ ಬಗ್ಗೆ ಪ್ರಕಾಶ್‌ಸಿಂಗ್ ಪ್ರಕರಣದಲ್ಲಿ ಸುಪ್ರೀಂಕೋರ್ಟ್ ನೀಡಿರುವ ತೀರ್ಪು ಹಾಗೂ ಹೊಸ ಪೊಲೀಸ್ ಕಾನೂನಿನ ಕರಡು ಪೊಲೀಸರ ಮೇಲಿನ ದೂರುಗಳ ಬಗ್ಗೆ ನಿಗಾವಹಿಸಿದೆ. ಸುಪ್ರೀಂಕೋರ್ಟ್ ತೀರ್ಪಿನನ್ವಯ ಪ್ರತಿಯೊಂದು ಜಿಲ್ಲೆಯಲ್ಲಿ ಹಾಗೂ ರಾಜ್ಯಮಟ್ಟದಲ್ಲಿ ಪೊಲೀಸರ ವಿರುದ್ಧ ಬಂದ ದೂರುಗಳ ವಿಚಾರಣೆಗೆ ಪ್ರಾಧಿಕಾರವೊಂದನ್ನು ಸ್ಥಾಪಿಸಬೇಕಾಗಿದೆ. ಇದುವರೆಗೆ ಹತ್ತಿಗಿಂತ ಕಡಿಮೆ

ಅಧಿಕಾರಿಗಳ ಬಗ್ಗೆ ಬರುವ ದೂರುಗಳನ್ನು ಜಿಲ್ಲಾ ದೂರು ಪ್ರಾಧಿಕಾರ ವಿಚಾರಣೆ ಮಾಡಬೇಕಾಗಿದೆ.

ಡಿವೈಎಸ್‌ಪಿ ಹಾಗೂ ಅವರಿಗಿಂತ ಹಿರಿಯ ಪೊಲೀಸ್ ಅಧಿಕಾರಿಗಳ ಮೇಲಿನ ದೂರುಗಳನ್ನು ವಿಚಾರಿಸಲು ರಾಜ್ಯ ಮಟ್ಟದಲ್ಲಿ ವಿಚಾರಣಾ ಪ್ರಾಧಿಕಾರವನ್ನು ಸ್ಥಾಪಿಸಬೇಕಾಗಿದೆ. ಜಿಲ್ಲಾ ಮಟ್ಟದ ಪ್ರಾಧಿಕಾರಕ್ಕೆ ನಿವೃತ್ತ ಸೆಷನ್ಸ್ ನ್ಯಾಯಾಧೀಶರೊಬ್ಬರು ಅಧ್ಯಕ್ಷರಾಗಿರಬೇಕು.

ರಾಜ್ಯ ಮಟ್ಟದ ಪ್ರಾಧಿಕಾರಕ್ಕೆ ಹೈಕೋರ್ಟ್ ಅಥವಾ ಸುಪ್ರೀಂ ಕೋರ್ಟ್‌ನ ನಿವೃತ್ತ ನ್ಯಾಯಾಧೀಶರನ್ನು ನೇಮಿಸಬೇಕಾಗಿದೆ. ಜಿಲ್ಲಾ ಹಾಗೂ ರಾಜ್ಯಮಟ್ಟದ ಪ್ರಾಧಿಕಾರಗಳ ಮುಖ್ಯಸ್ಥರನ್ನು ನೇಮಿಸುವಾಗ ಹೈಕೋರ್ಟ್ ಮುಖ್ಯ ನ್ಯಾಯಾಧೀಶರ ಸಲಹೆಯನ್ನು ಪಡೆಯಬೇಕಾಗಿದೆ. ನ್ಯಾಯಾಧೀಶರಿಗೆ ಸಹಕರಿಸಲು ನಾಲ್ಕೈದು ಸದಸ್ಯರನ್ನು ಪ್ರಾಧಿಕಾರಕ್ಕೆ ಸರ್ಕಾರವು ನೇಮಿಸಬೇಕಾಗಿದೆ. ಪ್ರಾಧಿಕಾರದ ಸದಸ್ಯರು ನಿವೃತ್ತ ಸರ್ಕಾರಿ ಅಥವಾ ಪೊಲೀಸ್ ಅಧಿಕಾರಿಗಳಾಗಿರಬಹುದು ಇಲ್ಲವೇ ಗಣ್ಯ ನಾಗರಿಕರಾಗಿರಬಹುದು.

ದೂರುಗಳ ವಿಚಾರಣೆಗೆ ಪ್ರಾಧಿಕಾರಕ್ಕೆ ತನಿಖಾಧಿಕಾರಿಗಳ ಅಗತ್ಯ ಇರುವುದರಿಂದ ಪ್ರಾಧಿಕಾರವು ಸಿಓಡಿ, ಗುಪ್ತದಳ, ಲೋಕಾಯುಕ್ತ ಇಲಾಖೆಗಳ ನಿವೃತ್ತ ಅಧಿಕಾರಿಗಳ ಸಹಾಯ ಪಡೆಯಬಹುದಾಗಿದೆ. ಪೊಲೀಸ್ ಅಧಿಕಾರಿಗಳ ಅಧಿಕಾರ ದುರುಪಯೋಗ ಪ್ರಕರಣಗಳನ್ನು ದೂರು ವಿಚಾರಣೆ ಪ್ರಾಧಿಕಾರವು ವಿಚಾರಿಸಬಹುದಾಗಿದೆ. ಸಾಮಾನ್ಯವಾಗಿ ದೂರು ವಿಚಾರಣೆ ಪ್ರಾಧಿಕಾರವು ಪೊಲೀಸ್ ಕಸ್ಟಡಿಯಲ್ಲಿ ಆಗುವ ಮರಣ, ಭಾರಿ ಗಾಯ, ರೇಪ್ ಇತ್ಯಾದಿ ಪ್ರಕರಣಗಳಲ್ಲದೆ, ಪೊಲೀಸ್ ಅಧಿಕಾರಿಗಳು ಮಾಡುವಂತಹ ಸುಲಿಗೆ, ಲ್ಯಾಂಡ್ ಗ್ರಾಬಿಂಗ್ ಇತ್ಯಾದಿ ಪ್ರಕರಣಗಳನ್ನು ವಿಚಾರಿಸಬಹುದಾಗಿದೆ. ಒಂದು ಪ್ರಕರಣದ ವಿಚಾರಣೆ ನಡೆಸಿ, ಪ್ರಾಧಿಕಾರವು ಆರೋಪಿತ ಪೊಲೀಸ್ ಅಧಿಕಾರಿಯ ಮೇಲೆ ಕ್ರಮಕ್ಕೆ ಶಿಫಾರಸ್ಸು ಮಾಡಿದಾಗ ಅದನ್ನು ಒಪ್ಪಲೇಬೇಕಾಗಿದೆ.

ಇದೇ ಆಗಸ್ಟ್ 23 ರಂದು, ಹಲವಾರು ರಾಜ್ಯ ಸರ್ಕಾರಗಳು ಪೊಲೀಸ್ ಸುಧಾರಣೆಗಳ ಬಗ್ಗೆ ತಾನು ನೀಡಿದ ಆದೇಶಕ್ಕೆ ತಿದ್ದುಪಡಿ ಮಾಡಬೇಕೆಂಬ ಮನವಿಯನ್ನು ಸುಪ್ರೀಂಕೋರ್ಟ್ ತಳ್ಳಿಹಾಕಿರುವುದರಿಂದ ಅದರ ಆದೇಶದ ಪಾಲನೆ ಆಗಲೇಬೇಕಾಗಿದೆ. ಈ ರೀತಿ ಪಾಲನೆ ಆದಾಗ ಜಿಲ್ಲಾ ಹಾಗೂ ರಾಜ್ಯ ಮಟ್ಟಗಳಲ್ಲಿ ಪೊಲೀಸ್ ದೂರು ವಿಚಾರಣಾ ಆಯೋಗಗಳು ಅಸ್ತಿತ್ವಕ್ಕೆ ಬಂದರೆ ಭಾಗಲ್‌ಪುರದಲ್ಲಿ ನಡೆದಂತಹ ಪ್ರಕರಣಗಳು ಕಡಿಮೆ ಆಗಬಹುದೆಂಬ ನಂಬಿಕೆ ಇದೆ.

# 33

## ಮಹಿಳಾ ಪೊಲೀಸರು ಪುರುಷ ಪೊಲೀಸರಿಗಿಂತ ಭಿನ್ನವೇ ?

ಹುಬ್ಬಳ್ಳಿಯಲ್ಲಿ ಇತ್ತೀಚಿಗೆ ಉತ್ತರ ಕರ್ನಾಟಕದಲ್ಲಿರುವ ಮಹಿಳಾ ಪೊಲೀಸರಿಗಾಗಿ ಎರಡು ದಿನಗಳ ಕಾರ್ಯಾಗಾರ ನಡೆಸಲಾಯಿತು. ಕಾರ್ಯಾಗಾರದ ಉದ್ದೇಶ ಮಹಿಳಾ ಪೊಲೀಸರ ಸಬಲೀಕರಣ. ಕರ್ನಾಟಕದ ಪೊಲೀಸ್ ಇಲಾಖೆಯ ಸಹಕಾರದೊಂದಿಗೆ ಹುಬ್ಬಳ್ಳಿಯ ನೆಹರು ಕಾಲೇಜು ನಡೆಸಿದ ಈ ಕಾರ್ಯಾಗಾರದ ಸಮನ್ವಯಾಧಿಕಾರಿ ಪ್ರೊಫೆಸರ್ ಶ್ರೀಮತಿ ದಾಸ್ ದಹಲಿಯ ACORD ಸಂಸ್ಥೆಯ ವತಿಯಿಂದ ಈ ಕಾರ್ಯಾಗಾರವನ್ನು ಏರ್ಪಡಿಸಲಾಗಿತ್ತು. ಕರ್ನಾಟಕ ಮಹಿಳಾ ಆಯೋಗದ ಅಧ್ಯಕ್ಷರಾದ ಶ್ರೀಮತಿ ಪ್ರಮಿಳಾ ನೇಸರ್ಗಿ ಅವರಲ್ಲದೇ ನಾನೂ ಈ ಕಾರ್ಯಾಗಾರದಲ್ಲಿ ಭಾಗವಹಿಸಿದ್ದೆ.

ಪೊಲೀಸ್ ಇಲಾಖೆಯಲ್ಲಿ ಮಹಿಳೆಯರಿಗೆಂದೇ ಮೀಸಲಾತಿಯನ್ನು ನೀಡಿದ್ದರೂ ಮಹಿಳಾ ಪೊಲೀಸರ ಬಗ್ಗೆ ಇಂದಿನ ನಮ್ಮ ಸಮಾಜದಲ್ಲಿ ತಾರತಮ್ಯ ಇದೆ ಎನ್ನುವ ವಿಷಯ ಮೊದನೆಯದಾಗಿ ಕೇಳಿಬಂದಿತು. ಪುರುಷ ಪೊಲೀಸರಿಗೆ ಇರುವಷ್ಟೇ ಸಾಮರ್ಥ್ಯ, ಬುದ್ಧಿ ಮತ್ತೆ ತಮಗಿದ್ದರೂ ಕೆಲವು ವಿಶಿಷ್ಟ ಹುದ್ದೆಗಳನ್ನು (ಉದಾಹರಣೆಗೆ ಪೊಲೀಸ್ ಕಮೀಷನರ್) ನಮಗೆ ಕೊಡುವುದಿಲ್ಲ. ಜಿಲ್ಲಾ ಪೊಲೀಸ್ ವರಿಷ್ಠರ ಅಧಿಕಾರವನ್ನು ಹೆಚ್ಚಿನ ಕಾಲ ಕೊಡುವುದಿಲ್ಲ. ಕೇವಲ ಬರವಣಿಗೆಯನ್ನು ಮಹಿಳೆಯರಿಗೆ [illegible] ವಿಭಾಗದ [illegible] ವಹಿಸಿಕೊಟ್ಟಿದ್ದಾರೆ. [illegible] ಸಹ ಪುರುಷ ಸಹೋದ್ಯೋಗಿಗಳು [illegible] ಸಹಕಾರ ನೀಡುತ್ತಿಲ್ಲ. [illegible]

ಸ್ತ್ರೀ ತನ್ನ ಬಾಸ್ ಆದಳು ಅಂದಾಕ್ಷಣ ಪುರುಷ ಪೊಲೀಸರ ವರ್ತನೆಯೇ ಬದಲಾಗುತ್ತದೆಂಬ ದೂರುಗಳು ಮಹಿಳಾ ಪೊಲೀಸರಿಂದ ಕೇಳಿಬಂದವು.

## ಅಲವತ್ತುಕೊಂಡರು

ಕೆಲವು ಮಹಿಳಾ ಪೊಲೀಸ್ ಕಾನ್ಸ್‌ಟೇಬಲ್‌ಗಳು ತಮಗೆ ಠಾಣೆಯಲ್ಲಿ ಪುರುಷರು ಮಾಡುವಂತಹ ಡ್ಯೂಟಿಗಳು, ಅಂದರೆ ಬೀಟ್ ಡ್ಯೂಟಿ, ಟ್ರಾಫಿಕ್ ಪೊಲೀಸ್ ಡ್ಯೂಟಿ, ಅಪರಾಧಗಳ ತನಿಖೆ, ಸೆಂಟ್ರಿ ಡ್ಯೂಟಿ ಮತ್ತಿತರ ಡ್ಯೂಟಿಗಳನ್ನು ಕೊಡುವುದಿಲ್ಲ. ನಮ್ಮನ್ನು ಕೇವಲ ಲಿಪಿಕ ಸಿಬ್ಬಂದಿಯಾಗಿ ಇಲ್ಲವೇ ವೈರ್‌ಲೆಸ್ ಸಿಬ್ಬಂದಿಯಾಗಿ ಉಪಯೋಗಿಸಿಕೊಳ್ಳುತ್ತಿದ್ದಾರೆಂದು ದೂರಿದರು. ಬೆಳಿಗ್ಗೆ 10 ಗಂಟೆಯಿಂದ ಸಂಜೆ ಗಂಟೆಯವರೆಗೆ ಠಾಣೆಯಲ್ಲಿ ಡ್ಯೂಟಿ ಮಾಡುವಷ್ಟೇ ನಮ್ಮ ಕೆಲಸ ಎಂದು ನಮ್ಮ ಪುರುಷ ಸಹದ್ಯೋಗಿಗಳು ಹೇಳುತ್ತಾರೆ ಎಂದು ಅಲವತ್ತುಕೊಂಡರು.

ನಮ್ಮ ದೇಶದಲ್ಲಿ ಕೆಲಸ ಮಾಡುವಂತಹ ಜಾಗಗಳಲ್ಲಿ ಮಹಿಳೆಯರ ಬಗ್ಗೆ ತಾರತಮ್ಯ ನಡೆಯುವುದು ಒಂದು ಸತ್ಯ. ಪೊಲೀಸ್ ಇಲಾಖೆಯಲ್ಲಿಯೂ ಈ ರೀತಿಯ ಅವ್ಯಕ್ತ ತಾರತಮ್ಯ ಇದ್ದೇ ಇದೆ. ಕೆಲವೊಂದು ಬಾರಿ ಬೇಕೆಂತಲೇ ಅಲ್ಲದಿದ್ದರೂ ಸಕಾರಣದಿಂದ ತಾರತಮ್ಯ ಮಾಡಲಾಗುತ್ತದೆ ಎಂದು ಕೆಲವು ಪುರುಷ ಅಧಿಕಾರಿಗಳು ಹೇಳುತ್ತಾರೆ. ಬೀಟ್ ಡ್ಯೂಟಿ ಎಂದರೆ ರಾತ್ರೋರಾತ್ರಿ ಮಹಿಳಾ ಪೊಲೀಸರು ಪಟ್ಟಣ ಹಾಗೂ ಹಳ್ಳಿಗಳ ಮೂಲೆಮೂಲೆಗಳಲ್ಲಿ ಗಸ್ತು ತಿರುಗಬೇಕು. ಅವರನ್ನು ಒಬ್ಬಂಟಿಯಾಗಿ ಇಲ್ಲವೇ ಇಬ್ಬಿಬ್ಬರಾಗಿಯೂ ಗಸ್ತು ಕಳುಹಿಸಬೇಕು. ಇಬ್ಬರು ಮಾಡುವ ಕೆಲಸ 3 ಜನ ಮಾಡಬೇಕು. ರಾತ್ರಿ ಏನಾದರೂ ಹೆಚ್ಚುಕಡಿಮೆಯಾದರೆ ನಮ್ಮ ತಲೆಗೇ ಬರುತ್ತದೆಯೆಂದು ಕೆಲವು ಠಾಣಾಧಿಕಾರಿಗಳ ಮನೋಭಾವನೆ ಮಹಿಳೆಯರು ಪುರುಷರಷ್ಟು ಸಬಲರಲ್ಲ, ಪೊಲೀಸ್ ತರಬೇತಿ ಪಡೆದಿದ್ದರೂ 3 ಗಂಟೆಗಳ ಕಾಲ ಬಂದೂಕು ಹಿಡಿದು ಸೆಂಟ್ರಿ ಡ್ಯೂಟಿ ಮಾಡಲು ಅವರಿಗೆ ಸಾಧ್ಯವಿಲ್ಲ. 3-4 ಕಿ.ಮೀ ನಡೆದುಕೊಂಡು ಹೋದರೆ ಅವರು ಸುಸ್ತಾಗುತ್ತಾರೆ. ಹೀಗಾಗಿ ಅವರಿಗೆ ಲೈಟ್ ಡ್ಯೂಟಿಗಳನ್ನು ಕೊಡುವುದು ಸೂಕ್ತ ಎಂದು ಇನ್ನೂ ಕೆಲವರು ವಾದಿಸುತ್ತಾರೆ. ರಾತ್ರಿ ವೇಳೆಯಲ್ಲಿ ಮಹಿಳಾ ಪೊಲೀಸರನ್ನು ಪೊಲೀಸ್ ಠಾಣೆಯಲ್ಲಿ ಇಟ್ಟುಕೊಳ್ಳುವುದು ಸರಿಯಲ್ಲ. ನಮ್ಮ ಪುರುಷ ಪೊಲೀಸ್ ಸಿಬ್ಬಂದಿಯಿಂದಲೇ ಅವರಿಗೆ ಏನಾದರೂ ತೊಂದರೆ ಆಗುವ ಸಾಧ್ಯತೆ ಇದೆ ಎನ್ನುವುದನ್ನು ಅಲ್ಲಗಳೆಯುವಂತಿಲ್ಲ; ಹೀಗಾಗಿ ಮಹಿಳಾ ಪೊಲೀಸರಿಗೆ ಬೆಳಗಿನ ಡ್ಯೂಟಿ ಅದರಲ್ಲೂ 10 ಗಂಟೆಯಿಂದ 5 ಗಂಟೆಯ ಅವಧಿಯಲ್ಲಿ ಮಾಡುವಂತಹ ವೈರ್‌ಲೆಸ್ ಡ್ಯೂಟಿ, ರೈಟರ್ ಡ್ಯೂಟಿ, ಇತ್ಯಾದಿ ಡ್ಯೂಟಿಗಳನ್ನು ಕೊಡುವುದೇ ಸೂಕ್ತ ಎಂದು ಇನ್ನೂ ಕೆಲವು ಪುರುಷ ಪೊಲೀಸರು ವಾದಿಸುತ್ತಾರೆ.

ಹಲವಾರು ಮಹಿಳಾ ಪೊಲೀಸರು ಈ ವಾದವನ್ನು ಒಪ್ಪುವುದಿಲ್ಲ, ಪೊಲೀಸ್ ತರಬೇತಿ ಕಾಲಗಳಲ್ಲಿ ನಾವು ನಮ್ಮ ಸಹಪಾಠಿ ಪುರುಷರ ಭುಜಕ್ಕೆ ಭುಜ ಕೊಟ್ಟು ಎಲ್ಲಾ ರೀತಿಯ ತರಬೇತಿಯನ್ನು ಪಡೆದಿದ್ದೇವೆ. ನಮ್ಮನ್ನು ಅಬಲೆಯರು ಎಂದು ಕರೆಯಲು ಸಾಧ್ಯವಿಲ್ಲ.

ರಾತ್ರಿ ಬೀಟ್ ಡ್ಯೂಟಿ ಮಾಡಲು ನಾವು ಸಿದ್ಧ, ಸೆಂಟ್ರಿ ಡ್ಯೂಟಿ ಮಾಡಲೂ ನಾವು ಸಿದ್ಧ, ತನಿಖೆಯನ್ನು ನಾವು ಮಾಡುತ್ತೇವೆ. ಆದರೂ ನಮ್ಮ ಸಹೋದ್ಯೋಗಿಗಳು ನಮಗೆ ಈ ಕೆಲಸಗಳನ್ನು ಮಾಡಲು ಅನುಕೂಲ ಮಾಡಿ ಕೊಡುವುದಿಲ್ಲ ಎಂದು ಕೆಲವು ಮಹಿಳಾ ಸಿಬ್ಬಂದಿ ಈ ಕಾರ್ಯಾಗಾರದಲ್ಲಿ ದೂರಿದರು.

## ಹೆಚ್ಚಿನ ಕಾಳಜಿ ಅಗತ್ಯ

ದೆಹಲಿಯಲ್ಲಿ ಪೊಲೀಸರ ಬಗ್ಗೆ ಸಂಶೋಧನೆ ನಡೆಸಿದ ಈ ಕಾರ್ಯಾಗಾರದ ರೂವಾರಿ ಶ್ರೀಮತಿ ಜಯ ಇಂದಿರೇಶನ್ ನನಗೊಂದು ಪುಸ್ತಕ ಕೊಟ್ಟರು. ಆ ಪುಸ್ತಕದ ಹಾಳೆಗಳನ್ನು ಕಾರ್ಯಾಗಾರದಲ್ಲಿ ತಿರುವಿಹಾಕಿದೆ. ನಮ್ಮ ಕರ್ನಾಟಕ ಮಹಿಳಾ ಪೊಲೀಸರು ತಮ್ಮ ನೌಕರಿ ಬಗ್ಗೆ ವ್ಯಕ್ತಪಡಿಸಿದ ಹಲವಾರು ಅನಿಸಿಕೆಗಳನ್ನು ದೆಹಲಿಯಲ್ಲಿಯೂ ಮಹಿಳಾ ಪೊಲೀಸರು ವ್ಯಕ್ತಪಡಿಸಿದ್ದರು. ಹೀಗಾಗಿ ಮಹಿಳಾ ಪೊಲೀಸರ ಬಗ್ಗೆ ಅವರ ಪುರುಷ ಸಹೋದ್ಯೋಗಿಗಳಿಗಿರುವ ಅನಿಸಿಕೆ ದೇಶವ್ಯಾಪಿ ಎನ್ನಬಹುದೇನೋ! ಉತ್ತರ ವಲಯದ ಐಜಿಪಿ ಕಾರ್ಯಾಗಾರದಲ್ಲಿ ಹಾಜರಿದ್ದು ನನಗೊಂದು ಮಾತು ಹೇಳಿದರು. ಅವರ ಪ್ರಕಾರ ಮದುವೆ ಆಗುವವರೆಗೂ ಮಹಿಳಾ ಪೊಲೀಸರು ಉತ್ಸುಕತೆಯಿಂದ ಕೆಲಸ ಮಾಡುತ್ತಾರೆ. ಮದುವೆ ಆದ ನಂತರ ಅವರ ಗಮನ ನೌಕರಿಗಿಂತ ಮನೆಯತ್ತ ವಾಲುತ್ತದೆ. ಗಂಡ, ಅತ್ತೆ, ಮಾವಂದಿರನ್ನು ಸಂತೃಪ್ತಿಗೊಳಿಸುವುದು ಮದುವೆಯ ಮೊದಲ ವರ್ಷಗಳಲ್ಲಿ ಆದ್ಯತೆ ಪಡೆದರೆ, ಮಕ್ಕಳು ಆದ ನಂತರ ಮಹಿಳಾ ಪೊಲೀಸರಿಗೆ ತಮ್ಮ ಮಕ್ಕಳ ಲಾಲನೆ ಪಾಲನೆಯ ಬಗ್ಗೆ ಹೆಚ್ಚಿನ ಆಸಕ್ತಿ ಮೂಡುತ್ತದೆ.

ಹೀಗಾಗಿ ಪೊಲೀಸ್ ನೌಕರಿಗಿಂತ ಅವರು ತಮ್ಮ ಕುಟುಂಬದ ಬಗ್ಗೆ ಹೆಚ್ಚಿನ ಕಾಳಜಿ ವಹಿಸಬೇಕಾಗುತ್ತದೆ. ಈ ಕಾರಣದಿಂದ ಅವರಿಗೆ ನಾವು ಬೇರೆ ಬೇರೆ ವಿಧದ ಡ್ಯೂಟಿಗಳನ್ನು ನೀಡಿದ್ದರೂ ಅವರು ತಾವಾಗಿಯೇ ಈ ರೀತಿಯ ಸವಾಲುಗಳನ್ನು ಎದುರಿಸಲು ತಿರಸ್ಕಾರ ಮಾಡುತ್ತಾರೆ ಎಂದರು.

ಪೊಲೀಸ್ ಇಲಾಖೆಗೆ ಸೇರುವ ಮಹಿಳೆಯರು ಹಲವಾರು ರೀತಿಯ ಒತ್ತಡಗಳಿಗೆ ಈಡಾಗುತ್ತಾರೆ ಎನ್ನುವ ಸಂಶಯವೇ ಬೇಡ ಎಂದು ಪ್ರೊಫೆಸರ್ ಜಯ ಇಂದಿರೇಶನ್ ಹೇಳಿದರು. ಅವರ ಪ್ರಕಾರ ಮನೆ ಹಾಗೂ ನೌಕರಿ ಎರಡನ್ನು ಸರಿತೂಗಿಸಿಕೊಂಡು ಹೋಗುವಂತಹ ಸಂದರ್ಭದಲ್ಲಿ ಮಹಿಳಾ ಪೊಲೀಸರಿಗೆ ಅತಿ ಹೆಚ್ಚಿನ ಮಾನಸಿಕ ಒತ್ತಡ ಬರುವುದಲ್ಲದೇ ದೈಹಿಕ ಒತ್ತಡವೂ ಆಗುತ್ತದೆ. ಈ ರೀತಿ ಒತ್ತಡಗಳಿಗೆ ಈಡಾದಾಗ ಪೊಲೀಸ್ ನೌಕರಿಯಲ್ಲಿ ಪುರುಷರಂತೆಯೇ ಕರ್ತವ್ಯ ನಿರ್ವಹಿಸುವುದು ಕಷ್ಟ. ಮಾನಸಿಕ ಒತ್ತಡವನ್ನುಅವರು ಸಹೋದ್ಯೋಗಿಗಳ ಮೇಲೆ ತೋರಿಸುತ್ತಾರೆ ಎಂದರು.

## ಥಟ್ಟನೆ ನೆನಪಾಯಿತು

"ದಯವಿಟ್ಟು ನಮಗೆ ಮಹಿಳಾ ಪೊಲೀಸ್ ಠಾಣೆಗೆ ಕಳುಹಿಸಬೇಡಿ. ಅಲ್ಲಿ ನಮ್ಮ ಬಗ್ಗೆ ಮಹಿಳಾ ಪೊಲೀಸರು ಸರಿಯಾಗಿ ವರ್ತಿಸುವುದಿಲ್ಲ. ಅವಾಚ್ಯ ಶಬ್ದಗಳಿಂದ ನಮ್ಮನ್ನು ಬೈಯ್ಯುತ್ತಾರೆ" ಎಂದು ಹಲವಾರು ಮಹಿಳೆಯರು ಈ ಹಿಂದೆಯೇ ನನಗೆ ದೂರಿದ್ದು ಥಟ್ಟನೆ ನೆನಪಾಯಿತು. ತಮ್ಮ ಮಾನಸಿಕ ಒತ್ತಡದ ಫಲವಾಗಿ ತಮ್ಮ ಠಾಣೆಗೆ ಬರುವಂತಹ ಹೆಣ್ಣು ಮಕ್ಕಳ ಬಗ್ಗೆ ಮಹಿಳಾ ಪೊಲೀಸರು ಈ ರೀತಿ ವರ್ತನೆ ಮಾಡುತ್ತಿರಬಹುದು ಎಂದು ನಾನು ಥಟ್ಟನೆ ಊಹಿಸಿದೆ. ನನ್ನ ಮಹಿಳಾ ಪೊಲೀಸ್ ಸಹೋದ್ಯೋಗಿ ಒಬ್ಬರು ಮಹಿಳಾ ಪೊಲೀಸರು ಪುರುಷ ಪೊಲೀಸರಿಗಿಂತ ಹೆಚ್ಚು ಭ್ರಷ್ಟರು ಎಂದು ಹೇಳಿದ ವಿಷಯವೂ ಇದೇ ಸಮಯದಲ್ಲಿ ನೆನಪಾಯಿತು. ಈ ಬಗ್ಗೆ ನಾನು ನನ್ನ ಭಾಷಣದಲ್ಲಿ ಪ್ರಸ್ತಾವನೆಯನ್ನು ಮಾಡಿದೆ. ಇದಕ್ಕೆ ಸ್ಪಂದಿಸಿದ ಜಯರವರು ಭ್ರಷ್ಟತೆಯಲ್ಲಿ ಮಹಿಳೆಯರು ಪುರುಷರಿಗೆ ಸರಿಸಮಾನವೇ; ಕೇವಲ ಮಹಿಳೆಯಾದ ಮಾತ್ರಕ್ಕೆ ಆಕೆ ಶುದ್ಧ ಹಸ್ತಳು ಎಂದು ಭಾವಿಸುವುದರಲ್ಲಿ ಅರ್ಥ ಇಲ್ಲ ಎಂದು ಹೇಳಿ ತಾವು ದೆಹಲಿ ಪೊಲೀಸ್ ಸಿಬ್ಬಂದಿಯ ಬಗ್ಗೆ ನಡೆಸಿದ ಸಮೀಕ್ಷೆ ಈ ಅಂಶವನ್ನು ಸ್ಪಷ್ಟೀಕರಿಸಿದೆ ಎಂದು ತಿಳಿಸಿದರು. ತಮ್ಮ ತಮ್ಮ ಕಾರ್ಯಗಳನ್ನು ಮಹಿಳಾ ಪೊಲೀಸರು ಪುರುಷರಿಗಿಂತ ಅಚ್ಚುಕಟ್ಟಾಗಿ ಮಾಡುವುದಿಲ್ಲ ಎನ್ನುವ ವಿಷಯವೂ ಇದೇ ಸಂದರ್ಭದಲ್ಲಿ ನನ್ನ ಗಮನಕ್ಕೆ ಬಂದಿತು. ಕೇವಲ ಬೆರಳೆಣಿಕೆಯಷ್ಟು ಪೊಲೀಸರು ಮಾತ್ರ ವೃತ್ತಿಪರರು ಎನ್ನುವುದು ಇಲಾಖೆಯಲ್ಲಿ ಸರ್ವವಿದಿತ ಎನ್ನುವುದನ್ನು ನಾನು ಪ್ರಸ್ತಾಪಿಸಿದೆ.

ವೃತ್ತಿ ಧರ್ಮವನ್ನು ಯಾರು ಉತ್ತಮವಾಗಿ ಪಾಲಿಸುತ್ತಾರೋ ಅಂತಹವರು ಮಾತ್ರ ತಮ್ಮ ವೃತ್ತಿಯಲ್ಲಿ ಮುಂದೆ ಬರಬಲ್ಲರು ಎಂದು ನನ್ನ ನಂಬಿಕೆ. ಪ್ರಪಂಚದ ಅತಿ ದೊಡ್ಡ ಸಂಸ್ಥೆಗಳಲ್ಲಿ ಒಂದಾದ ಪೆಪ್ಸಿ ಕಂಪನಿಗೆ ಭಾರತೀಯ ಸಂಜಾತೆ ಇಂದಿರಾ ನೂಯಿ ಅಧ್ಯಕ್ಷೆಯಾಗಿ ಅಂತಹ ಭಾರಿ ಸಂಸ್ಥೆಯನ್ನು ಚೆನ್ನಾಗಿ ನಡೆಸುತ್ತಿರುವಾಗ ಭಾರತೀಯರೇ ಆದ ಮಹಿಳಾ ಪೊಲೀಸರು ತಮ್ಮ ತಮ್ಮ ವೃತ್ತಿಗಳಲ್ಲಿ ಏಕೆ ಮಿಂಚುತ್ತಿಲ್ಲ ಎನ್ನುವ ಚಿಂತೆ ನನ್ನ ಮನಸ್ಸಿನಲ್ಲಿ ಇದೆ. ಪುರುಷ ಪ್ರಧಾನವಾದ ನಮ್ಮ ಸಮಾಜದಲ್ಲಿ ಅದರಲ್ಲೂ ಪೊಲೀಸ್ ವ್ಯವಸ್ಥೆಯಲ್ಲಿ ಮಹಿಳಾ ಪೊಲೀಸರ ಬಗ್ಗೆ ತಾತ್ಸಾರ ಇರುವುದನ್ನು ನಾವೆಲ್ಲ ಒಪ್ಪಲೇ ಬೇಕು. ಈ ರೀತಿಯ ತಾತ್ಸಾರದ ನಡುವೆಯೂ ಕೆಲವು ಮಹಿಳೆಯರು ತಮ್ಮ ವೃತ್ತಿಯನ್ನು ಸವಾಲಾಗಿ ಸ್ವೀಕರಿಸಿ ವೃತ್ತಿಯಲ್ಲಿ ಯಶಸ್ಸನ್ನು ಗಳಿಸಿದ್ದಾರೆ. ಆದರೆ ಬಹುಪಾಲು ಮಹಿಳೆಯರು ವೃತ್ತಿಗಿಂತ ಕುಟುಂಬ ಮೊದಲು ಎನ್ನುವ ಭಾವನೆ ತಳೆದಿರುವುದರಿಂದ ಚಾಲೆಂಜಿಂಗ್ ಹುದ್ದೆಗಳನ್ನು ನಿಭಾಯಿಸಲು ಹಿಂಜರಿಯುತ್ತಿದ್ದಾರೆ. ಒಂದು ವೇಳೆ ಪುರುಷರು ಮಾಡುವ ಕೆಲಸವನ್ನು ತಾವು ಅವರಿಗಿಂತ ಚೆನ್ನಾಗಿ ಮಾಡಬಲ್ಲೆವು ಎಂದು ತೋರಿಸುವವರಿಗೆ ಅವರ ಪುರುಷ ಸಹೋದ್ಯೋಗಿಗಳೇ ಸರಿಯಾದ ಸಹಕಾರ ನೀಡದೇ ಇರುವುದರಿಂದ ಅವರುಗಳ ಉತ್ಸಾಹ ಭಂಗವಾಗಿ ಅವರೂ ಹಿಂಜರಿಯುತ್ತಾರೆ, ಇದೇ ವಿಪರ್ಯಾಸ.

ಇಂತಹ ವಿಪರ್ಯಾಸವನ್ನು ತಪ್ಪಿಸುವುದೇ ಹುಬ್ಬಳ್ಳಿಯಲ್ಲಿ ನಾವು ಕಾರ್ಯಾಗಾರ ನಡೆಸಿದ ಉದ್ದೇಶ. ಕಾರ್ಯಾಗಾರದ ನಂತರ ಅಲ್ಲಿ ಭಾಗವಹಿಸಿದ್ದ ಮಹಿಳಾ ಪೊಲೀಸರಲ್ಲಿ ಇನ್ನು ಹೆಚ್ಚಿನ ಉತ್ಸಾಹ ಮೂಡಿ ಅವರುಗಳು ವೃತ್ತಿಪರತೆಯನ್ನು ಹೆಚ್ಚಿಸಿಕೊಂಡು ಉತ್ತಮವಾದ ಕೆಲಸ ಮಾಡಬೇಕೆಂಬ ಛಲ ಮೂಡಿಸಿಕೊಂಡರು. ಇದರ ಫಲವನ್ನು ಕಾದು ನೋಡಬೇಕಾಗಿದೆ. ಇದಲ್ಲದೇ ಪುರುಷರೂ ತಮ್ಮ ಮಹಿಳಾ ಸಹೋದ್ಯೋಗಿಗಳ ಬಗ್ಗೆ ತಳೆದಿರುವ ಭಾವನೆಯನ್ನು ಕೂಡಲೇ ಬದಲಿಸಬೇಕಾಗಿದೆ.

# 34

## ಪೊಲೀಸ್ ವ್ಯವಸ್ಥೆ ಸುಧಾರಣೆ: ಸುಪ್ರೀಂಕೋರ್ಟ್ ತೀರ್ಪಿನಿಂದ ಪೊಲೀಸ್ ವ್ಯವಸ್ಥೆಗೆ ಆನೆ ಬಲ

ಪೊಲೀಸ್ ವ್ಯವಸ್ಥೆ ಸುಧಾರಣೆ ಕುರಿತಂತೆ ಸುಪ್ರೀಂಕೋರ್ಟ್ 2006ರ ಸೆಪ್ಟೆಂಬರ್ ತಿಂಗಳಲ್ಲಿ ಮಾಡಿದ ಮಹತ್ವದ ಆದೇಶಗಳನ್ನು ಪುನರುಚ್ಚರಿಸಿ ಅವುಗಳಲ್ಲಿ ಕೆಲವನ್ನು ಮುಂದಿನ ನಾಲ್ಕು ವಾರಗಳಲ್ಲಿ ಜಾರಿ ಮಾಡಬೇಕು ರಾಜ್ಯ ಸರ್ಕಾರಗಳಿಗೆ ಜನವರಿ 11ರಂದು ಆದೇಶಿಸಿದ. ತತ್‌ಕ್ಷಣ ಜಾರಿ ಮಾಡಬೇಕಾದ ಆದೇಶಗಳು, ಡಿಜಿಪಿ ಹಾಗೂ ಇತರ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಎರಡು ವರ್ಷದ ಅಧಿಕಾರಾವಧಿ ಮತ್ತು ಭದ್ರತಾ ಆಯೋಗ ರಚನೆ ಹಾಗೂ ಇನ್ನುಳಿದ ಆದೇಶಗಳ ಜಾರಿಗೆ 2007ರ ಮಾರ್ಚ್ 31ರವರೆಗೆ ಕಾಲಾವಕಾಶ ನೀಡಿದ.

ಒಂದು ದಶಕದ ಹಿಂದೆ ಪ್ರಕಾಶ್ ಸಿಂಗ್ ಎಂಬ ಹಿರಿಯ ಐಪಿಎಸ್ ಅಧಿಕಾರಿ ಸಲ್ಲಿಸಿದ್ದ ಅರ್ಜಿಯ ಮೇರೆಗೆ ಸುಪ್ರೀಂ ಕೋರ್ಟ್ ಪೊಲೀಸ್ ವ್ಯವಸ್ಥೆಯ ಸುಧಾರಣೆ ಬಗ್ಗೆ ವಿಚಾರಣೆ ನಡೆಸಿ, ಹಲವಾರು ಆದೇಶಗಳನ್ನು ನೀಡಿದೆ. ಪೊಲೀಸ್ ವಿಷಯವು ರಾಜ್ಯಗಳವ್ಯಾಪ್ತಿಗೆ ಬಂದರೂ ಈ ಮಹತ್ವದ ಇಲಾಖೆಯ ಸುಧಾರಣೆ ಬಗೆಗೆ ತಾನೇ ಗಮನ ನೀಡಬೇಕಾದ ಅನಿವಾರ್ಯತೆಯನ್ನು ಸುಪ್ರೀಂ ಕೋರ್ಟ್ ವಿವರಿಸಿದೆ.

ತೀರ್ಪಿನಲ್ಲಿ ಆರು ಮುಖ್ಯ ಅಂಶಗಳಿವೆ. ಅವುಗಳಲ್ಲಿ ಮೊದಲನೆಯದು ಪೊಲೀಸ್ ಆಡಳಿತದಲ್ಲಿ ಕಾನೂನು ಸುವ್ಯವಸ್ಥೆ ಕಾರ್ಯ ಹಾಗೂ ತನಿಖಾ ಕಾರ್ಯಗಳ ವಿಭಜನೆ. ಸದ್ಯದ ಪೊಲೀಸ್ ವ್ಯವಸ್ಥೆಯಲ್ಲಿ ತನಿಖಾ ಕಾರ್ಯಕ್ಕೆಂದೇ ವಿಶೇಷ ಪೊಲೀಸ್ ಸಿಬ್ಬಂದಿ ಇಲ್ಲದಿರುವುದರಿಂದ ಇರುವ ಪೊಲೀಸ್ ಸಿಬ್ಬಂದಿಯನ್ನು ಕಾನೂನು ಸುವ್ಯವಸ್ಥೆ ಕಾರ್ಯಗಳಿಗೆ

(ಅಂದರೆ, ಗಲಭೆ ನಿಯಂತ್ರಣ, ವಿಐಪಿ ಭೇಟಿ, ಬಂದೋಬಸ್ತ್, ಜಾತ್ರಾ ಬಂದೋಬಸ್ತ್ ಇತ್ಯಾದಿ) ನಿಯೋಜಿಸಬೇಕಾಗುತ್ತದೆ. ಇದರಿಂದಾಗಿ ದಾಖಲಾಗುವ ಪ್ರಕರಣಗಳ ತನಿಖೆ ಕಾರ್ಯ ಕುಂಠಿತವಾಗಿ ಅಪರಾಧ ನಿಯಂತ್ರಣ ಕಠಿಣವಾಗುತ್ತದೆ. ಪ್ರಕರಣಗಳ ತನಿಖೆಗಾಗಿಯೇ ಬೇರೆ ಸಿಬ್ಬಂದಿ ಇದ್ದು, ಅವರನ್ನು ಕಾನೂನು ಸುವ್ಯವಸ್ಥೆ ಕೆಲಸಗಳಲ್ಲಿ ತೊಡಗಿಸಿದ್ದರೆ ಪರಿಸ್ಥಿತಿ ಉತ್ತಮವಾಗುತ್ತದೆ ಎನ್ನುವುದು ಕೋರ್ಟಿನ ನಿಲುವು. ಹತ್ತು ಲಕ್ಷಕ್ಕೂ ಹೆಚ್ಚು ಜನಸಂಖ್ಯೆ ಹೊಂದಿರುವ ನಗರಗಳಲ್ಲಿ ಈ ವ್ಯವಸ್ಥೆ ಮೊದಲು ಜಾರಿಯಾಗಲಿ ಎಂದು (ನಮ್ಮ ರಾಜ್ಯದ ಎಲ್ಲಾ ಮಹತ್ವದ ಪೊಲೀಸ್ ಠಾಣೆಗಳಲ್ಲಿಯೂ ಅಪರಾಧ ತನಿಖಾ ದಳಗಳು ಈಗಾಗಲೇ ರಚನೆಯಾಗಿರುವುದು ಗಮನಾರ್ಹ) ಆದೇಶಿಸಲಾಗಿದೆ.

ಪೊಲೀಸರ ಮೇಲೆ ಸಾರ್ವಜನಿಕರು ದಾಖಲಿಸುವ ದೂರುಗಳ ವಿಚಾರಣೆಗಾಗಿ 'ಪೊಲೀಸ್ ದೂರು ಪ್ರಾಧಿಕಾರ'ದ ರಚನೆ ಮಾಡಬೇಕೆಂದು ನ್ಯಾಯಾಲಯವು ಆದೇಶಿಸಿದೆ. ಈ ರೀತಿಯ ಪ್ರಾಧಿಕಾರಗಳನ್ನು ರಾಜ್ಯ ಹಾಗೂ ಜಿಲ್ಲಾ ಮಟ್ಟದಲ್ಲಿ ರಚಿಸಬೇಕು. ಜಿಲ್ಲಾ ಮಟ್ಟದ ಪ್ರಾಧಿಕಾರಗಳು ಡಿ.ವೈ.ಎಸ್.ಪಿ. ಹಾಗೂ ಅವರಿಗಿಂತ ಕೆಳಗಿನ ಅಧಿಕಾರಿಗಳ ಮೇಲೆ ಸಾರ್ವಜನಿಕರು ಸಲ್ಲಿಸುವ ದೂರುಗಳನ್ನು ವಿಚಾರಿಸಬೇಕು. ರಾಜ್ಯಮಟ್ಟದ ಪ್ರಾಧಿಕಾರ ಎಸ್‌ಪಿ ಹಾಗೂ ಮೇಲ್ಮಟ್ಟದ ಅಧಿಕಾರಿಗಳ ಮೇಲಿನ ದೂರುಗಳನ್ನು ವಿಚಾರಿಸಬೇಕು. ಜಿಲ್ಲಾ ಮಟ್ಟದ ಪ್ರಾಧಿಕಾರಕ್ಕೆ ನಿವೃತ್ತ ಜಿಲ್ಲಾ ನ್ಯಾಯಾಧೀಶರೊಬ್ಬರು ಮುಖ್ಯಸ್ಥರಾಗಿದ್ದು, ರಾಜ್ಯಮಟ್ಟದ ಪ್ರಾಧಿಕಾರಕ್ಕೆ ನಿವೃತ್ತ ಸುಪ್ರೀಂ ಕೋರ್ಟ್ ಅಥವಾ ಹೈಕೋರ್ಟ್‌ನ ನ್ಯಾಯಮೂರ್ತಿಯವರು ಮುಖ್ಯಸ್ಥರಾಗಿರಬೇಕು. ಜಿಲ್ಲಾ ಹಾಗೂ ರಾಜ್ಯಮಟ್ಟದ ಪ್ರಾಧಿಕಾರಗಳ ಮುಖ್ಯಸ್ಥರ ಹೆಸರುಗಳನ್ನು ರಾಜ್ಯ ಹೈಕೋರ್ಟಿನ ಮುಖ್ಯ ನ್ಯಾಯಮೂರ್ತಿ ಇಲ್ಲವೇ ಅವರಿಂದ ನಾಮನಿರ್ದೇಶನಗೊಂಡ ನ್ಯಾಯಮೂರ್ತಿಯೊಬ್ಬರು ಕಳುಹಿಸಿದ ಪಟ್ಟಿಯಿಂದ ರಾಜ್ಯಸರ್ಕಾರ ಆಯ್ಕೆ ಮಾಡಿಕೊಳ್ಳತಕ್ಕದ್ದು. ಈ ಪ್ರಾಧಿಕಾರಗಳಿಗೆ ಮೂರರಿಂದ ಐದು ಸದಸ್ಯರನ್ನು ನೇಮಿಸಿ ಕೊಳ್ಳಬಹುದಾಗಿದ್ದು. ಈ ಸದಸ್ಯರು ನಿವೃತ್ತಿ ಹೊಂದಿದ ಸರ್ಕಾರಿ ಅಥವಾ ಪೊಲೀಸ್ ಅಧಿಕಾರಿಗಳಾಗಿರಬಹುದು. ಇವರುಗಳು ಪೂರ್ಣಾವಧಿ ಸದಸ್ಯರಾಗಿದ್ದರು. ಇವರಿಗೆ ರಾಜ್ಯ ಸರ್ಕಾರ ಸೂಕ್ತ ಸಂಭಾವನೆ ನೀಡಬೇಕು.

ಜಿಲ್ಲಾ ಮಟ್ಟದ ಹಾಗೂ ರಾಜ್ಯ ಮಟ್ಟದ ದೂರು ಪ್ರಾಧಿಕಾರಿಗಳಿಗೆ ಸಹಾಯ ನೀಡಲು ನಿವೃತ್ತ ಪೊಲೀಸ್ ತನಿಖಾಧಿಕಾರಿಗಳನ್ನು ನೇಮಿಸಿ ಕೊಳ್ಳಬಹುದಾಗಿದೆ. ಪೊಲೀಸ್ ಅಧಿಕಾರಿಗಳ ಮೇಲಿನ ದೂರುಗಳು ಪೊಲೀಸರ ವಶದಲ್ಲಿ ನಡೆದ ಕೊಲೆ, ಭಾರೀ ಹಲ್ಲೆ ಹಾಗೂ ರೇಪ್‌ಗಳಂತಹ ಗುರುತರ ಅಪರಾಧಗಳಾದರೆ ಅವನ್ನು ರಾಜ್ಯ ಪ್ರಾಧಿಕಾರ ವಿಚಾರಿಸಬಹುದು. ಇತರ ರೀತಿಯ ದೂರುಗಳು ಜಿಲ್ಲಾ ಪ್ರಾಧಿಕಾರ ವ್ಯಾಪ್ತಿಗೆ ಬರುತ್ತವೆ. ದೂರುಗಳ ವಿಚಾರಣೆಯ ನಂತರ ತಪ್ಪಿತಸ್ಥ ಪೊಲೀಸ್ ಅಧಿಕಾರಿಯ ಮೇಲೆ ಯಾವ ರೀತಿಯ ಕ್ರಮ ತೆಗೆದುಕೊಳ್ಳಬೇಕೆಂದು ಪ್ರಾಧಿಕಾರ ಮಾಡುವ ಶಿಫಾರಸ್ಸನ್ನು ರಾಜ್ಯ ಸರ್ಕಾರಗಳು ಒಪ್ಪಲೇಬೇಕಾಗಿದೆ.

ಪ್ರತಿಯೊಂದು ರಾಜ್ಯದಲ್ಲಿಯೂ ಪೊಲೀಸ್ ಸಿಬ್ಬಂದಿ ಮಂಡಳಿಯನ್ನು ಸ್ಥಾಪಿಸಲು ಸುಪ್ರೀಂಕೋರ್ಟ್ ಸೂಚಿಸಿದೆ. ಪೊಲೀಸ್ ಅಧಿಕಾರಿಗಳ ವರ್ಗಾವರ್ಗಿ ಹಾಗೂ ಮುಂಬಡ್ತಿ ಈ ಮಂಡಳಿಯ ವ್ಯಾಪ್ತಿಗೆ ಬರುತ್ತದೆ. ಈ ಸಿಬ್ಬಂದಿ ಮಂಡಳಿ ಡಿವೈ.ಎಸ್.ಪಿ. ಹಾಗೂ ಅದಕ್ಕಿಂತ ಹಿರಿಯ ಪೊಲೀಸ್ ಅಧಿಕಾರಿಗಳಿಗೆ ಮಾತ್ರ ಅನ್ವಯ. ಮಂಡಳಿಯ ಅಧ್ಯಕ್ಷತೆಯನ್ನು ಇಲಾಖಾ ಮುಖ್ಯಸ್ಥರಾದ ಡಿಜಿಪಿ. ವಹಿಸಬೇಕಾಗಿದ್ದು, ನಾಲ್ಕು ಜನ ಹಿರಿಯ ಪೊಲೀಸ್ ಅಧಿಕಾರಿಗಳು ಮಂಡಳಿಯ ಸದಸ್ಯರಾಗಿರುತ್ತಾರೆ.

ಈ ಮಂಡಳಿಯು ಅಧಿಕಾರಿಗಳ ವರ್ಗಾವರ್ಗಿ ಹಾಗೂ ಮುಂಬಡ್ತಿ ನೀಡಿಕೆ ಕಾರ್ಯವನ್ನು ನಿರ್ವಹಿಸಬೇಕು. ಹಿರಿಯ ಅಧಿಕಾರಿಗಳಾದ ಎಸ್.ಪಿ. ಹಾಗೂ ಅವರ ಮೇಲ್ಪಟ್ಟವ ಅಧಿಕಾರಿಗಳ ವರ್ಗಾವರ್ಗಿಯ ಬಗ್ಗೆಯೂ ಈ ಮಂಡಳಿ ರಾಜ್ಯ ಸರ್ಕಾರಕ್ಕೆ ಸೂಕ್ತ ಸಲಹೆ ನೀಡಬಹುದು. ಹಾಗೂ ಈ ಸಲಹೆಗಳನ್ನು ರಾಜ್ಯ ಸರ್ಕಾರ ಗಂಭೀರವಾಗಿ ಪರಿಗಣಿಸಬೇಕು ಎಂದು ನ್ಯಾಯಾಲಯ ಆದೇಶಿಸಿದೆ.

ಕಾರ್ಯನಿರ್ವಾಹಕ ಹುದ್ದೆಗಳಾದ ಪೊಲೀಸ್ ಠಾಣಾಧಿಕಾರಿ, ಜಿಲ್ಲಾ ಎಸ್.ಪಿ. ವಲಯದ ಐಜಿಪಿ ಇವರುಗಳು ಕನಿಷ್ಠ ಎರಡು ವರ್ಷದ ಅವಧಿಯವರೆಗೂ ತಮ್ಮ ಜಾಗದಲ್ಲಿ ಕಾರ್ಯ ನಿರ್ವಹಿಸಬೇಕು ಎಂದು ಆದೇಶಿಸಿರುವ ಸುಪ್ರೀಂಕೋರ್ಟ್. ಒಂದು ವೇಳೆ ಇಂತಹ ಅಧಿಕಾರಿಗಳ ಮೇಲೆ ಗುರುತರ ಆಪಾದನೆ ಬಂದರೆ, ಇಲ್ಲವೇ ಅವರು ತಮ್ಮ ಕಾರ್ಯ ನಿರ್ವಹಿಸಲು ಅಶಕ್ತರಾದರೆ, ಅವರನ್ನು ಅವಧಿ ಪೂರ್ವ ವರ್ಗಾವಣೆ ಮಾಡಬಹುದು ಎಂದಿದೆ. ಅಂದರೆ ಒಮ್ಮೆ ಕಾರ್ಯನಿರ್ವಾಹಕ. ಹುದ್ದೆಗಳಿಗೆ ನೇಮಕವಾದ ಅಧಿಕಾರಿಗಳಿಗೆ ಎರಡು ವರ್ಷಗಳ ಅವಧಿಯ ಸೇವೆ ಗಟ್ಟಿ, ವರ್ಗಾವಣೆಯ ಭಯದಿಂದ ಕಾರ್ಯನಿರ್ವಾಹಕ ಅಧಿಕಾರಿಗಳು ಸರಿಯಾಗಿ ಕಾರ್ಯನಿರ್ವಹಿಸುವುದಿಲ್ಲ ಎಂಬ ಅನಿಸಿಕೆ ಈ ತೀರ್ಮಾನಕ್ಕೆ ಕಾರಣವಿರಬಹುದು.

ರಾಜ್ಯ ಪೊಲೀಸ್ ಮುಖ್ಯಸ್ಥರಾದ ಡಿಜಿಪಿ ಅವರಿಗೂ, ಅವರು ಆ ಹುದ್ದೆಯ ಅಧಿಕಾರ ವಹಿಸಿಕೊಂಡ ದಿನದಿಂದ ಎರಡು ವರ್ಷದ ಸೇವಾವಧಿ ನೀಡಬೇಕು ಎಂದಿದೆ ಸುಪ್ರೀಂಕೋರ್ಟ್. ಇದರ ಉದ್ದೇಶವೂ ನಿರ್ಭೀತಿಯ ಅಧಿಕಾರ ಚಲಾವಣೆ ಆಗಿದೆ. ಒಂದು ವೇಳೆ ಡಿಜಿಪಿ ನಿವೃತ್ತಿ ವಯಸ್ಸನ್ನು ತಲುಪಿದರೂ ಅವರ ಎರಡು ವರ್ಷದ ಅಧಿಕಾರವನ್ನು ಮೊಟಕುಗೊಳಿಸುವಂತಿಲ್ಲ. ಒಂದು ವೇಳೆ ಅನಾರೋಗ್ಯದ ಕಾರಣದಿಂದ ಅಥವಾ ಗುರುತರ ಆಪಾದನೆಗಳ ಕಾರಣದಿಂದ ಡಿಜಿಪಿ ಯನ್ನು ಬದಲಾಯಿಸಬೇಕಾದಲ್ಲಿ ಅಂತಹ ಬದಲಾವಣೆಯನ್ನು ಮಾಡಲು ರಾಜ್ಯ ಸರ್ಕಾರಕ್ಕೆ ಅಧಿಕಾರವಿದೆ.

ರಾಜ್ಯ ಪೊಲೀಸ್ ಮುಖ್ಯಸ್ಥರ ಹುದ್ದೆಗೆ ಯಾವ ರೀತಿ ಆಯ್ಕೆ ಪದ್ಧತಿಯನ್ನು ಅನುಸರಿಸಬೇಕೆಂದೂ ಕೋರ್ಟ್ ತಿಳಿಸಿದೆ. ಡಿಜಿಪಿ ಹುದ್ದೆಗಾಗಿ ಅರ್ಹ ಪಟ್ಟಿಯೊಂದನ್ನು ಕೇಂದ್ರ ಲೋಕಸೇವಾ ಆಯೋಗ ತಯಾರಿಸಬೇಕು. ಈ ಪಟ್ಟಿ ತಯಾರಿಸುವಾಗ ಸೇವಾ ಹಿರಿತನ. ಸೇವಾ ರೆಕಾರ್ಡ್, ಗಳಿಸಿದ ಪದಕಗಳು ಹಾಗೂ ಪೊಲೀಸ್ ಇಲಾಖೆಯ

ಮುಖ್ಯಸ್ಥರಾಗಲು ಇರುವ ಅರ್ಹತೆಯನ್ನು ಪರಿಗಣಿಸಬೇಕಾಗುತ್ತದ. ಈ ಪಟ್ಟಿಯಲ್ಲಿರುವ ಒಬ್ಬರನ್ನು ರಾಜ್ಯ ಡಿಜಿಪಿಯಾಗಿ ಸರ್ಕಾರ ನೇಮಕ ಗೊಳಿಸಬಹುದು ಎಂದು ನ್ಯಾಯಾಲಯ ಹೇಳಿದೆ.

ಎಲ್ಲಕ್ಕಿಂತ ಮೊದಲಿಗೆ 'ರಾಜ್ಯ ಸರ್ಕಾರ ರಾಜ್ಯ ಪೊಲೀಸರ ಮೇಲೆ ಅನಗತ್ಯ ಒತ್ತಡ ಅಥವಾ ಪ್ರಭಾವ ಹೇರುವುದನ್ನು ತಪ್ಪಿಸಲು ಹಾಗೂ ರಾಜ್ಯ ಪೊಲೀಸ್ ಸದಾ ಕಾಲವೂ ನಾಡಿನ ಕಾನೂನಿನ ಹಾಗೂ ರಾಜ್ಯಾಂಗದ ಅನ್ವಯವೇ ಕೆಲಸ ಮಾಡಲು ರಾಜ್ಯ ಸರ್ಕಾರಗಳು ರಾಜ್ಯ ಭದ್ರತಾ ಆಯೋಗವನ್ನು ರಚಿಸಲು ಸುಪ್ರೀಂಕೋರ್ಟ್ ನಿರ್ದೇಶಿಸಿದ. ಈ ಆಯೋಗವು ಪೊಲೀಸ್ ಇಲಾಖೆಯ ಕಾರ್ಯವೈಖರಿಯ ಮೇಲ ನಿಗಾ ಇಡಬೇಕು. ಇದರ ನೇತೃತ್ವವನ್ನು ಆಯಾ ರಾಜ್ಯಗಳ ಮುಖ್ಯಮಂತ್ರಿ, ಇಲ್ಲವೇ ಗೃಹ ಮಂತ್ರಿ ವಹಿಸಬೇಕಾಗಿದ್ದು, ರಾಜ್ಯ ಡಿಜಿಪಿ ಆಯೋಗದ ಸದಸ್ಯ ಕಾರ್ಯದರ್ಶಿಯಾಗಿರಬೇಕು. ಆಯೋಗದ ಇತರ ಸದಸ್ಯರ ನೇಮಕಕ್ಕಾಗಿ ರಾಷ್ಟ್ರೀಯ ಮಾನವ ಹಕ್ಕು ಆಯೋಗ/ ರಿಬೆರೊ ಸಮಿತಿ/ ಸೋರಾಬ್ಜಿ ಸಮಿತಿ ಸೂಚಿಸಿರುವ ಮಾದರಿಗಳ ಅನುಕರಣೆ ಮಾಡಬಹುದು ಎಂದು ಹೇಳಿದೆ. ಸ್ಥೂಲವಾಗಿ ಈ ಸಮಿತಿಯ ಸದಸ್ಯರಾಗಲು ಅರ್ಹತೆ ಹೊಂದಿದವರು ಲೋಕಾಯುಕ್ತ ಇಲ್ಲವೇ ನಿವೃತ್ತ ಹೈಕೋರ್ಟ್ ನ್ಯಾಯಮೂರ್ತಿಗಳು; ವಿರೋಧ ಪಕ್ಷದ ನಾಯಕರು, ಮುಖ್ಯ ಕಾರ್ಯದರ್ಶಿ, ರಾಜಕಾರಣಿಗಳಲ್ಲದ ಮೂವರು ಹೆಸರಾಂತ ನಾಗರಿಕರು ಇತ್ಯಾದಿ.

ಇಂಥ ಕ್ರಮಗಳಿಂದ ಪೊಲೀಸ್ ಇಲಾಖೆಯ ಸುಧಾರಣೆ ಸಾಧ್ಯ ಎಂದು ಸುಪ್ರೀಂ ಕೋರ್ಟ್ ಪರಿಗಣಿಸಿದೆ.

# 35

## ಇನ್ನು ಪೊಲೀಸರು ಸುಲಭವಾಗಿ ಬಂಧಿಸುವಂತಿಲ್ಲ

ನಿಮ್ಮ ಮಗಳ ಮದುವೆಯಾಗಿ ಒಂದು ವರ್ಷವೂ ಮುಗಿದಿಲ್ಲ. ತನ್ನ ಗಂಡ, ಅತ್ತೆ, ಮಾವ ತನಗೆ ವರದಕ್ಷಿಣೆ ಕಿರುಕುಳ ನೀಡುತ್ತಿದ್ದಾರೆ ಎಂದ ಆಕೆ ಪೊಲೀಸ್ ಠಾಣೆಗೆ ಹೋಗಿ ದೂರು ದಾಖಲಿಸುತ್ತಾಳೆ. ಹಲವಾರು ದಿನಗಳು ಕಾದರೂ ಆರೋಪಿಗಳ ಬಂಧನವಾಗುವುದಿಲ್ಲ. ನೀವು ಠಾಣೆಗೆ ಹೋಗಿ ಒಂದು 'ಕಾಗ್ನಿಸಬಲ್' ಪ್ರಕರಣದ ಬಗ್ಗೆ ದೂರು ನೀಡಿದರೂ ಇನ್ನೂ ಏಕೆ ಆರೋಪಿಗಳನ್ನು ಬಂಧಿಸಿಲ್ಲ ಎಂದು ಪ್ರಶ್ನಿಸುತ್ತೀರಿ. 'ಸ್ವಾಮಿ, ನಿಮಗೆ ಗೊತ್ತಿಲ್ಲವೇ, ಕಾನೂನು ಬದಲಾಗಿದೆ, ಏಳು ವರ್ಷಕ್ಕಿಂತ ಕಡಿಮೆ ಶಿಕ್ಷೆ ಇರುವ ಅಪರಾಧಗಳ ಆರೋಪವನ್ನು ಹೊತ್ತ ಅಪರಾಧಿಯನ್ನು ಕೂಡಲೇ ಬಂಧಿಸಬೇಕಾಗಿಲ್ಲ' ಎಂದು ಅವರು ಉತ್ತರಿಸುತ್ತಾರೆ. ಕಳ್ಳತನ ಮಾಡಿದ ಆರೋಪ ಹೊತ್ತ ವ್ಯಕ್ತಿಯ ಬಂಧನವೂ ಹೊಸ ಕಾನೂನಿನ ಪ್ರಕಾರ ಸಲೀಸಲ್ಲ ಎಂದು ಪೊಲೀಸ್ ಅಧಿಕಾರಿ ನಿಮಗೆ ತಿಳಿಸುತ್ತಾರೆ. ನೀವು ತಬ್ಬಿಬ್ಬಾಗುತ್ತೀರಿ.

ಕಳೆದ ಸಂಸತ್ ಅಧಿವೇಶನದಲ್ಲಿ ದಂಡ ಪ್ರಕ್ರಿಯಾ ಸಂಹಿತೆ (ಸಿ.ಆರ್.ಪಿ.ಸಿ)ಯ ಹಲವಾರು ಕಲಂಗಳ ತಿದ್ದುಪಡಿಗೆ ಅನುಮೋದನೆ ದೊರೆತಿದೆ. ಈ ತಿದ್ದುಪಡಿಗೆ ರಾಷ್ಟ್ರಪತಿಗಳ ಅಂಕಿತವೂ ಆಗಿದ್ದು, ಇಷ್ಟರಲ್ಲೇ ಹೊಸ ಕಾನೂನು ಜಾರಿ ಆಗಲಿದೆ. ಬಂಧನಕ್ಕೆ ಸಂಬಂಧಿಸಿದಂತೆ ದಂಡ ಪ್ರಕ್ರಿಯಾ ಸಂಹಿತೆಯ ಕಲಂ 41ಕ್ಕೆ ಈ ತಿದ್ದುಪಡಿ ತರಲಾಗಿದ್ದು, ಸಲೀಸಾದ ಬಂಧನಕ್ಕೆ ಕಡಿವಾಣ ಹಾಕಲಾಗಿದೆ.

ಈ ಹಿಂದೆ ಯಾವನೇ ವ್ಯಕ್ತಿ ಮೂರು ವರ್ಷಗಳ ಜೈಲು ಶಿಕ್ಷೆ ನಮೂದಾಗಿರುವಂತಹ ಅಪರಾಧ ಮಾಡಿದ್ದಾನೆ ಎಂಬ ಸಂದೇಹವಿದ್ದಲ್ಲಿ ಅಥವಾ ನಂಬಲರ್ಹ ದೂರು ಬಂದಲ್ಲಿ ಅಥವಾ ಆತ ಅಪರಾಧ ಮಾಡಿದ್ದಾನೆ ಎಂಬ ಮಾಹಿತಿ ಬಂದಿದ್ದಲ್ಲಿ ಆತನನ್ನು ಪೊಲೀಸರು ವಾರಂಟಿಲ್ಲದ ಬಂಧನಕ್ಕೆ ಒಳಪಡಿಸಬಹುದಾಗಿತ್ತು. ಈಗ ಮಾಡಿರುವ ತಿದ್ದುಪಡಿಯ ಅನ್ವಯ ಕೇವಲ ಮೂರು ಸಂದರ್ಭಗಳಲ್ಲಿ ಮಾತ್ರ ಪೊಲೀಸರು ಒಬ್ಬ ವ್ಯಕ್ತಿಯನ್ನು ಬಂಧಿಸಬಹುದು. ಅವು ಯಾವುವೆಂದರೆ: 1. ಒಬ್ಬ ವ್ಯಕ್ತಿ ಪೊಲೀಸ್ ಅಧಿಕಾರಿಯ ಸಮ್ಮುಖದಲ್ಲೇ 'ಕಾಗ್ನಿಸಬಲ್' ಅಪರಾಧ ಮಾಡಬೇಕು. 2. ಏಳು ವರ್ಷಗಳ ತನಕ ಜೈಲು ಶಿಕ್ಷೆ ನೀಡಬಹುದಾದಂತಹ ಅಪರಾಧದಲ್ಲಿ ಒಬ್ಬ ವ್ಯಕ್ತಿ ಪಾಲ್ಗೊಂಡಿದ್ದಾನೆ ಎಂದು ನಂಬಲರ್ಹ ಮಾಹಿತಿ ಪೊಲೀಸರಿಗೆ ದೊರೆತಿರಬೇಕು. ಇಂತಹ ಮಾಹಿತಿ ಇದ್ದರೂ ಈ ಕೆಳಕಾಣಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡ ನಂತರವೇ ಬಂಧಿಸಬಹುದು. ಬಂದ ಮಾಹಿತಿ ಮೇರೆಗೆ ಆರೋಪಿಯು ಆತನ ಮೇಲೆ ಆರೋಪಿಸಿದ ಅಪಾರಧ ಮಾಡಿದ್ದಾನೆ ಎಂದು ಪೊಲೀಸರಿಗೆ ನಂಬಿಕೆ ಬರಬೇಕು. ಆ ಪೊಲೀಸ್ ಅಧಿಕಾರಿಗೆ ಸದರಿ ವ್ಯಕ್ತಿಯ ಬಂಧನ ಅತಿ ಅವಶ್ಯ ಎಂದು ಕಂಡುಬರಬೇಕು. ಕೆಳಕಂಡ ಐದು ಸಂದರ್ಭಗಳಿಂದ ಬಂಧನದ ಅವಶ್ಯಕತೆಯನ್ನು ಪರಿಗಣಿಸಬೇಕು : (1. ಆರೋಪಿಯನ್ನು ಬಂಧಿಸದಿದ್ದರೆ ಆತ ಮುಂದೆಯೂ ಅಪರಾಧ ಮಾಡುತ್ತಾನೆ ಎನ್ನುವ ಸಂದೇಹ ಇರಬೇಕು. 2. ಆ ಆರೋಪಿಯು ಭದ್ರತೆಯ ಕಾರಣದಿಂದ ಹಾಗೂ ಪ್ರಕರಣದ ತೃಪ್ತಿಕರ ತನಿಖೆಗಾಗಿ ಆತನನ್ನು ಬಂಧಿಸುವ ಅನಿವಾರ್ಯತೆ ಇರಬೇಕು. 3. ಆರೋಪಿಯು ಪ್ರಕರಣಕ್ಕೆ ಸಂಬಂಧಿಸಿದ ಸಾಕ್ಷ್ಯಾಧಾರಗಳನ್ನು ನಾಶ ಪಡಿಸುವುದನ್ನು ತಡೆಯಬೇಕಾದ ಅವಶ್ಯಕತೆ ಇರಬೇಕು. 4. ಈ ಆರೋಪಿಯು ಸಾಕ್ಷಿಗಳಿಗೆ ಬೆದರಿಕೆ ಒಡ್ಡಿ ಇಲ್ಲವೇ ಆಮಿಷ ಒಡ್ಡಿ ಕೋರ್ಟಿನಲ್ಲಿ ಸಾಕ್ಷಿಗಳು ಸರಿಯಾಗಿ ಸಾಕ್ಷ್ಯ ನುಡಿಯಲು ಅಡ್ಡಿಪಡಿಸುತ್ತಾನೆ ಎಂಬ ಸಂದೇಹ ಇರಬೇಕು. 5. ಆ ವ್ಯಕ್ತಿಯ ಬಂಧನ ಮಾಡದಿದ್ದರೆ ಅವನು ನ್ಯಾಯಾಲಯಕ್ಕೆ ಹಾಜರಾಗುತ್ತಾನೆ ಎಂಬ ಗ್ಯಾರಂಟಿ ಇರುವುದಿಲ್ಲ ಎಂಬ ಭಾವನೆ ಇರಬೇಕು.)

ಮೇಲ್ಕಂಡ ಐದು ಅವಶ್ಯಕತೆಗಳಿಗೆ ಸಮಾಧಾನಕರವಾದ ಉತ್ತರ ಬಾರದಿದ್ದಲ್ಲಿ ಆರೋಪಿಯನ್ನು ಬಂಧಿಸುವಂತಿಲ್ಲ.

3. ಒಬ್ಬ ವ್ಯಕ್ತಿ ಏಳು ವರ್ಷಕ್ಕಿಂತ ಹೆಚ್ಚಿನ ಜೈಲು ಶಿಕ್ಷೆ ಕೊಡಬಹುದಾದಂತಹ ಅಪರಾಧದಲ್ಲಿ ಭಾಗಿಯಾಗಿದ್ದಾನೆ ಎಂದು ತನಗೆ ಬಂದ ನಂಬಲರ್ಹ ಮಾಹಿತಿ ಮೇರೆಗೆ ಆ ವ್ಯಕ್ತಿ ಅಪರಾಧ ಮಾಡಿದ್ದಾನೆ ಎಂದು ಪೊಲೀಸ್ ಅಧಿಕಾರಿಗೆ ದೃಢ ಭಾವನೆ ಬಂದಾಗ ಅವನನ್ನು ಬಂಧಿಸಬಹುದು.

ಯಾವನೇ ಒಬ್ಬ ಆರೋಪಿಯನ್ನು ಬಂಧಿಸಿದಾಗ ಪೊಲೀಸ್ ಅಧಿಕಾರಿಯು ಅವನನ್ನು ಯಾವ ಕಾರಣಕ್ಕಾಗಿ ಬಂಧಿಸುತ್ತಿದ್ದೇನೆ ಎಂದು ಲಿಖಿತ ರೂಪದಲ್ಲಿ ದಾಖಲಿಸಬೇಕು.

ಏಳು ವರ್ಷಕ್ಕಿಂತ ಕಡಿಮೆ ಜೈಲು ಶಿಕ್ಷೆ ಹೊತ್ತಿರುವ ಅಪರಾಧದ ಆರೋಪಿಯನ್ನು ಬಂಧಿಸಲು ಸಮರ್ಪಕವಾದ ಕಾರಣಗಳಿಲ್ಲದಿದ್ದರೆ ಪೊಲೀಸ್ ಅಧಿಕಾರಿಯು ಅವನನ್ನು

ಬಂಧಿಸುವ ಬದಲು ಅವನಿಗೆ ತನ್ನ ಮುಂದ ಹಾಜರಾಗಲು ಒಂದು ನೋಟಿಸ್ ನೀಡಬಹುದು ಹಾಗೂ ಪ್ರಕರಣದ ತನಿಖೆಯಲ್ಲಿ ಪೊಲೀಸರಿಗ ಸಹಕಾರ ನೀಡಲು ತಾಕೀತು ಮಾಡಬಹುದು.

ಈ ರೀತಿ ನೋಟಿಸ್ ಪಡದ ವ್ಯಕ್ತಿ ಅದನ್ನು ಚಾಚೂ ತಪ್ಪದ ಪಾಲಿಸತಕ್ಕದ್ದು. ಒಂದು ವೇಳೆ ಆತನು ನೋಟಿಸನ್ನು ಪಾಲಿಸಿದರ ಅವನ ಬಂಧನ ಮಾಡತಕ್ಕದ್ದಲ್ಲ. ಆದರ ಯಾವಾಗಲಾದರೂ ಅವನನ್ನು ಬಂಧಿಸಬೇಕಾದರ ಅವಶ್ಯಕತ ಪೊಲೀಸರಿಗ ಕಂಡುಬಂದರ ಅವನನ್ನು ಬಂಧಿಸಬಹುದು. ಒಂದು ವೇಳ ಆ ಆರೋಪಿ ಪೊಲೀಸ್ ನೋಟಿಸಿಗ ಮಾನ್ಯತ ನೀಡದಿದ್ದರೂ ಅವನನ್ನು ಬಂಧಿಸಬಹುದು.

ಪೊಲೀಸರು ಒಬ್ಬ ವ್ಯಕ್ತಿಯನ್ನು ಬಂಧಿಸುವ ಮುನ್ನ ಈ ಕಳಕಂಡ ಅಂಶಗಳನ್ನು ಗಮನಿಸಬೇಕಾಗಿದ : 1. ಬಂಧಿತ ವ್ಯಕ್ತಿ ತನ್ನನ್ನು ಯಾರು ಬಂಧಿಸುತ್ತಿದ್ದಾರಂದು ತಿಳಿಯುವ ಸಲುವಾಗಿ ಪೊಲೀಸ್ ಅಧಿಕಾರಿಯು ತನ್ನ ಹೆಸರಿನ ಫಲಕವನ್ನು ತೊಟ್ಟಿರಬೇಕು. ಅಂದರ ಬಂಧಿಸುವ ಅಧಿಕಾರಿ ಯಾರು ಎಂದು ಆರೋಪಿಗೆ ಸುಲಭವಾಗಿ ಗೊತ್ತಾಗಬೇಕು. 2. ಬಂಧನ ಮಾಡಿದ ಬಗ್ಗೆ ಒಂದು ಜ್ಞಾಪನ ಪತ್ರ ಮೆಮೊ ತಯಾರಿಸಬೇಕು. ಈ ಪತ್ರಕ್ಕ ಬಂಧಿತನಾಗುವ ವ್ಯಕ್ತಿಯ ಕುಟುಂಬದ ಒಬ್ಬ ಸದಸ್ಯ ಸಹಿ ಹಾಕಬೇಕು. ಇಲ್ಲವೇ ಆ ಬಡಾವಣೆಯ ಒಬ್ಬ ಗೌರವಾನ್ವಿತ ನಾಗರಿಕ ಸಹಿ ಹಾಕಬೇಕು. 3. ಬಂಧನಕ್ಕೊಳಗಾದ ವ್ಯಕ್ತಿಯೂ ಜ್ಞಾಪನ ಪತ್ರಕ್ಕೆ ತನ್ನ ಮೇಲು ರುಜು ಹಾಕಬೇಕು. 4. ಪೊಲೀಸ್ ಅಧಿಕಾರಿಯು ಬಂಧಿತ ವ್ಯಕ್ತಿಗ ಆತ ತನ್ನ ಕುಟುಂಬದವರು ಅಥವಾ ಸ್ನೇಹಿತರಿಗ ತನ್ನ ಬಂಧನದ ಸುದ್ದಿ ತಿಳಿಸುವ ಅಧಿಕಾರವಿದ ಎಂದು ತಿಳಿಯಪಡಿಸಬೇಕು. ಒಂದು ವೇಳೆ ಕುಟುಂಬದ ಸದಸ್ಯನೇ ಬಂಧನದ ಜ್ಞಾಪನ ಪತ್ರಕ್ಕೆ ಸಹಿ ಹಾಕಿದರೆ ಈ ತಿಳಿವಳಿಕೆ ನೀಡುವ ಅವಶ್ಯಕತೆ ಇಲ್ಲ.

ಇಷ್ಟೇ ಅಲ್ಲದೆ ಹೊಸದಾಗಿ ಅಳವಡಿಕೆಯಾಗುತ್ತಿರುವ ಕಲಂ 41. ಅನ್ವಯ ರಾಜ್ಯ ಸರ್ಕಾರ ಪ್ರತಿಯೊಂದು ಜಿಲ್ಲೆಯಲ್ಲಿಯೂ ಹಾಗೂ ರಾಜ್ಯ ಮಟ್ಟದಲ್ಲಿಯೂ ಒಂದು ಪೊಲೀಸ್ ಕಂಟ್ರೋಲ್ ರೂಂ ಸ್ಥಾಪಿಸಬೇಕು; ಪ್ರತಿಯೊಂದು ಕಂಟ್ರೋಲ್ ರೂಂ ಹೊರಗಡೆ ಒಂದು ಸೂಚನಾ ಫಲಕವನ್ನು ಹಾಕಬೇಕು.

ಈ ಫಲಕದಲ್ಲಿ ಜಿಲ್ಲೆಯಲ್ಲಿ / ರಾಜ್ಯದಲ್ಲಿ ಬಂಧನಕ್ಕೊಳಪಡಿಸಲಾದ ವ್ಯಕ್ತಿಗಳ ಹೆಸರು ಹಾಗೂ ವಿಳಾಸ, ಬಂಧಿಸಿದ ಪೊಲೀಸ್ ಅಧಿಕಾರಿಯ ಹೆಸರು, ಹುದ್ದೆಯನ್ನು ನಮೂದಿಸಬೇಕು.

ಸಾರ್ವಜನಿಕರ ಮಾಹಿತಿಯ ಸಲುವಾಗಿ ರಾಜ್ಯ ಮಟ್ಟದಲ್ಲಿ ಪೊಲೀಸ್ ಕೇಂದ್ರ ಕಚೇರಿಯಲ್ಲಿ ಯಾರನ್ನು ಬಂಧಿಸಲಾಗಿದೆ ಹಾಗೂ ಯಾವ ಕಾರಣಕ್ಕಾಗಿ ಬಂಧಿಸಲಾಗಿದೆ ಎನ್ನುವ ವಿವರಗಳನ್ನು ಲಭ್ಯ ಇರಬೇಕು.

ಇದಲ್ಲದೆ ಹೊಸದಾಗಿ ಸೇರ್ಪಡೆಗೊಂಡ ಕಲಂ 41 ಡಿ ಅನ್ವಯ ಬಂಧಿತನಾದ ವ್ಯಕ್ತಿಯನ್ನು ಪೊಲೀಸರು ವಿಚಾರಣೆ ಮಾಡುವ ಸಂದರ್ಭದಲ್ಲಿ ಬಂಧಿತ ವ್ಯಕ್ತಿ ತನಗ ಬೇಕಾದ

ನ್ಯಾಯವಾದಿಯನ್ನು ತನ್ನ ಜತೆ ಇಟ್ಟುಕೊಳ್ಳಲು ಅವಕಾಶವಿದೆ. ಇಡೀ ವಿಚಾರಣೆಯ ಉದ್ದಕ್ಕೂ ನ್ಯಾಯವಾದಿ ಜತೆಯಲ್ಲಿ ಇರಬೇಕಾಗಿಲ್ಲ. ಆದರೆ ಸ್ವಲ್ಪ ಸಮಯವಾದರೂ ಇರಲೇಬೇಕು.

ಮಹಿಳೆಯೊಬ್ಬರನ್ನು ಬಂಧನ ಮಾಡಬೇಕಾದಾಗ ಆಕೆಗೆ ಆಕೆಯ ಬಂಧನದ ಬಗ್ಗೆ ಮೌಖಿಕವಾಗಿ ತಿಳಿಸಿದ ನಂತರ ಅವರು ಬಂಧಿತರಾದರು ಎಂದು ಭಾವಿಸತಕ್ಕದ್ದು.

ಒಂದು ವೇಳೆ ಬಂಧಿತಳಾಗಬೇಕಾದ ಮಹಿಳೆಯು ಪರಾರಿ ಆಗುವಂತಹ ಸಂದರ್ಭ ಬಂದರೆ ಆಕೆಯನ್ನು ಬಂಧಿಸಲು ಮಹಿಳಾ ಪೊಲೀಸರೇ ಇರಬೇಕಾಗುತ್ತದೆ. ಪುರುಷರು ಅವಳನ್ನು ಮುಟ್ಟುವಂತಿಲ್ಲ.

ಹೊಸದಾಗಿ ಬರುವ ಕಾಯ್ದೆಯ ಅನ್ವಯ ಒಬ್ಬ ವ್ಯಕ್ತಿ ಬಂಧನಕ್ಕೆ ಒಳಗಾದರೆ ಅವನನ್ನು ಕೂಡಲೇ ನೋಂದಾಯಿತ ವೈದ್ಯರು ಪರೀಕ್ಷಿಸತಕ್ಕದ್ದು. ಒಂದು ವೇಳೆ ಮಹಿಳೆಯು ಬಂಧನವಾಗಿದ್ದರೆ ಆಕೆಯ ದೇಹಸ್ಥಿತಿಯನ್ನು ಮಹಿಳಾ ವೈದ್ಯರೇ ಪರೀಕ್ಷಿಸಬೇಕು. ಇಲ್ಲವೇ ಮಹಿಳಾ ವೈದ್ಯರ ಸುಪರ್ದಿಯಲ್ಲಿ ಪರೀಕ್ಷೆ ನಡೆಯಬೇಕು.

ಬಂಧಿತ ವ್ಯಕ್ತಿಯನ್ನು ವೈದ್ಯಕೀಯ ಪರೀಕ್ಷೆಗೆ ಒಳಪಡಿಸಿದ ನಂತರ ಆ ವೈದ್ಯರು ವೈದ್ಯಕೀಯ ತಪಾಸಣೆ ಬಗ್ಗೆ ವರದಿಯೊಂದನ್ನು ತಯಾರಿಸತಕ್ಕದ್ದು. ಆ ವರದಿಯಲ್ಲಿ ಬಂಧಿತನ ಮೈಮೇಲೆ ಗಾಯಗಳು ಉಂಟಾಗಿವೆಯೇ, ಅವರಿಗೆ 'ಹೊಡೆ'ಯಲಾಗಿದೆಯೇ ಹಾಗೂ ಗಾಯಗಳು ಯಾವ ಸಮಯದಲ್ಲಿ ಆಗಿರಬಹುದು ಎಂಬ ವಿಷಯವನ್ನು ನಮೂದಿಸಬೇಕು.

ಈ ವೈದ್ಯಕೀಯ ತಪಾಸಣೆಯ ವರದಿಯ ಪ್ರತಿಯೊಂದನ್ನು ಬಂಧಿತನಿಗಾಗಲೀ ಅಥವಾ ಆತ ಹೇಳಿದ ಬೇರಾವುದೇ ವ್ಯಕ್ತಿಗಾಗಲೀ ನೀಡತಕ್ಕದ್ದು.

ಯಾವುದಾದರೂ ಒಬ್ಬ ವ್ಯಕ್ತಿಯನ್ನು ಬಂಧಿಸಿದರೆ ಆ ವ್ಯಕ್ತಿಯ ಭದ್ರತೆ ಹಾಗೂ ಆರೋಗ್ಯ ಯಾರ ವಶದಲ್ಲಿ ಆತ ಬಂಧಿತನಾಗಿರುತ್ತಾನೆಯೋ ಆತನ ಜವಾಬ್ದಾರಿಯಾಗಿದೆ. ಈಗಿರುವ ಪದ್ಧತಿಯಂತೆ ಇನ್ನು ಮುಂದೆಯೂ ಕಾಗ್ನಿಸಬಲ್ ಅಲ್ಲದ ಅಪರಾಧ ಮಾಡುವಂತಹ ವ್ಯಕ್ತಿಯನ್ನು ಪೊಲೀಸರು ನ್ಯಾಯಾಲಯದ ಅನುಮತಿಯಿಲ್ಲದೇ ಬಂಧಿಸುವ ಹಾಗಿಲ್ಲ.

ಈ ಮೇಲ್ಕಾಣಿಸಿದ ತಿದ್ದುಪಡಿಗಳು ಜಾರಿಯಾದ ನಂತರ ಪೊಲೀಸರು ಸಾರ್ವಜನಿಕರನ್ನು ಅನವಶ್ಯಕವಾಗಿ ಬಂಧಿಸಿ ಕಿರುಕುಳ ನೀಡುವಂತಹ ಸಂದರ್ಭಗಳು ತಪ್ಪುತ್ತವೆ. ಮಾನವ ಹಕ್ಕುಗಳ ರಕ್ಷಣೆ ಸಮರ್ಥವಾಗಿ ಆಗುತ್ತದೆ ಹಾಗೂ ಕೆಲವು ಪೊಲೀಸರ ದುರ್ವರ್ತನೆಗೆ ಕಡಿವಾಣ ಹಾಕಿದಂತೆ ಆಗುತ್ತದೆ.

# 36

## ಪೇದೆ ಎಂದೇಕೆ ಹೀಗಳೆಯುವಿರಿ ಎನ್ನ ?...

ಕಳೆದ ನವೆಂಬರ್ 26 ರಂದು ಉಗ್ರರು ಮುಂಬೈ ನಗರದ ಸಿಎಸ್‌ಟೀ ರೈಲ್ವೆ ನಿಲ್ದಾಣಕ್ಕೆ ನುಗ್ಗಿ ಹಲ್ಲೆ ನಡೆಸಿದಾಗ ಆ ನಿಲ್ದಾಣದಲ್ಲಿ ಇದ್ದಂತಹ ರೈಲ್ವೆ ಪೊಲೀಸ್ ಕಾನ್‌ಸ್ಟೇಬಲ್‌ಗಳಲ್ಲಿ ಒಬ್ಬ ತನ್ನ ಬಳಿಯಿದ್ದ ಬಂದೂಕಿನಿಂದ ಅವರತ್ತ ಗುಂಡು ಹಾರಿಸಿದರೂ ಪ್ರಯೋಜನವಾಗದೇ ತಾನೇ ಸಾವನ್ನಪ್ಪಿದ. ಉಳಿದ ಪೊಲೀಸ್ ಸಿಬ್ಬಂದಿ ಉಗ್ರರ ಗುಂಡೇಟಿಗೆ ತುತ್ತಾದರು. ಅನಂತರ ಹೇಮಂತ್ ಕರ್ಕರೆ ಮತ್ತಿತರ ಅಧಿಕಾರಿಗಳು ಪ್ರಯಾಣಿಸುತ್ತಿದ್ದ ಕ್ವಾಲಿಸ್ ವಾಹನದ ಮೇಲೆ ಉಗ್ರರು ದಾಳಿ ಮಾಡಿದಾಗ ಅದೇ ವಾಹನದಲ್ಲಿ ಇದ್ದ ಕಾನ್‌ಸ್ಟೇಬಲ್‌ಗಳು ಪ್ರತಿದಾಳಿ ನಡೆಸಲು ಸಾಧ್ಯವೇ ಆಗಲಿಲ್ಲ. ಅಂತೆಯೇ ಮರೀನ್ ಡ್ರೈವ್ ಬಳಿ ಉಗ್ರರಿದ್ದ ಕಾರು ಪೊಲೀಸ್ ಚೆಕ್ ಪೋಸ್ಟ್ ಬಳಿ ನಿಂತು ಪೊಲೀಸರತ್ತ ದಾಳಿ ನಡೆಸಿದಾಗ ಹಲ್ಲೆಗೆ ತುತ್ತಾಗಿದ್ದವರೂ ಪೊಲೀಸರೇ. ಆದರೆ ಅದೃಷ್ಟವಶಾತ್ ಅಲ್ಲಿದ್ದ ಎಎಸ್‌ಐನ ಸಮಯ ಪ್ರಜ್ಞೆಯಿಂದ ಕಸಾಬ್‌ನ ಬಂಧನವಾಗಿ ಒಬ್ಬ ಉಗ್ರ ಅಲ್ಲಿಯೇ ಸತ್ತ.

ಕಳೆದ ವರ್ಷ ನಾನು ಕಿರಿಯ ಪೊಲೀಸ್ ಅಧಿಕಾರಿಗಳ (ಕೇವಲ ಸಿವಿಲ್ ಪೊಲೀಸರು) ಮನಸ್ಥಿತಿ ಅರಿಯಲು ಒಂದು ಸಮೀಕ್ಷೆ ನಡೆಸಿದೆ. 2000 ಮಂದಿ ಪ್ರಶ್ನಾವಳಿಗೆ ಉತ್ತರಿಸಿದರು. ಯಾವುದಾದರೊಂದು ಬೃಹತ್ ಸಮಸ್ಯೆ ನಿಮಗೆದುರಾದಾಗ ನೀವೇನು ಮಾಡುವಿರಿ ಎಂಬ ಪ್ರಶ್ನೆಗೆ ಶೇಕಡ 80 ಮಂದಿ ನಮ್ಮ ಮೇಲಧಿಕಾರಿಗಳ ಆದೇಶವನ್ನು ಪಾಲಿಸುತ್ತೇವೆ ಎಂದು ಉತ್ತರಿಸಿದರು.

ಪೊಲೀಸ್ ಇಲಾಖೆಯ ಸಿಬ್ಬಂದಿ ವರ್ಗದಲ್ಲಿ ಶೇಕಡ. 70 ಕ್ಕಿಂತ ಹೆಚ್ಚಿನವರು ಕಾನ್ಸ್‌ಟೇಬಲ್‌ಗಳೇ. ಈ ಸಿಬ್ಬಂದಿ ಸರಿಯಾಗಿ ಕಾರ್ಯ ನಿರ್ವಹಣೆ ಮಾಡಿದಾಗ ಮಾತ್ರ ಪೊಲೀಸ್ ಇಲಾಖೆ ಉತ್ತಮವಾಗಿ ಕರ್ತವ್ಯ ನಿರ್ವಹಿಸುವುದು ಸಾಧ್ಯ. ಸಮೀಕ್ಷೆಯಲ್ಲಿ ಹೊರಬಂದಂತೆ ಕಾನ್ಸ್‌ಟೇಬಲ್‌ಗಳು ಸ್ವಯಂಪೂರ್ವಕವಾಗಿ ಸ್ವಂತ ವಿವೇಚನೆ ಬಳಸಿ ಯಾವುದೇ ಕೆಲಸವನ್ನು ಮಾಡುವುದಿಲ್ಲ. ಅವರ ಮೇಲಧಿಕಾರಿಗಳ ಆದೇಶವನ್ನು ಮಾತ್ರ ಪಾಲಿಸುತ್ತಾರೆ. ಇತ್ತಿತ್ತಲಾಗಿ ಪೊಲೀಸ್ ನೌಕರಿಗೆ ಸೇರುತ್ತಿರುವವರು ಹೆಚ್ಚಿನ ಪದವಿ ಪಡೆದಿದ್ದರೂ, ಚಿಂತನಶೀಲರೂ, ಬುದ್ಧಿವಂತರೂ ಆಗಿದ್ದರೂ, ತಮ್ಮದೇ ವಿವೇಚನೆಯನ್ನು ಏಕೆ ಉಪಯೋಗಿಸುವುದಿಲ್ಲ ಎನ್ನುವುದು ಕಾಡಬೇಕಾದ ಪ್ರಶ್ನೆಯೇ.

ನನ್ನ ಅಭಿಪ್ರಾಯದಲ್ಲಿ ಇದಕ್ಕೆ ಮುಖ್ಯ ಕಾರಣ ಪೊಲೀಸ್ ಇಲಾಖೆಯ ಸಾಂಸ್ಥಿಕ ಚೌಕಟ್ಟು. ಪಿರಮಿಡ್ ಆಕಾರದಲ್ಲಿ ರಚಿತವಾಗಿರುವ ಈ ಇಲಾಖೆಯಲ್ಲಿ ಮೇಲಿನಿಂದ ಬಂದಂತಹ ಆದೇಶಗಳನ್ನು ಪಾಲನೆ ಮಾಡಿಕೊಂಡು ಬರುವುದೇ ರೂಢಿಗತ. ಶಿಸ್ತಿಗೆ ಹೆಚ್ಚಿನ ಪ್ರಾಧಾನ್ಯ ಇರುವುದರಿಂದ, ಪಿರಮಿಡ್‌ನ ಕೆಳ ಹಂತದಲ್ಲಿರುವ ಅಧಿಕಾರಿಗಳು ತಮ್ಮ ವಿವೇಚನಾ ಸಾಮರ್ಥ್ಯವನ್ನು ಬದಿಗೊತ್ತಿ ಪ್ರಶ್ನೆ ಮಾಡದೇ ಮೇಲಿನಿಂದ ಬಂದ ಆದೇಶ ಪಾಲನೆಯಲ್ಲಿ ತೊಡಗುತ್ತಾರೆ. ಸೈನ್ಯದಲ್ಲಾಗಲೀ, ನೌಕಾದಳದಲ್ಲಾಗಲೀ ಇದೇ ರೀತಿಯ ಸಾಂಸ್ಥಿಕ ಸಂಘಟನೆ ಇರುವುದರಿಂದ ಆ ಸಂಸ್ಥೆಗಳ ಕೆಳಹಂತದ ಸಿಬ್ಬಂದಿಯೂ ಹೀಗೆಯೇ ಕರ್ತವ್ಯ ನಿರ್ವಹಿಸುತ್ತಾರೆ. ಶತ್ರುವನ್ನು ರಣರಂಗದಲ್ಲಿ ಎಂದುರಿಸುವಾಗ ಇಂತಹ ವರ್ತನೆ ಅನಿವಾರ್ಯ ಆದರೆ ಪೊಲೀಸರಿಗೆ ಅನಿವಾರ್ಯವೇ?

ಸಾಂಸ್ಥಿಕ ಚೌಕಟ್ಟಿನಿಂದ ಆಗುವ ಅಡೆ ತಡೆಗಳಿಂದ ಪೊಲೀಸ್ ಸಿಬ್ಬಂದಿವರ್ಗ ಇನ್ನೊಂದು ತೊಂದರೆಯನ್ನು ಅನುಭವಿಸುತ್ತದೆ. ಅದೇನೆಂದರೆ ಕೆಳಹಂತದ ಪೊಲೀಸರ ಬಗ್ಗೆ ಸಮಾಜದಲ್ಲಿ ಇರುವಂತಹ ದೃಷ್ಟಿಕೋನ. ಮಾಧ್ಯಮಗಳ ಪ್ರಭಾವದಿಂದ ಸಾಮಾನ್ಯ ಜನರು ಪೊಲೀಸ್ ಸಿಬ್ಬಂದಿ ವರ್ಗದವರನ್ನು ಬುದ್ಧಿ ಇಲ್ಲದವರು, ಲಂಚಕೋರರು, ವಿವೇಚನಾ ರಹಿತರು, ಹಾಸ್ಯವನ್ನು ಉಂಟು ಮಾಡುವವರು ಎಂದೇ ಭಾವಿಸುತ್ತಾರೆ. ಈ ಭಾವನೆಯಲ್ಲದೆ ಪೊಲೀಸರು ಕ್ರೂರವಾದ ವ್ಯಕ್ತಿಗಳು ಎಂದೂ ತಿಳಿಯುತ್ತಾರೆ. ಈ ಕಾರಣಕ್ಕಾಗಿ ಕೆಳಹಂತದ ಪೊಲೀಸ್ ಸಿಬ್ಬಂದಿಯಲ್ಲಿ ಒಂದು ರೀತಿಯ ಕೀಳರಿಮೆ ಇರುವುದೂ ಕಂಡು ಬರುತ್ತಿದೆ.

ಬಹುತೇಕ ಕಾನ್ಸ್‌ಟೇಬಲ್‌ಗಳು ನೌಕರಿಗೆ ಸೇರಿದಾಗ ಹೆಚ್ಚಿನ ಉತ್ಸಾಹವನ್ನು ಇಟ್ಟು ಕೊಂಡಿರುತ್ತಾರೆ. ಕೆಲಸಕ್ಕೆ ಬಂದು ಸೇರಿದಾಗ ಅವರಿಗೆ ತಾವು ಏನನ್ನಾದರೂ ಸಾಧಿಸಬೇಕೆಂಬ ಹುರುಪು ಇರುತ್ತದೆ. ಆದರೆ ಪೊಲೀಸ್ ಠಾಣೆಗೆ ಬಂದು ಸೇರಿಕೊಂಡಾಗ ಶಿಸ್ತಿನ ಹೆಸರಿನಲ್ಲಿ ಅವರಲ್ಲಿದ್ದ ಎಲ್ಲ ರೀತಿಯ ಸೃಜನಶೀಲತೆ ಮಾಯವಾಗುತ್ತದೆ. ಈಗಲೂ ಕಾನ್ಸ್‌ಟೇಬಲ್‌ಗಳಿಗೆ ಯಾವುದೇ ಪ್ರಕರಣದ ತನಿಖೆ ಜವಾಬ್ದಾರಿ ವಹಿಸುವುದಿಲ್ಲ. ಠಾಣೆಯ ಪಹರೆ, ಗಸ್ತು ತಿರುಗುವುದು, ಟ್ರಾಫಿಕ್ ಡ್ಯೂಟಿ, ಕಾನೂನು ಸುವ್ಯವಸ್ಥೆ ಡ್ಯೂಟಿ ಇತ್ಯಾದಿ ಡ್ಯೂಟಿಗಳಿಗೆ ಮಾತ್ರ ಅವರನ್ನು ನೇಮಿಸಲಾಗುತ್ತಿದೆ. ತಿಂಗಳುಗಟ್ಟಲೆ ಒಂದೇ ರೀತಿಯ ಡ್ಯೂಟಿ ಮಾಡುವ

ಕಾನ್ಸ್‌ಟೇಬಲ್, ಕಾಲಕ್ರಮೇಣ ತನ್ನ ಕರ್ತವ್ಯದಲ್ಲಿ ನಿರಾಸಕ್ತಿ ಹೊಂದುತ್ತಾನೆ. ಒಂದು ವೇಳೆ ಅವನು ಯಾವುದಾದರೂ ಉತ್ತಮ ಕೆಲಸವನ್ನು ಮಾಡಬೇಕೆಂದು ತನ್ನ ಮೇಲಧಿಕಾರಿಗಳಾದ ಪಿಎಸ್‌ಐ, ಇನ್ಸ್‌ಪೆಕ್ಟರ್ ಇತರರಿಗೆ ಸಲಹೆ ಸೂಚನೆಗಳನ್ನು ಕೊಟ್ಟರೂ ನೀನು ಇನ್ನೂ ಚಿಕ್ಕವ, ನಿನಗೆ ಇಲಾಖೆಯ ವಿಚಾರಗೊತ್ತಿಲ್ಲ. ತೆಪ್ಪಗೆ ಕುಳಿತುಕೋ ಎನ್ನುವ ಉತ್ತರವೇ ಅವನಿಗೆ ಬರುತ್ತದೆ. ಈ ಕಾರಣದಿಂದ ತಮ್ಮ ವೃತ್ತಿಯ ಬಗ್ಗೆ ಕಾನ್ಸ್‌ಟೇಬಲ್‌ಗಳು ಕಾಲಕ್ರಮೇಣ ಆಸಕ್ತಿ ಕಳೆದುಕೊಂಡು ಕೇವಲ ಆದೇಶ ಪಾಲನೆಗಾಗಿಯೇ ತಮ್ಮ ಕೆಲಸವನ್ನು ಸೀಮಿತಗೊಳಿಸುತ್ತಾರೆ.

ಕಿರಿಯ ಪೊಲೀಸ್ ಅಧಿಕಾರಿಗಳ ಮನೋಸ್ಥಿತಿಯ ಸಮೀಕ್ಷೆಯ ವಿವರಗಳನ್ನು ಕರ್ನಾಟಕ ಪೊಲೀಸ್ ವೆಬ್‌ಸೈಟ್ www.ksp.gov.in ನಲ್ಲಿ ನೋಡಬಹುದು. ಬಹುತೇಕ ಅಧಿಕಾರಿಗಳು ತಮ್ಮ ಕೆಲಸಗಳಲ್ಲಿ ನಿರಾಸಕ್ತಿ ಹೊಂದಿರುವುದು ವ್ಯಕ್ತವಾಗಿದೆ. ಹೆಚ್ಚಿನ ಕಾನ್ಸ್‌ಟೇಬಲ್‌ಗಳು ತಮಗೆ ಸರಿಯಾದ ವಿಶ್ರಾಂತಿ ಇಲ್ಲ, ರಜೆ ಇತ್ಯಾದಿ ಸವಲತ್ತುಗಳು ದೊರೆಯುತ್ತಿಲ್ಲ. ತಾವು ಮಾಡುತ್ತಿರುವ ಕಾರ್ಯಕ್ಕೆ ತಕ್ಕಂತೆ ಸಂಬಳ ದೊರೆಯುತ್ತಿಲ್ಲ ಇತ್ಯಾದಿ ದೂರಿದ್ದಾರೆ.

ತಮ್ಮ ವ್ಯಕ್ತಿಯಲ್ಲಿ ಇರುವಂತಹ ಕೊರತೆಗಳನ್ನು ಪಟ್ಟಿ ಮಾಡಿದ ಕಾನ್ಸ್‌ಟೇಬಲ್‌ಗಳು, 'ಸಾರ್ವಜನಿಕರು ತಮ್ಮನ್ನು ಕೀಳಾಗಿ ಕಾಣುತ್ತಾರೆ. ಇಲ್ಲಿ ರಾಜಕೀಯ ಹಸ್ತಕ್ಷೇಪ ಇದೆ' ಎಂದು ಹೇಳುತ್ತಾರೆ. ಬಹಳಷ್ಟು ಸಿಬ್ಬಂದಿ ವರ್ಗ ತಾವು ಪ್ರತಿದಿನವೂ 10-16 ಗಂಟೆಗಳ ಕಾಲ ದುಡಿಯುತ್ತೇವೆಂದು ಹೇಳಿ ತಾವು ಮಾಡುತ್ತಿರುವ ಕೆಲಸದಲ್ಲಿ ತಮಗೆ ತೃಪ್ತಿಯಿಲ್ಲ ಎನ್ನುತ್ತಾರೆ. ಇಲಾಖೆಯಲ್ಲಿರುವ ಲಂಚಗುಳಿತನದ ಬಗ್ಗೆಯೂ ಬೇಸರ ಇದೆ ಎಂಬ ವಿಚಾರ ವ್ಯಕ್ತವಾಗಿದೆ.

ಇಲಾಖೆಯ ಬಹುತೇಕ ಸಿಬ್ಬಂದಿಗೆ ತಾವು ಮಾಡುವ ಕೆಲಸದಲ್ಲಿ ತೃಪ್ತಿ ಇಲ್ಲದಿದ್ದರೆ ಇಲಾಖೆ ಪ್ರಗತಿ ಸಾಧಿಸಲು ಹೇಗೆ ಸಾಧ್ಯ? ಹಾಗಾಗಿ ನಮ್ಮ ಪೊಲೀಸ್ ಕಾನ್ಸ್‌ಟೇಬಲ್‌ಗಳನ್ನು ಸಬಲೀಕರಣ ಮಾಡುವ ಅಗತ್ಯ ಈ ಸಂದರ್ಭದಲ್ಲಿ ಹೆಚ್ಚಾಗಿ ಕಾಣುತ್ತದೆ.

ಪೊಲೀಸ್ ಸುಧಾರಣೆ ಬಗ್ಗೆ ಸೋಲಿಸೊರಾಬ್ಜಿ ಸಮಿತಿಯ ವರದಿಯಲ್ಲಿಯೂ ಪೊಲೀಸ್ ಇಲಾಖೆಯ ಕೆಳಹಂತದ ಸಿಬ್ಬಂದಿ ವರ್ಗದ ಸಬಲೀಕರಣ ಅವಶ್ಯಕತೆಯನ್ನು ಎತ್ತಿ ತೋರಿಸಿದೆ. ಈ ಸಮಿತಿಯ ವರದಿಯಲ್ಲಿ ಹೊಸದಾದ ಸಲಹೆಯೊಂದನ್ನು ನೀಡಲಾಗಿದೆ. ಅದರಂತೆ ಕಾನ್ಸ್‌ಟೇಬಲ್ ಎನ್ನುವ ಪದವನ್ನು ತೆಗೆದು ಹಾಕಿ ಅದರ ಬದಲಾಗಿ ಸಿವಿಲಿಯನ್ ಪೊಲೀಸ್ ಅಧಿಕಾರಿ ಗ್ರೇಡ್-1 ಹಾಗೂ ಸಿವಿಲಿಯನ್ ಪೊಲೀಸ್ ಅಧಿಕಾರಿ ಗ್ರೇಡ್-2 ಎಂದು ಕಾನ್ಸ್‌ಟೇಬಲ್ ಮತ್ತು ಹೆಡ್ ಕಾನ್ಸ್‌ಟೇಬಲ್‌ಗಳನ್ನು ಸಂಬೋಧಿಸಬಹುದು.

ಈ ಸಮಿತಿ ಸಿವಿಲಿಯನ್ ಪೊಲೀಸ್ ಅಧಿಕಾರಿ ಗ್ರೇಡ್-1 ಆಯ್ಕೆಗೆ ಪಿಯುಸಿ ಪರೀಕ್ಷೆಯಲ್ಲಿ ಪಾಸಾಗಿರುವ ವ್ಯಕ್ತಿಗಳನ್ನು ಪಾರದರ್ಶಕ ನೇಮಕಾತಿ ಪ್ರಕ್ರಿಯೆಯ ಮೂಲಕ ನೇಮಿಸಿಕೊಂಡು ಅವರಿಗೆ ಪೊಲೀಸ್ ತರಬೇತಿ ಕಾಲೇಜಿನಲ್ಲಿ ಮೂರು ವರ್ಷಗಳ ತರಬೇತಿಯನ್ನು ನೀಡಿ ನಂತರ ಅವರಿಗೆ ಬ್ಯಾಚುಲರ್ ಆಫ್ ಪೊಲೀಸ್ ಸ್ಟಡೀಸ್ ಎನ್ನುವ ಪದವಿಯನ್ನು ನೀಡಿ ಠಾಣೆಗೆ ನೇಮಕ ಮಾಡಿಕೊಳ್ಳಬೇಕು ಎಂದು ಸೂಚಿಸಿದೆ. ಸಿವಿಲಿಯನ್

ಪೊಲೀಸ್ ಅಧಿಕಾರಿ ಗ್ರೇಡ್-1 ಹುದ್ದೆಗೆ ಪೊಲೀಸ್ ಅಧಿಕಾರಿ ಗ್ರೇಡ್-1 ಹುದ್ದೆಯಿಂದ ಪದೋನ್ನತಿ ಕೊಡಬೇಕೆಂದು ತಿಳಿಸಿದೆ. ಇದರಿಂದ ಕಾನ್ಸ್‌ಟೇಬಲ್‌ಗಳ ವೃತ್ತಿನೈಪುಣ್ಯ ಹೆಚ್ಚುತ್ತದೆ ಎನ್ನುವುದು ಸಮಿತಿಯ ಅಭಿಪ್ರಾಯ.

ಹಾಲಿ ಇರುವ ಪೊಲೀಸ್ ವ್ಯವಸ್ಥೆಯಲ್ಲಿ ಕಾನ್ಸ್‌ಟೇಬಲ್‌ಗಳಿಗೆ ಯಾವುದೇ ರೀತಿಯ ತನಿಖೆಯನ್ನು ಮಾಡಲು ಅವಕಾಶವಿಲ್ಲ. ಹೀಗಾಗಿ ಬಹುತೇಕ ಮಂದಿ ಕಾನ್ಸ್‌ಟೇಬಲ್‌ಗಳು ಬೀಟ್, ಠಾಣಾ ಪಹರೆ, ಸಮನ್ಸ್ ಜಾರಿ ಇತ್ಯಾದಿ ಕರ್ತವ್ಯಗಳನ್ನಷ್ಟೇ ಮಾಡುತ್ತಿದ್ದಾರೆ. ಈ ರೀತಿಯ ಕರ್ತವ್ಯಗಳು ಪುನರಾವರ್ತನೆ ಆಗುವಂತಹ ಕೆಲಸಗಳಾದ್ದರಿಂದ ಕೆಲವೇ ವರ್ಷಗಳಲ್ಲಿ ಎಂತಹ ಚುರುಕಾದ ವ್ಯಕ್ತಿ ಕೂಡ ತನ್ನ ವೃತ್ತಿಯಲ್ಲಿ ಆಸಕ್ತಿ ಕಳೆದುಕೊಳ್ಳುತ್ತಾನೆ. ಹಿರಿಯ ಪೊಲೀಸ್ ಅಧಿಕಾರಿಗಳು ಕಾನ್ಸ್‌ಟೇಬಲ್‌ಗಳಿಗೆ ಅವರವರ ಬುದ್ಧಿಮತ್ತೆಗೆ ತಕ್ಕಂತೆ ಕರ್ತವ್ಯಗಳನ್ನು ಕೊಡಲು ಯೋಚಿಸಬಹುದಾಗಿದೆ. ಠಾಣೆಗೆ ಬಂದಂತಹ ಅರ್ಜಿಗಳ ವಿಚಾರಣೆ, ಸಣ್ಣಪುಟ್ಟ ಕ್ರಿಮಿನಲ್ ಕೇಸುಗಳ ತನಿಖೆ, (ಈ ರೀತಿಯ ತನಿಖೆಯನ್ನು ಮಾಡಲು ದಂಡ ಪ್ರಕ್ರಿಯಾ ಸಂಹಿತೆಯ ಪರಿಷ್ಕರಣೆ ಅವಶ್ಯಕತೆ ಇದೆ). ಮಹಜರ್ ಮಾಡುವುದು ಇತ್ಯಾದಿ ಕೆಲಸಗಳಿಗೆ ನೇಮಿಸಬಹುದಾಗಿದೆ. ಹಾಗಾದಾಗ ವೃತ್ತಿಯಲ್ಲಿ ವೈವಿಧ್ಯ ಬಂದು ಕಾನ್ಸ್‌ಟೇಬಲ್‌ಗಳು ತಮ್ಮ ಕೆಲಸವನ್ನು ಪ್ರೀತಿಸುವಂತಾಗುತ್ತದೆ.

ತಮ್ಮ ವೃತ್ತಿಯಲ್ಲಿ ಹೆಚ್ಚಿನ ನೈಪುಣ್ಯ ತೋರಿಸುವ ಕಾನ್ಸ್‌ಟೇಬಲ್‌ಗಳಿಗೆ ಸೂಕ್ತ ಪದೋನ್ನತಿಯನ್ನು ನೀಡುವ ಅವಶ್ಯಕತೆಯೂ ಇದೆ. ಈಗಿನ ವ್ಯವಸ್ಥೆಯಲ್ಲಿ ಸುಮಾರು 20 ವರ್ಷ ದುಡಿದರೂ ಒಬ್ಬ ಕಾನ್ಸ್‌ಟೇಬಲ್ ಎಚ್.ಸಿ. ಹುದ್ದೆಗೆ ಹೋಗಲು ಸಾಧ್ಯವಾಗುತ್ತಿಲ್ಲ. ಒಬ್ಬ ವ್ಯಕ್ತಿ ಯಾವುದೇ ಹುದ್ದೆಗೆ ಸೇರಿದರೂ ತನ್ನ ವೃತ್ತಿಯ ಅವಧಿಯಲ್ಲಿ ಕಡಿಮೆಯೆಂದರೆ ಮೂರು ಬಡ್ತಿ ಪಡೆಯಬೇಕು. ಹೀಗಾದಾಗ ಮಾತ್ರ ಆತ ಸರಿಯಾಗಿ ಕರ್ತವ್ಯವನ್ನು ನಿರ್ವಹಿಸಬಲ್ಲನೆಂದು ಎಲ್ಲರೂ ತಿಳಿದಿರುವಾಗ, ಪೊಲೀಸ್ ಇಲಾಖೆಗೆ ಸೇರಿದ ಹಲವಾರು ಕಾನ್ಸ್‌ಟೇಬಲ್‌ಗಳು ತಮ್ಮ ಇಡೀ ವೃತ್ತಿ ಜೀವನದಲ್ಲಿ ಕೇವಲ ಒಂದೇ ಒಂದು ಅಥವಾ ಹೆಚ್ಚೆಂದರೆ ಎರಡು ಬಡ್ತಿ ಕಂಡು ನಿವೃತ್ತಿ ಹೊಂದುವುದು ಸರ್ವೇ ಸಾಮಾನ್ಯವಾಗಿದೆ. ಕಾನ್ಸ್‌ಟೇಬಲ್‌ಗಳಲ್ಲಿ ವೃತ್ತಿಯ ಬಗ್ಗೆ ನಿರಾಸಕ್ತಿ ಇರುವುದಕ್ಕೆ ಇದೂ ಒಂದು ಕಾರಣ.

ಕಾನ್ಸ್‌ಟೇಬಲ್‌ಗಳ ನೇಮಕಾತಿ ಹಾಗೂ ತರಬೇತಿಯ ಬಗ್ಗೆ ಹೆಚ್ಚಿನ ಒತ್ತನ್ನು ನೀಡುವುದು ಅವಶ್ಯವಾಗಿದೆ. ಮಾನವ ಸಂಪನ್ಮೂಲದ ಕೊರತೆಯನ್ನು ಎದುರಿಸುತ್ತಿರುವ ಹಲವಾರು ರಾಜ್ಯಗಳು ಕಾನ್ಸ್‌ಟೇಬಲ್‌ಗಳನ್ನು ಹಂತ ಹಂತವಾಗಿ ವೃತ್ತಿಪರ ತರಬೇತಿಗಳಿಗೆ ಕಳುಹಿಸುತ್ತಿಲ್ಲ. ಕೆಲಸಕ್ಕೆ ಸೇರಿದಾಗ ಒಮ್ಮೆ ಮೂಲ ತರಬೇತಿ ಮುಗಿಸಿದ ಕಾನ್ಸ್‌ಟೇಬಲ್ ತಾನು ನಿವೃತ್ತಿ ಆಗುವವರೆಗೂ ಇನ್ನೊಂದು ತರಬೇತಿಯನ್ನು ಹೊಂದುವುದಿಲ್ಲ. (ನಾವು ನಡೆಸಿದ ಸಮೀಕ್ಷೆಯಲ್ಲಿ ಹೊರಹೊಮ್ಮಿದ ಇನ್ನೊಂದು ಮುಖ್ಯ ಅಂಶವೆಂದರೆ ಬಹುತೇಕ ಕಾನ್ಸ್‌ಟೇಬಲ್‌ಗಳು ತಮ್ಮ ತರಬೇತಿಯ ಅವಧಿಯನ್ನು ತಮ್ಮ ವೃತ್ತಿ ಜೀವನದ ಉತ್ತಮ ಅವಧಿಗಳಲ್ಲಿ ಒಂದು ಎಂದು ಹೇಳಿದ್ದಾರೆ). ಕಾಲ ಬದಲಾಗುತ್ತಾ ಬಂದಂತೆಲ್ಲ ಪೊಲೀಸ್ ಇಲಾಖೆ ಹೊಸ ಹೊಸ ರೀತಿಯ

ಸವಾಲುಗಳನ್ನು ಎದುರಿಸಬೇಕಾಗಿದೆ. ಇವನ್ನು ಎದುರಿಸಲು ಅತಿ ಮುಖ್ಯವಾದುದು ತರಬೇತಿಯೇ. ಹೀಗಾಗಿ ಪ್ರತಿ ಮೂರು ವರ್ಷಗಳಿಗೊಮ್ಮೆ ಪ್ರತಿಯೊಬ್ಬ ಕಾನ್ಸ್‌ಟೇಬಲ್‌ನನ್ನು ತರಬೇತಿಗೆ ಕಳುಹಿಸಬೇಕು. ತರಬೇತಿಯಿಂದ ವೃತ್ತಿ ನೈಪುಣ್ಯ ವೃದ್ಧಿಸಿಕೊಂಡು ಕಾನ್ಸ್‌ಟೇಬಲ್‌ಗಳು ಹೊಸ ರೀತಿಯ ಸವಾಲುಗಳನ್ನು ಎದುರಿಸಲು ಸನ್ನದ್ಧರಾಗುತ್ತಾರೆ.

ಕಾನ್ಸ್‌ಟೇಬಲ್‌ಗಳ ಸಬಲೀಕರಣವಾದಾಗ ಮಾತ್ರ ಇಲಾಖೆಯ ಸಬಲೀಕರಣವಾದಂತೆ. ಈ ನಿಟ್ಟಿನಲ್ಲಿ ಕೂಡಲೇ ಕಾರ್ಯ ಪ್ರವೃತ್ತವಾಗಬೇಕಾದ ಕಾಲ ಈಗ ಸನ್ನಿಹಿತ.

# 37

## ಪೊಲೀಸರೇಕೆ ಹತಾಶರಾಗುತ್ತಿದ್ದಾರೆ

ಕಳೆದ ಕೆಲವು ದಿನಗಳಲ್ಲಿ ರಾಜ್ಯದ ಬೇರೆ ಬೇರೆ ಕಡೆಗಳಲ್ಲಿ ಎರಡು ಘಟನೆಗಳು ನಡೆದವು. ಮೈಸೂರಿನಲ್ಲಿ ರಾಜ್ಯ ಮೀಸಲು ಪಡೆಗೆ ಸೇರಿದ ಕಾನ್ಸ್‌ಟೇಬಲ್ ಒಬ್ಬ ತನ್ನ ಮೇಲಾಧಿಕಾರಿಯನ್ನು ಗುಂಡಿಟ್ಟು ಕೊಂದು ತಾನೂ ಆತ್ಮಹತ್ಯೆ ಮಾಡಿಕೊಂಡ. ಬೆಂಗಳೂರಿನ ಕೇಂದ್ರ ಮೀಸಲು ಪಡೆ ಯೋಧನೊಬ್ಬ ತನ್ನ ಬಂದೂಕಿನಿಂದ ತಾನೇ ಗುಂಡು ಹಾರಿಸಿಕೊಂಡು ಆತ್ಮಹತ್ಯೆ ಮಾಡಿಕೊಂಡ. ಈ ರೀತಿಯ ಘಟನೆಗಳು ನಮ್ಮ ರಾಜ್ಯದಲ್ಲಿ ಗಮನೀಯವಾಗಿ ನಡೆಯದೇ ಹೋದರೂ ಕೇಂದ್ರ ಪೊಲೀಸ್ ಪಡೆಗಳಲ್ಲಿ ಹಾಗೂ ಬೇರೆ ಬೇರೆ ರಾಜ್ಯಗಳಲ್ಲಿ ಇಂತಹ ಘಟನೆಗಳು ತಿಂಗಳಿಗೆ ಒಂದಾದರೂ ಘಟಿಸುತ್ತವೆ.

ಪೊಲೀಸರೇಕೆ ತಮ್ಮ ಹಿರಿಯ ಅಧಿಕಾರಿಗಳನ್ನು ಹತ್ಯೆಗೈಯಲು ಹೋಗುತ್ತಾರೆ ಎಂದು ಯೋಚಿಸಿದರೆ ತಟ್ಟನೆ ಬರುವ ಉತ್ತರ ಮೇಲಾಧಿಕಾರಿಗಳ ಕಿರುಕುಳದಿಂದ ಬೇಸತ್ತು ಈ ರೀತಿ ಮಾಡಿರಬಹುದು ಎನ್ನುವುದು. ಒಂದು ಮಟ್ಟಿಗೆ ಈ ಉತ್ತರ ಅಕ್ಷರಶಃ ಸತ್ಯ. ಶೇಕಡಾ 75ಕ್ಕಿಂತ ಹೆಚ್ಚು ಕಾನ್ಸ್‌ಟೇಬಲ್‌ಗಳೇ ಇರುವ ನಮ್ಮ ದೇಶದ ಪೊಲೀಸ್ ದಳಗಳಲ್ಲಿ ಹೆಚ್ಚಿನ ತುಳಿತಕ್ಕೆ ಒಳಗಾಗುವವರು ಕಾನ್ಸ್‌ಟೇಬಲ್‌ಗಳೇ.

ಕಿರಿಯ ಪೊಲೀಸ್ ಅಧಿಕಾರಿಗಳ ಕರ್ತವ್ಯದಲ್ಲಿ ಇರುವಂತಹ ಒತ್ತಡವನ್ನು ಸಾಮಾನ್ಯ ಜನರು ಊಹಿಸಲೂ ಅಸಾಧ್ಯ. ಸಾಧಾರಣವಾಗಿ ಇವರು ವರ್ಷಕ್ಕೆ 350ಕ್ಕಿಂತ ಹೆಚ್ಚು ದಿನ ಪ್ರತಿದಿನವೂ 12 ಗಂಟೆಗಿಂತ ಹೆಚ್ಚು ಕಾಲ ಕೆಲಸ ಮಾಡುತ್ತಾರೆ. ಹಲವಾರು ಕಾನ್ಸ್‌ಟೇಬಲ್‌ಗಳನ

ವಸತಿ ಸೌಕರ್ಯ ಇಲ್ಲದೇ ಇರುವುದರಿಂದ ಅವರು ತಾವಿರುವ ಬಾಡಿಗೆ ಮನೆಗಳಿಂದ ತಮ್ಮ ಕೆಲಸ ಸ್ಥಳಕ್ಕೆ ಬಂದು ಹೋಗಲು ಕಡಿಮೆಯೆಂದರೂ 2–3 ಗಂಟೆ ವ್ಯಯಿಸುತ್ತಾರೆ. ಪ್ರಯಾಣಿಸುವ ಸಮಯವನ್ನು ಅವರು ಕೆಲಸ ಮಾಡುವ ವೇಳೆಗೆ ಜೋಡಿಸಿದರೆ ಪ್ರತಿ ಕಾನ್ಸ್ಟೇಬಲ್ ದಿನಕ್ಕೆ 15 ಗಂಟೆಗಳಿಗಿಂತ ಹೆಚ್ಚು ಕಾಲ ದುಡಿಯುತ್ತಾನೆ.

ಇತ್ತೀಚೆಗೆ ನಾನು ನಮ್ಮ ರಾಜ್ಯದ 2000 ಕಿರಿಯ ಪೋಲೀಸ್ ಅಧಿಕಾರಿಗಳ ಕಾರ್ಯಕ್ಷಮತೆಯ ಬಗ್ಗೆ ಸಮೀಕ್ಷೆಯೊಂದನ್ನು ನಡೆಸಿದೆ. ಸಮೀಕ್ಷೆಯಲ್ಲಿ ಪಾಲ್ಗೊಂಡ ಬಹುಪಾಲು ಪೋಲೀಸ್ ಸಿಬ್ಬಂದಿಗಳು ತಮಗೆ ಕೆಲಸದ ಒತ್ತಡ ಅತಿ ತೀವ್ರ ಎಂದಿದ್ದಾರೆ. ಸಾಮಾನ್ಯವಾಗಿ ಪೋಲೀಸ್ ಇಲಾಖೆಯಲ್ಲಿ ಖಾಲಿ ಇರುವ/ಖಾಲಿ ಆಗುವ ಹುದ್ದೆಗಳನ್ನು ಆಗಿಂದಾಗ್ಗ ತುಂಬದೇ ಇರುವುದರಿಂದ [ಕರ್ನಾಟಕ ಇದಕ್ಕೆ ಹೊರತಾಗಿದೆ] ಒಬ್ಬ ಕಾನ್ಸ್ಟೇಬಲ್ ಕಡಿಮೆಯೆಂದರೆ ಇಬ್ಬರು ಕಾನ್ಸ್ಟೇಬಲ್‌ಗಳ ಕರ್ತವ್ಯ ನಿರ್ವಹಿಸಬೇಕಾದ ಅನಿವಾರ್ಯತೆ ತಲೆದೋರಿದೆ. ಸಿಬ್ಬಂದಿ ಕೊರತೆಯ ಕಾರಣದಿಂದ ಕಾನ್ಸ್ಟೇಬಲ್‌ಗಳಿಗೆ ವಾರದ ರಜ. ಹಾಗೂ ಬೇರೆ ತರಹದ ರಜೆ ಸೌಲಭ್ಯಗಳು ದೊರೆಯದೇ ಹೆಚ್ಚಿನ ಕಾಲ ಅವರುಗಳು ಕುಟುಂಬದ ಸದಸ್ಯರ ಜತೆ ಕಾಲ ಕಳೆಯದೇ ಪೋಲೀಸ್ ಠಾಣೆಯಲ್ಲಿಯೇ ಕಾಲ ಕಳೆಯಬೇಕಾಗಿದೆ.

ಒಬ್ಬ ಕಾನ್ಸ್ಟೇಬಲ್ ಯಾವ ರೀತಿ ಕೆಲಸ ಮಾಡುತ್ತಾನೆ ಹಾಗೂ ಕೆಲಸದಲ್ಲಿ ಆತನಿಗೆ ಯಾವ ರೀತಿ ಒತ್ತಡ ಬರುತ್ತದೆ ಎನ್ನುವ ಬಗ್ಗೆ ಸಮಾಜ ಯೋಚಿಸುವುದಿಲ್ಲ. ಬೆಂಗಳೂರಿನ ಒಬ್ಬ ಟ್ರಾಫಿಕ್ ಕಾನ್ಸ್ಟೇಬಲ್‌ನ ಉದಾಹರಣೆಯನ್ನೇ ತೆಗೆದುಕೊಳ್ಳೋಣ. ಈ ವ್ಯಕ್ತಿ ಕಡಿಮೆಯೆಂದರೆ ದಿನಕ್ಕೆ 8 ಗಂಟೆಗಳ ಕಾಲ ಧೂಳು ಕುಡಿಯುತ್ತಾ, ವಾಹನಗಳ ಹೊಗೆಯನ್ನು ಸೇವಿಸುತ್ತಾ, ವಾಹನಗಳಿಂದ ಉಂಟಾಗುವ ಶಬ್ದ ಮಾಲಿನ್ಯವನ್ನು ಸಹಿಸುತ್ತಾ, ಚಳಿ, ಮಳೆ, ಬಿಸಿಲೆನ್ನದೆ ಕಾರ್ಯನಿರ್ವಹಿಸುತ್ತಿರುತ್ತಾನೆ. ದೈಹಿಕ ಹಾಗೂ ಮಾನಸಿಕವಾಗಿ ಎಷ್ಟೇ ಧೃಢವಾಗಿರುವ ವ್ಯಕ್ತಿಯಾದರೂ 5 ಗಂಟೆಗಳ ಕಾಲ ಟ್ರಾಫಿಕ್ ಜಂಕ್ಷನ್ ಒಂದರಲ್ಲಿ ಕೆಲಸ ಮಾಡಿದರೆ ಆತನ ತಲೆ ಚಿಟ್ಟು ಹಿಡಿಯುತ್ತದೆ. ಸುಮಾರು 15 ವರ್ಷಗಳ ಹಿಂದೆ ನಿಮ್ಹಾನ್ಸ್ ಸಂಸ್ಥೆಯು ಬೆಂಗಳೂರು ಹಾಗೂ ಹುಬ್ಬಳ್ಳಿ–ಧಾರವಾಡ ನಗರಗಳಲ್ಲಿ ಕಾನ್ಸ್ಟೇಬಲ್‌ಗಳಿಗೆ ಯಾವ ರೀತಿಯ ಒತ್ತಡ ಬರುತ್ತದೆ ಎನ್ನುವ ಬಗ್ಗೆ ಸಮೀಕ್ಷೆಯೊಂದನ್ನು ನಡೆಸಿ, ಟ್ರಾಫಿಕ್ ಕಾನ್ಸ್ಟೇಬಲ್‌ಗಳು ಅತಿ ಹೆಚ್ಚು ಒತ್ತಡಕ್ಕೆ ಒಳಗಾಗುವವರು ಎಂಬ ತೀರ್ಮಾನಕ್ಕೆ ಬಂದು ಈ ಒತ್ತಡದಿಂದಾಗಿ ಅವರುಗಳು ನಾನಾ ವಿಧವಾದ ಕಾಯಿಲೆಗಳಿಗೆ ತುತ್ತಾಗುತ್ತಾರೆ ಎಂದು ದಾಖಲಿಸಿದೆ.

ಇನ್ನು ರಿಸರ್ವ್ ಪೋಲೀಸರ ಕಷ್ಟವೇ ಬೇರೆ ತರಹ. ಇವರುಗಳು ದಿನಗಟ್ಟಲೆ, ವಾರಗಟ್ಟಲೆ ಕೆಲವೊಮ್ಮೆ ತಿಂಗಳುಗಟ್ಟಲೆ ಕಾನೂನು ಸುವ್ಯವಸ್ಥೆ ಸೂಕ್ಷ್ಮವಾಗಿ ಇರುವಂತಹ ಪ್ರದೇಶದಲ್ಲಿ ನಿಯುಕ್ತಿಗೊಳ್ಳುತ್ತಾರೆ. ಎರಡು ಗುಂಪುಗಳ ನಡುವೆ ಗಲಭೆಯಾದರೆ ಕೂಡಲೇ ಮಧ್ಯೆ ಪ್ರವೇಶಿಸಿ ಪರಿಸ್ಥಿತಿಯನ್ನು ಹತೋಟಿಗೆ ತರಲು ಪ್ರಯತ್ನಿಸುತ್ತಾರೆ. ಎಷ್ಟೋ ಬಾರಿ ಇವರು ಕೆಲಸ ಮಾಡುವಂತಹ ಜಾಗಗಳಲ್ಲಿ ಕುಡಿಯಲು ನೀರು ಕೂಡಾ ಸಿಗದಂತಹ ಪರಿಸ್ಥಿತಿ

ಬರುತ್ತದೆ. ಊಟ-ತಿಂಡಿ ಮಾಡಲು ಹತ್ತಿರದಲ್ಲಿ ಯಾವ ಜಾಗವೂ ಇರುವುದಿಲ್ಲ. ಇವರುಗಳಿಗೆ ಯಾವುದೇ ರೀತಿಯ ಮನರಂಜನೆಯೂ ದೊರೆಯುವುದಿಲ್ಲ. ಮನೆ ಮಂದಿಯ ಮುಖ ನೋಡಲೂ ವಾರಗಟ್ಟಲೇ ಕಾಯಬೇಕು. ಸಿಬ್ಬಂದಿ ಕೊರತೆಯ ಕಾರಣಕ್ಕಾಗಿ ಇವರುಗಳಿಗೆ ರಜೆಯೂ ಸಿಗುವುದಿಲ್ಲ. ಹೀಗಾಗಿ ಮೀಸಲು ಪಡೆಯ ಸಿಬ್ಬಂದಿ ವರ್ಗಕ್ಕೆ ಅತಿ ಹೆಚ್ಚಿನ ಒತ್ತಡ ಇದೆ.

ಕೇಂದ್ರ ಪೊಲೀಸ್ ಪಡೆಗಳಲ್ಲಿ ಪರಿಸ್ಥಿತಿ ಇನ್ನೂ ಕಠಿಣ. ಸಾಮಾನ್ಯವಾಗಿ ನಮ್ಮ ರಾಜ್ಯದಿಂದ ನೇಮಕಗೊಂಡ ಕಾನ್ಸ್‌ಟೇಬಲ್ ಒಬ್ಬ ನಾಗಾಲ್ಯಾಂಡ್, ಮಿಜೋರಾಂ ಮುಂತಾದ ಜಾಗಗಳಲ್ಲಿ ಆತಂಕವಾದಿಗಳ ಜೊತೆ ಹೋರಾಟ ಮಾಡುವ ಪರಿಸ್ಥಿತಿಯಲ್ಲಿ ಕಾಣಸಿಗುತ್ತಾನೆ. ಈತನು ತನ್ನ ಕುಟುಂಬವರ್ಗದವರನ್ನು ತನ್ನ ಹುಟ್ಟೂರಿನಲ್ಲೇ ಇಟ್ಟಿರುತ್ತಾನೆ. ಅವರನ್ನು ನೋಡಲು ರಜೆ ಕೇಳಿದರೆ ಕೆಲವೊಮ್ಮೆ ರಜೆ ಸಿಗುತ್ತದೆ, ಕೆಲವೊಮ್ಮೆ ಸಿಗುವುದಿಲ್ಲ. ಪದೇ ಪದೇ ಒಂದೇ ರೀತಿಯ ಕೆಲಸವನ್ನು ಮಾಡುತ್ತಿರುವ ಆತನಿಗೆ ಮೇಲಾಧಿಕಾರಿಗಳು ಕೆಟ್ಟ ರೀತಿಯಲ್ಲಿ ವರ್ತಿಸಿದಾಗ ಕೋಪ ಬರುವುದು ಸಹಜವೇ. ಕೆಲವು ಪೊಲೀಸ್ ಪಡೆಗಳಲ್ಲಂತೂ ರಜೆ ಕೊಡಲು ಕೆಲವು ಕಿರಿಯ ಅಧಿಕಾರಿಗಳು ಕಾನ್ಸ್‌ಟೇಬಲ್‌ಗಳಿಂದ ಲಂಚವನ್ನು ಅಪೇಕ್ಷಿಸುತ್ತಾರೆ. ಲಂಚ ಅಥವಾ ಬೇರೆ ರೀತಿಯ ಉಡುಗೊರೆಗಳನ್ನು ನೀಡಿ ತನ್ನ ಸಹೋದ್ಯೋಗಿ ರಜೆ ಪಡೆದರೆ ಕಾನ್ಸ್‌ಟೇಬಲ್ ಒಬ್ಬನಿಗೆ ಆ ಮೇಲಾಧಿಕಾರಿಯ ಮೇಲೆ ಯಾವ ರೀತಿಯ ಭಾವನೆ ಬರಬಹುದು, ಊಹಿಸಿ. ಒಂದು ಕಡೆ ಮನೆಯವರ ಆರೋಗ್ಯದ ಬಗ್ಗೆ ಚಿಂತೆ, ಇನ್ನೊಂದು ಕಡೆ ಆತಂಕವಾದಿಗಳ ಹಾಗೂ ಸಮಾಜ ಘಾತುಕರ ವಿರುದ್ಧ ಹೋರಾಟ ಮೂರನೇ ಕಡೆ ತಾನೇ ಅನುಭವಿಸುತ್ತಿರುವ ಅನ್ಯಾಯ ಹಾಗೂ ಅಸಂತೋಷ. ಇವೆಲ್ಲವೂ ಒಟ್ಟುಗೂಡಿದಾಗ ಒಬ್ಬ ಕಾನ್ಸ್‌ಟೇಬಲ್ ಹತಾಶನಾಗುವುದರಲ್ಲಿ ಸಂಶಯವೇ ಬೇಡ

ತಮ್ಮ ಅಧೀನದಲ್ಲಿ ಕೆಲಸ ಮಾಡುತ್ತಿರುವ ವ್ಯಕ್ತಿಗಳ ಮಾನಸಿಕ ಸ್ಥಿತಿ ಹೇಗಿದೆ, ಅವರ ಕುಂದುಕೊರತೆಗಳು ಏನು ಎನ್ನುವುದರ ಬಗ್ಗೆ ನಮ್ಮ ಅಧಿಕಾರಿಗಳಿಗೆ ಕೇಳಲು ಪುರುಸೊತ್ತಿಲ್ಲ. ಹಿಂದೊಂದು ಕಾಲದಲ್ಲಿ ಎಸ್‌ಐ ಗಳಿಂದ ಹಿಡಿದು ಡಿಜಿಪಿ ರವರೆಗೆ ಅಧಿಕಾರಿಗಳು ಕಡಿಮೆಯೆಂದರೆ 15 ದಿನಗಳಿಗೊಮ್ಮೆ ತಮ್ಮ ಕಿರಿಯ ಅಧಿಕಾರಿಗಳ ಕುಂದುಕೊರತೆಗಳನ್ನು ವಿಚಾರಿಸಿಕೊಳ್ಳುತ್ತಿದ್ದರು. ವಾರದ ಪರೇಡ್‌ನಲ್ಲಿ ಸಿಬ್ಬಂದಿ ವರ್ಗದ ಯೋಗಕ್ಷೇಮ ವಿಚಾರಿಸಲಾಗುತ್ತಿತ್ತು. ಆದರೆ ಈಗೀಗ ಕೆಲವು ಅಧಿಕಾರಿಗಳಿಗೆ ತಮ್ಮ ಕೈಕೆಳಗಿನ ಸಿಬ್ಬಂದಿಗಳ ಕೊರತೆಗಳನ್ನು ಕೇಳಲು ವ್ಯವಧಾನವೇ ಇಲ್ಲ. ಒಮ್ಮೊಮ್ಮೆ ಕುಂದುಕೊರತೆಗಳ ಸಭೆ ಮಾಡಿದರೂ ಅದು "ಲೆಕ್ಕಕ್ಕುಂಟು ಆಟಕ್ಕಿಲ್ಲ" ಎನ್ನುವ ಹಾಗೆ. ಕೆಲವು ಬಾರಿ ಸ್ಥಿಮಿತ ಕಳೆದುಕೊಂಡ ಹಿರಿಯ ಅಧಿಕಾರಿಗಳು ತಮ್ಮ ಕೈಕೆಳಗಿನ ಸಿಬ್ಬಂದಿ ಮೇಲೆ ಅವಾಚ್ಯ ಶಬ್ದಗಳನ್ನು ಪ್ರಯೋಗಿಸಿ ಸಾರ್ವಜನಿಕರ ಎದುರು ಅವಮಾನಿಸುವುದಲ್ಲದೇ ದೈಹಿಕವಾಗಿ ದಾಳಿ ಮಾಡಿರುವ ಪ್ರಕರಣಗಳಿಗೆ ಲೆಕ್ಕವೇ ಇಲ್ಲ. ನಮ್ಮ ರಾಜ್ಯದಲ್ಲಿಯೇ ಇತ್ತೀಚೆಗೆ ಇಬ್ಬರು ಅಧಿಕಾರಿಗಳು ತಮ್ಮ ಕಿರಿಯ ಸಹೋದ್ಯೋಗಿಗಳಿಗೆ "ಬೂಟಿನ ರುಚಿ" ತೋರಿಸಿದ ಪ್ರಕರಣಗಳು ವರದಿಯಾಗಿ ವಿಚಾರಣೆ ನಡೆಯುತ್ತಿದೆ.

ಸಿಬ್ಬಂದಿಗಳ ಕಷ್ಟಸುಖ ಕೇಳದ ಅಧಿಕಾರಿ ಸಿಬ್ಬಂದಿ ಮೇಲೆ ಬಲಪ್ರಯೋಗ ಮಾಡಿದರೆ ಆ ಸಿಬ್ಬಂದಿ ಏನು ಮಾಡಬೇಕು? ಸಾವಿರಕ್ಕೆ 999 ಜನ ಶಿಸ್ತಿನ ಹೆಸರಿನಲ್ಲೇ ತಮ್ಮ ಮೇಲಾಗುವ ದಬ್ಬಾಳಿಕೆಗಳನ್ನು ಸಹಿಸಿಕೊಳ್ಳುತ್ತಾರೆ. ಆದರೆ ಒಬ್ಬ ಅನ್ಯಾಯದ ಬಗ್ಗೆ ಸಿಡಿದೆದ್ದು ಅಧಿಕಾರಿಯನ್ನೇ ಹತ್ಯೆ ಮಾಡುತ್ತಾನೆ. ಇಲ್ಲವೇ ತನ್ನ ಜೀವನದಲ್ಲಿ ತಾನೇ ಜಿಗುಪ್ಸೆಗೊಂಡು ಆತ್ಮಹತ್ಯೆಗೆ ಶರಣಾಗುತ್ತಾನೆ. ಈ ಬಗ್ಗೆ ಪೊಲೀಸ್ ಹಿರಿಯ ಅಧಿಕಾರಿಗಳು ಹಾಗೂ ಸಮಾಜ ಎಚ್ಚೆತ್ತುಕೊಳ್ಳಬೇಕಾಗಿದೆ.

ನಾವು ನಡೆಸಿದ ಸಮೀಕ್ಷೆಯಲ್ಲಿ ನಿಮಗೆ ಒತ್ತಡ ತರುವ ಸಂದರ್ಭಗಳು ಯಾವುವು ಎಂದು ಕಿರಿಯ ಅಧಿಕಾರಿಗಳನ್ನು ಪ್ರಶ್ನಿಸಿದಾಗ ಅವರು ಎರಡು ಮುಖ್ಯ ಸಂದರ್ಭಗಳ ಬಗ್ಗೆ ಗಮನ ಸೆಳೆದಿದ್ದಾರೆ. ಮೊದಲನೆಯದು ಕಾನೂನು ಸುವ್ಯವಸ್ಥೆ ನಿಭಾಯಿಸುವುದು ಹಾಗೂ ಎರಡನೆಯದು ವಿಐಪಿಗಳ ರಕ್ಷಣೆ. ಈ ಎರಡೂ ಹೆಚ್ಚಾಗಿ ಒತ್ತಡ ತರುವಂತಹ ಪ್ರಸಂಗಗಳೇ. ಕಾನೂನು ಸುವ್ಯವಸ್ಥೆ ಸಂದರ್ಭದಲ್ಲಿ ಪೊಲೀಸರು ಎಷ್ಟೋ ಬಾರಿ 2–3 ದಿನಗಳು ನಿದ್ದೆಗೆಟ್ಟು ದುಡಿಯಬೇಕಾಗುತ್ತದೆ. ರೊಚ್ಚಿಗೆದ್ದ ಜನರ ಸಿಟ್ಟಿಗೆ ಗುರಿಯಾಗಬೇಕಾಗುತ್ತದೆ. ಅವರಿಗೆ ದೈಹಿಕ ಗಾಯಗಳೂ ಉಂಟಾಗಬಹುದು ಇಲ್ಲವೇ ಕೆಲವು ಸಲ ಪ್ರಾಣವೇ ಹೋಗಬಹುದು. ಯಾವುದಾದರೊಂದು ಕಾನೂನು ಸುವ್ಯವಸ್ಥೆ ಸಂದರ್ಭದಲ್ಲಿ ರೊಚ್ಚಿಗೆದ್ದ ಗುಂಪಿನ ಮಧ್ಯೆ ಪೊಲೀಸ್ ಅಧಿಕಾರಿಯೊಬ್ಬ ಸಿಕ್ಕಿ ಹಾಕಿಕೊಂಡರೆ ಆ ಗುಂಪು ಅವನನ್ನು ಹೊಡೆದು ಸಾಯಿಸೇಬಿಡುತ್ತದೆ.

ಇದೇ ರೀತಿ ವಿಐಪಿಗಳ ಭದ್ರತಾ ಸಂದರ್ಭಗಳಲ್ಲಿ ಕಣ್ಣಿಗೆ ಎಣ್ಣೆ ಬಿಟ್ಟುಕೊಂಡು ಕೆಲಸ ಮಾಡಬೇಕಾದ ಪ್ರಮೇಯ ಬರುತ್ತದೆ. ನಿಂತ ಜಾಗದಲ್ಲೇ ಕದಲದೆ 8–10 ಗಂಟೆಗಳ ಕಾಲ ಕಾರ್ಯನಿರ್ವಹಿಸಬೇಕಾಗುತ್ತದೆ. ಒಂದು ವೇಳೆ ಹೆಚ್ಚು ಕಡಿಮೆಯಾದರೆ ಏನೋ ಹೇಗೋ ಎಂಬ ಗಾಬರಿ ಇರುತ್ತದೆ. ಇವುಗಳು ಮಾನಸಿಕ ಒತ್ತಡವನ್ನು ಹೆಚ್ಚಿಸುತ್ತವೆ.

ಪೊಲೀಸರ ಮೇಲಿರುವ ಒತ್ತಡ ತಪ್ಪಿಸಬೇಕಾದರೆ ಮಾಡಬೇಕಾದ ಮೊದಲ ಕಾರ್ಯ ಪೊಲೀಸ್ ಸಿಬ್ಬಂದಿ ಬಲವರ್ಧನೆ. ಅಮೇರಿಕಾಕ್ಕೆ ಹೋಲಿಸಿ ನೋಡಿದರೆ ನಮ್ಮಲ್ಲಿ ಜನಸಂಖ್ಯೆಗನುಗುಣವಾಗಿ ಪೊಲೀಸರು ಇಲ್ಲ. ಒಂದು ಠಾಣೆಗೆ ಎಷ್ಟು ಸಿಬ್ಬಂದಿ ಬೇಕು ಎಂದು ಲೆಕ್ಕ ಹಾಕುವಾಗ ಈಗಿರುವ ಮಾನದಂಡವನ್ನು ತೊರೆದು ಬೇರೆ ರೀತಿಯ ಮಾನದಂಡವನ್ನು ಬಳಸಬೇಕಾಗಿದೆ. ಪ್ರತಿಯೊಬ್ಬ ಕಾನ್ಸ್‌ಟೇಬಲ್‌ನಿಗೂ ಕಡ್ಡಾಯವಾಗಿ ವಾರಕ್ಕೊಮ್ಮೆ ರಜೆ ನೀಡಬೇಕಾಗಿದೆ. ಪ್ರತಿಯೊಬ್ಬ ಸಿಬ್ಬಂದಿ ವರ್ಗದವರಿಗೂ ರಜಾ ದಿನಗಳಲ್ಲಿ ಕುಟುಂಬದೊಡನೆ ರಜೆ ಸವಿಯುವ ಅವಕಾಶ ದೊರೆಯಬೇಕಾಗಿದೆ. ಪ್ರತಿಯೊಬ್ಬ ಕಾನ್ಸ್‌ಟೇಬಲ್‌ನಿಗೆ ವಸತಿ ಸೌಕರ್ಯ [ಈಗ ಇರುವಂತಹುದ್ದಲ್ಲ] ಕಲ್ಪಿಸಬೇಕಾಗಿದೆ. ಕಾನ್ಸ್‌ಟೇಬಲ್‌ಗಳಿಗೆ ತಮ್ಮ ಕುಟುಂಬದ ಜತೆ ಸಮಯ ಕಳೆಯಲು ಅವಕಾಶ ಮಾಡಬೇಕಾಗಿದೆ. ಮಾನಸಿಕ ಒತ್ತಡ ನಿರ್ವಹಣೆಗಾಗಿ ಯೋಗ, ಧ್ಯಾನ ಇತ್ಯಾದಿ ಶಿಬಿರಗಳನ್ನು ಕರ್ತವ್ಯನಿರತ ಪೊಲೀಸರಿಗೆ ಕಾಲಕಾಲಕ್ಕೆ ಏರ್ಪಾಟು ಮಾಡಬೇಕಾಗಿದೆ. ಎಲ್ಲಕ್ಕಿಂತ ಹೆಚ್ಚಾಗಿ ಹಿರಿಯ

ಅಧಿಕಾರಿಗಳು ತಮ್ಮ ಕಿರಿಯ ಅಧಿಕಾರಿಗಳ ಸಭೆಗಳನ್ನು ಆಗ್ಗಿಂದಾಗೆ ನಡೆಸಿ ಅವರ ಕುಂದುಕೊರತೆಗಳನ್ನು ಕೇಳಿ, ಆ ಕುಂದುಕೊರತೆಗಳ ನಿವಾರಣೆಗಾಗಿ ಸೂಕ್ತಕ್ರಮವನ್ನು ತೆಗೆದುಕೊಳ್ಳಬೇಕಾಗಿದೆ. ಹೀಗಾದಾಗ ಮಾತ್ರ ಸಮಾಜಕ್ಕೆ ಉತ್ತಮ ಪೊಲೀಸ್ ವ್ಯವಸ್ಥೆ ದೊರೆಯಲು ಸಾಧ್ಯ.

# 38

## ಪೊಲೀಸರ ಇಮೇಜ್ ಬದಲಾದರೆ ಪೊಲೀಸರಿಗೇ ಲಾಭ

ಸಾರ್ವಜನಿಕರಿಗೆ ಪೊಲೀಸರ ಬಗ್ಗೆ ಉತ್ತಮ ಅಭಿಪ್ರಾಯ ಇಲ್ಲದಿರುವುದು ಪೊಲೀಸರಿಂದ ಅವರಿಗೆ ಆದಂತಹ ಕಹಿ ಅನುಭವಗಳಿಂದ ಎನ್ನುವುದು ಸರ್ವವಿದಿತ. ರಾಜಸ್ಥಾನ ರಾಜ್ಯ ಪೊಲೀಸರು ಅಮೇರಿಕಾದ ಹೆಸರಾಂತ ಶಿಕ್ಷಣ ಸಂಸ್ಥೆ ಮಸಾಚುಸೆಟ್ಸ್ ಆಫ್ ಟೆಕ್ನಾಲಜಿ ಇವರ ಸಹಯೋಗದೊಂದಿಗೆ ಆ ರಾಜ್ಯದ 11 ಜಿಲ್ಲೆಗಳು ಹಾಗೂ 150 ಪೊಲೀಸ್ ಠಾಣೆಗಳ ವ್ಯಾಪ್ತಿಯಲ್ಲಿ 2005 ರಿಂದ 2008 ರವರೆಗೆ ಪೊಲೀಸ್ ಕಾರ್ಯವ್ಯಾಪ್ತಿ ಬಗ್ಗೆ ನಡೆಸಿದ ಸಮೀಕ್ಷೆಯಲ್ಲಿ ತಿಳಿದುಬಂದ ಅಂಶಗಳು ಕುತೂಹಲಕಾರಿ.

ಜನರ ಭಾವನೆಗಳಿಗೆ ತಕ್ಕಂತೆ ಪೊಲೀಸರು ಸ್ಪಂದಿಸಿ ತಮ್ಮನ್ನು ತಾವು ಹೇಗೆ ಬದಲಾಯಿಸಿಕೊಳ್ಳಬಹುದು ಎನ್ನುವುದೇ ಸಮೀಕ್ಷೆಯ ಉದ್ದೇಶವಾಗಿತ್ತು. ಸಮೀಕ್ಷೆಯಲ್ಲಿ ಕಂಡುಬಂದ ಮೊದಲ ಅಂಶವೆಂದರೆ ಕಾನೂನನ್ನು ಗೌರವಿಸುವ ನಾಗರೀಕರಲ್ಲಿ ಶೇಕಡ 39 ರಷ್ಟು ಜನ ಪೊಲೀಸರ ಬಗ್ಗೆ ಹೆದರಿಕೆ ಹೊಂದಿದ್ದರೆ, ಅಪರಾಧ ಪ್ರವೃತ್ತಿ ಹೊಂದಿರುವ ವ್ಯಕ್ತಿಗಳಲ್ಲಿ ಶೇಕಡ 54ರಷ್ಟು ಜನರಿಗೆ ಪೊಲೀಸರ ಬಗ್ಗೆ ಭಯವೇ ಇಲ್ಲ ಎನ್ನುವುದು. ವಿಪರ್ಯಾಸವೆಂದರೆ ಯಾರು ಪೊಲೀಸರೆಂದರೆ ಹೆದರಬೇಕಾಗಿಲ್ಲವೋ ಅವರು ಪೊಲೀಸರ ಬಗ್ಗೆ ಭಯ ಹೊಂದಿದ್ದರೆ ಯಾರು ಪೊಲೀಸರ ಬಗ್ಗೆ ಭಯಪಡಬೇಕೋ ಅವರೇ ಭಯದಿಂದ ಇಲ್ಲದಿರುವುದು. ಇದರಿಂದ ವ್ಯವಸ್ಥೆಯಲ್ಲಿ ದೋಷ ಇದೆ ಎಂದು ವಿದಿತವಾಗುತ್ತದೆ.

ಪೊಲೀಸರ ಬಗ್ಗೆ ಉತ್ತಮ ಅಭಿಪ್ರಾಯವಿಲ್ಲದ ನಾಗರೀಕರನ್ನು ನೀವು ಎಂದಾದರೂ ಪೊಲೀಸರೊಂದಿಗೆ ವ್ಯವಹರಿಸಿದ್ದೀರಾ ಎಂದು ಪ್ರಶ್ನಿಸಿದಾಗ ಶೇಕಡ 89 ರಷ್ಟು ಜನ ತಾವು ಪೊಲೀಸರೊಡನೆ ಸಂಪರ್ಕಕ್ಕೇ ಬಂದಿಲ್ಲ ಎಂದು ತಿಳಿಸಿದ್ದಾರೆ. ಶೇಕಡ95 ರಷ್ಟು ಮಹಿಳೆಯರು ತಾವು ಇಲ್ಲಿಯವರೆಗೆ ಪೊಲೀಸರ ಸಂಪರ್ಕಕ್ಕೆ ಬಂದಿಲ್ಲ ಎಂಬ ಉತ್ತರವನ್ನು ನೀಡಿದ್ದಾರೆ. ನಗರ ಪ್ರದೇಶಗಳಲ್ಲಿ ವಾಸಿಸುವ ಜನರಲ್ಲಿ ಕೇವಲ ಶೇಕಡ 24 ರಷ್ಟು ಜನ ಪೊಲೀಸರ ಸಂಪರ್ಕಕ್ಕೆ ಬಂದಿದ್ದಾರೆ. ಹಳ್ಳಿಗಳಲ್ಲಿ ವಾಸಿಸುವ ಶೇಕಡ 82 ರಷ್ಟು ಜನ ತಮ್ಮ ಹಳ್ಳಿಗೆ ಕಳೆದ ಒಂದು ವರ್ಷದಲ್ಲಿ ಯಾವುದೇ ಪೊಲೀಸರು ಬಂದೇ ಇಲ್ಲ ಎಂದು ಉತ್ತರಿಸಿದ್ದಾರೆ.

ಪೊಲೀಸರ ಬಗ್ಗೆ ಯಾವ ಕಾರಣಕ್ಕಾಗಿ ನಿಮಗೆ ಅಸಮಾಧಾನ ಇದೆ ಎಂಬ ಪ್ರಶ್ನೆಗೆ ಶೇಕಡ 56ರಷ್ಟು ಜನ ಪೊಲೀಸರು ಕಷ್ಟಪಟ್ಟು ಕೆಲಸ ಮಾಡುವುದಿಲ್ಲ ಎಂದು ತಿಳಿಸಿದ್ದಾರೆ. ತಾವು ಪೊಲೀಸ್ ಠಾಣೆಗೆ ಹೋಗಿ ದೂರು ಕೊಟ್ಟರೆ ದೂರಿನ ಬಗ್ಗೆ ಕ್ರಮವನ್ನು ತೆಗೆದುಕೊಳ್ಳುವುದಿಲ್ಲ; ತಮ್ಮ ಅಹವಾಲುಗಳ ಬಗ್ಗೆ ಆಸಕ್ತಿ ಇಟ್ಟುಕೊಳ್ಳುವುದಿಲ್ಲ: ತಾವು ಹೆಸರಿಸಿದ ಅಪರಾಧಿಯನ್ನು ಪೊಲೀಸರು ಬಂಧಿಸಿಲ್ಲ; ಕಳೆದು ಹೋದ ತಮ್ಮ ವಸ್ತುಗಳನ್ನು ಪತ್ತೆ ಮಾಡಿ ಹಿಂತಿರುಗಿಸಿಲ್ಲ ಎಂದು ಶೇಕಡ 94ರಷ್ಟು ಜನ ಅಭಿಪ್ರಾಯ ಪಟ್ಟರೆ ಉಳಿದ ಶೇಕಡ 6 ರಷ್ಟು ಜನ ಪೊಲೀಸರು ತಮ್ಮ ಕೆಲಸ ಮಾಡಿಕೊಡಲು ಹಣ ಕೇಳಿದರು ಎಂದು ತಿಳಿಸಿ. ಮೇಲ್ಕಂಡ ಕಾರಣಗಳಿಗೆ ಪೊಲೀಸರ ಬಗ್ಗೆ ತಮಗೆ ಅತೃಪ್ತಿ ಇದೆಯೆಂದು ತಿಳಿಸಿದ್ದಾರೆ.

ಸಮೀಕ್ಷಕರು ಸಾರ್ವಜನಿಕರನ್ನು ನೀವು ಪೊಲೀಸರ ಬಳಿ ಹೋಗದೆಯೇ ಇಂತಹ ಅಭಿಪ್ರಾಯ ಹೇಗೆ ಹೊಂದಿದ್ದೀರಿ ಎಂದು ಪ್ರಶ್ನಿಸಿದಾಗ ಬಹಳಷ್ಟು ಮಂದಿ ಪೊಲೀಸರ ಬಳಿ ಹೋದರೂ ಏನೂ ಪ್ರಯೋಜನವಿಲ್ಲ. ಅವರಿಗೆ ನಮ್ಮ ದೂರಿನಲ್ಲಿ ಆಸಕ್ತಿ ಇರುವುದಿಲ್ಲ ಹಾಗೂ ಅವರು ನಮ್ಮ ದೂರಿನ ಬಗ್ಗೆ ಯಾವ ಕ್ರಮವನ್ನು ತೆಗೆದುಕೊಳ್ಳುವುದಿಲ್ಲವೆಂದು ತಿಳಿಸಿದ್ದಾರೆ. ಶೇಕಡ 17 ರಷ್ಟು ಜನ ಪೊಲೀಸರು ದೂರನ್ನು ದಾಖಲಿಸಲು ಸರಾಸರಿ ರೂ. 2,000/- ಲಂಚ ಕೇಳುತ್ತಾರೆಂದು ತಿಳಿಸಿರುತ್ತಾರೆ. ಕೆಲವು ಜನ ಪೊಲೀಸರ ಬಗ್ಗೆ ನಮಗೆ ಮೂಡಿರುವ ಭಾವನೆ ಮಾಧ್ಯಮಗಳಿಂದ ಬಂದಿದ್ದು ಎಂದು ಒಪ್ಪಿಕೊಂಡರೆ, ಇನ್ನಷ್ಟು ಜನ ನಮ್ಮ ನೆರೆಹೊರೆಯವರಿಂದ, ಗೆಳೆಯರು ಹಾಗೂ ಸಂಬಂಧಿಕರಿಂದ ನಮಗೆ ಪೊಲೀಸರ ಬಗ್ಗೆ ಟೀಕೆಗಳು ಬಂದಿದ್ದರಿಂದ ನಾವೂ ಪೊಲೀಸರ ಬಗ್ಗೆ ಕೆಟ್ಟ ಭಾವನೆ ಹೊಂದಿರುತ್ತೇವೆ ಎಂದಿದ್ದಾರೆ.

ಈ ಅಂಕಿ ಅಂಶಗಳಿಂದ ಸ್ಪಷ್ಟವಾಗುವ ವಿಷಯವೆಂದರೆ ಸಾರ್ವಜನಿಕರು ಪೊಲೀಸರು ತಮ್ಮ ಹಿತಾಸಕ್ತಿಯನ್ನು ಕಾಯುವುದಿಲ್ಲ ಎಂಬ ದೃಢಭಾವನೆಯನ್ನು ಹೊಂದಿದ್ದಾರೆ; ಹಾಗೂ ಈ ಭಾವನೆ ಪೊಲೀಸರೊಡನೆ ಸರಿಯಾದ ಸಂಪರ್ಕಕ್ಕೆ ಬರದೇ ಉಂಟಾಗಿರುವ ಅಭಿಪ್ರಾಯ ಎನ್ನುವುದು.

ಈ ರೀತಿ ಭಾವನೆಗೆ ಮುಖ್ಯ ಕಾರಣ ಪೊಲೀಸರು ಹಾಗೂ ಸಾರ್ವಜನಿಕರ ನಡುವೆ ಸರಿಯಾದ ಸಂಪರ್ಕ ಇಲ್ಲದಿರುವುದು. ಪೊಲೀಸ್ ಠಾಣೆಗಳಿಗೆ ಹಾಗೂ ಪೊಲೀಸರ ಬಳಿ

ಹೋಗಲು ಸಾರ್ವಜನಿಕರಿಗೆ ಭಯ ಇದೆ. ಸಾಮಾನ್ಯವಾಗಿ ಪೊಲೀಸ್ ಠಾಣೆಗಳಿಗೆ ಹಾಗೂ ಪೊಲೀಸರ ಬಳಿ ಹೋಗಲು ಸಾರ್ವಜನಿಕರಿಗೆ ಭಯ ಇದೆ. ಸಾಮಾನ್ಯವಾಗಿ ಪೊಲೀಸ್ ಠಾಣೆಗೆ ಅನಿವಾರ್ಯ ಕಾರಣ ಇದ್ದರೆ ಮಾತ್ರ ಸಾರ್ವಜನಿಕರು ಹೋಗುವುದು ಎನ್ನುವುದು ಎಲ್ಲರಿಗೂ ತಿಳಿದಿದೆ. ಪೊಲೀಸ್ ಠಾಣೆಯು ನಾಲ್ಕು ಗೋಡೆಗಳ ಮಧ್ಯ ಜರಗುತ್ತದೆ ಎಂದು ಸಾರ್ವಜನಿಕರಿಗೆ ತಿಳಿಯದೇ ಹೋದಾಗ ಪೊಲೀಸರ ಬಗ್ಗೆ ಸಂಶಯದ ಭಾವನೆ ಮೂಡುವುದು ಸಹಜ. ಈ ಕಾರಣಕ್ಕಾಗಿ ಪೊಲೀಸ್ ಠಾಣೆಗಳು ಸಾರ್ವಜನಿಕರ ಸಂದರ್ಶನಕ್ಕೆ ಮುಕ್ತವಾದ ಜಾಗವಾಗಿರಬೇಕು. ಪೊಲೀಸ್ ಠಾಣೆಗೆ ಬರಲು ಯಾವುದೇ ವ್ಯಕ್ತಿ ಹೆದರಬಾರದು.

ನಾನು ಹುಬ್ಬಳ್ಳಿ-ಧಾರವಾಡದ ಪೊಲೀಸ್ ಕಮೀಷನರ್ ಆಗಿದ್ದಾಗ ಒಂದು ಪ್ರಯೋಗವನ್ನು ಮಾಡಿದ್ದೆ. ಶಾಲಾ ಮಕ್ಕಳನ್ನು ಹಾಗೂ ಮಹಿಳೆಯರನ್ನು ಗುಂಪುಗಳಲ್ಲಿ ಪೊಲೀಸ್ ಠಾಣೆಗೆ ಕರೆಸಿಕೊಂಡು ಠಾಣೆಯ ಆಗುಹೋಗುಗಳ ಬಗ್ಗೆ ಮಾಹಿತಿ ನೀಡುತ್ತಿದ್ದೆವು. ಸಣ್ಣಮಕ್ಕಳಿಗೆ ಪೊಲೀಸರು ಉಪಯೋಗಿಸುವ ವಾಕೀಟಾಕಿ ಸೆಟ್‌ಗಳು, ಪೊಲೀಸರ ಬಳಿ ಇರುವ ಆಯುಧಗಳು. ಟಿಯರ್‌ಗ್ಯಾಸ್ ಇತ್ಯಾದಿಗಳನ್ನು ತೋರಿಸಿ. ಅವುಗಳ ಪ್ರಯೋಗವನ್ನು ವಿವರಿಸುತ್ತಿದ್ದೆವು. ಅದೇ ರೀತಿ ಪೊಲೀಸ್ ಠಾಣೆಯಲ್ಲಿ ಲಾಕ್‌ಅಪ್ ಅನ್ನು ತೋರಿಸಿ ಅದರಲ್ಲಿ ಹೇಗೆ ಬಂಧನಕ್ಕಿಡಲಾಗುತ್ತದೆ ಎಂದು ತಿಳಿಸುತ್ತಿದ್ದೆವು. ಹೀಗಾಗಿ ಬಹಳಷ್ಟು ಮಹಿಳೆಯರೂ ಹಾಗೂ ಮಕ್ಕಳು ಪೊಲೀಸರ ಬಗ್ಗೆ ತಮಗಿದ್ದ ಭಾವನೆಯನ್ನು ಬದಲಾಯಿಸಿಕೊಂಡು ತಮ್ಮ ಪೂರ್ವಾಗ್ರಹವನ್ನು ಕೆಲಮಟ್ಟಿಗೆ ಹೋಗಲಾಡಿಸಿಕೊಂಡಿದ್ದರು.

ರಾಜಸ್ಥಾನದಲ್ಲಿಯೂ ಇದೇ ರೀತಿ ಇನ್ನೊಂದು ಪ್ರಯೋಗವನ್ನು ನಡೆಸಲಾಯಿತು. ಪ್ರತಿಯೊಂದು ಪೊಲೀಸ್ ಠಾಣೆಯಲ್ಲೂ ಆ ಠಾಣಾ ವ್ಯಾಪ್ತಿಯಲ್ಲಿ ವಾಸಿಸುವ ಸಾರ್ವಜನಿಕರ ಹತ್ತು-ಹದಿನೈದು ತಂಡಗಳನ್ನು ರಚಿಸಲಾಯಿತು. ಈ ತಂಡದ ಸದಸ್ಯರನ್ನು ಪ್ರತಿದಿನವೂ ಸುಮಾರು ಮೂರರಿಂದ ನಾಲ್ಕು ಗಂಟೆಗಳ ಕಾಲ ಪೊಲೀಸ್ ಠಾಣೆಯಲ್ಲಿ ಕುಳಿತು ಪೊಲೀಸ್ ಕಾರ್ಯವೈಖರಿಯನ್ನು ಅವಲೋಕಿಸಲು ಆಹ್ವಾನಿಸಲಾಯಿತು. ಅವರುಗಳು ಪ್ರತಿದಿನವೂ ಪೊಲೀಸ್ ಠಾಣೆಗೆ ಬಂದು ಯಾವ ರೀತಿ ಪೊಲೀಸರು ಕಾರ್ಯನಿರ್ವಹಿಸುತ್ತಿದ್ದಾರೆಂಬುದರ ಸ್ವಯಂ ಅನುಭವ ಪಡೆಯುವ ಅವಕಾಶವನ್ನು ಕಲ್ಪಿಸಲಾಯಿತು. ಪೊಲೀಸ್ ಕಾರ್ಯವನ್ನು ನೋಡಬೇಕೇ ವಿನಹ ಅವರ ಕರ್ತವ್ಯದಲ್ಲಿ ಮಧ್ಯಪ್ರವೇಶ ಮಾಡಬಾರದೆಂದು ಈ ತಂಡಗಳಿಗೆ ತಿಳಿಸಲಾಗಿತ್ತು. ಸುಮಾರು ಎರಡು ಮೂರು ತಿಂಗಳು ಈ ತಂಡಗಳು ಠಾಣೆಗಳಿಗೆ ಬಂದು ಹೋಗಿ ಪೊಲೀಸರ ಕಾರ್ಯವನ್ನು ನೇರವಾಗಿ ಅವಲೋಕಿಸಿದ ಕಾರಣದಿಂದಾಗಿ ಠಾಣೆಗೆ ಬಂದ ಜನರಿಗೆ ಪೊಲೀಸರ ಬಗ್ಗೆ ಇದ್ದಂತಹ ತಪ್ಪು ಕಲ್ಪನೆಗಳು ಸ್ವಲ್ಪಮಟ್ಟಿಗಾದರೂ ಮಾಯವಾಗಲು ಕಾರಣವಾಯಿತು. ಅವರುಗಳು ತಮ್ಮ ತಮ್ಮ ಹಳ್ಳಿಗಳಿಗೆ ಹೋಗಿ ಇತರರಿಗೆ ಪೊಲೀಸ್ ಠಾಣೆಯ ಕಾರ್ಯದ ಬಗ್ಗೆ ವಿವರಿಸಿದಾಗ ಪೊಲೀಸರ ಮೇಲಿದ್ದ ಜನಾಭಿಪ್ರಾಯ ಸ್ವಲ್ಪಮಟ್ಟಿಗೆ ಉತ್ತಮಗೊಂಡಿತು.

ಈ ಪ್ರಯೋಗದಿಂದ ಆದ ಇನ್ನೊಂದು ಉತ್ತಮ ಫಲಿತಾಂಶವೆಂದರೆ ತಾವು ಮಾಡುವ ಕೆಲಸವನ್ನು ಸಾರ್ವಜನಿಕರು ಸಮೀಪದಿಂದ ಅವಲೋಕಿಸುತ್ತಿದ್ದಾರೆ ಎಂದು ತಿಳಿದಿದ್ದರಿಂದ ಪೊಲೀಸರು ತಮ್ಮ ವರ್ತನೆಯಲ್ಲಿ ಸಾಕಷ್ಟು ಬದಲಾವಣೆಗಳನ್ನು ಮಾಡಿಕೊಂಡರು. ಠಾಣೆಗೆ ಬಂದ ಜನರಿಗೆ ಪೊಲೀಸರ ಬಗ್ಗೆ ಇದ್ದಂತಹ ತಪ್ಪು ಕಲ್ಪನೆಗಳು ಸ್ವಲ್ಪಮಟ್ಟಿಗಾದರೂ ಮಾಯವಾಗಲು ಕಾರಣವಾಯಿತು. ಅವರುಗಳು ತಮ್ಮ ತಮ್ಮ ಹಳ್ಳಿಗಳಿಗೆ ಹೋಗಿ ಇತರರಿಗೆ ಪೊಲೀಸ್ ಠಾಣೆಯ ಕಾರ್ಯದ ಬಗ್ಗೆ ವಿವರಿಸಿದಾಗ ಪೊಲೀಸರ ಮೇಲಿದ್ದ ಜನಾಭಿಪ್ರಾಯ ಸ್ವಲ್ಪಮಟ್ಟಿಗೆ ಉತ್ತಮಗೊಂಡಿತು.

ಈ ಪ್ರಯೋಗದಿಂದ ಆದ ಇನ್ನೊಂದು ಉತ್ತಮ ಫಲಿತಾಂಶವೆಂದರೆ ತಾವು ಮಾಡುವ ಕೆಲಸವನ್ನು ಸಾರ್ವಜನಿಕರು ಸಮೀಪದಿಂದ ಅವಲೋಕಿಸುತ್ತಿದ್ದಾರೆ ಎಂದು ತಿಳಿದಿದ್ದರಿಂದ ಪೊಲೀಸರು ತಮ್ಮ ವರ್ತನೆಯಲ್ಲಿ ಸಾಕಷ್ಟು ಬದಲಾವಣೆಗಳನ್ನು ಮಾಡಿಕೊಂಡರು. ಠಾಣೆಗೆ ಬಂದ ಜನರ ಜತೆ ಅವರು ಉತ್ತಮ ವರ್ತನೆ ಮಾಡಿದರು. ದೂರುಗಳನ್ನು ಸುಲಭವಾಗಿ ದಾಖಲಿಸಿದರು. ಸಾರ್ವಜನಿಕ ಸಮಸ್ಯೆಗಳಿಗೆ ಕೂಡಲೇ ಸ್ಪಂದಿಸಿದರು.

ಪಾರದರ್ಶಕ ಆಡಳಿತ ವ್ಯವಸ್ಥೆಯಿಂದ ಯಾವ ರೀತಿ ಸಮಾಜದಲ್ಲಿ ಪೊಲೀಸರ ಬಗ್ಗೆ ಇದ್ದ ಮನೋಭಾವನೆ ಬದಲಾವಣೆಗೊಳ್ಳಬಹುದು ಎನ್ನುವುದನ್ನು ಈ ಪ್ರಯೋಗವು ಸಾಬೀತು ಮಾಡಿ ತೋರಿಸಿತು.

ಪೊಲೀಸರನ್ನು ಬಹಳ ಹತ್ತಿರದಿಂದ ನೋಡಿದ ಸಾರ್ವಜನಿಕರಿಗೆ ಪೊಲೀಸರ ಕಷ್ಟನಷ್ಟಗಳು ತಿಳಿದು ಬಂದವು. ಹೀಗಾಗಿ ಸಾರ್ವಜನಿಕರು ಪೊಲೀಸರ ಕೆಲಸದ ವೇಳೆ ಬದಲಾಗಬೇಕು: ಪಾಳಿ ವ್ಯವಸ್ಥೆಯಲ್ಲಿ ಪೊಲೀಸರು ಕರ್ತವ್ಯ ನಿರ್ವಹಿಸಬೇಕು: ಪೊಲೀಸರಿಗೆ ಪ್ರತಿವಾರವೂ ಒಂದು ದಿನ ರಜೆ ನೀಡಬೇಕು: ಹಾಗೂ ಠಾಣಾಧಿಕಾರಿಗಳನ್ನು ಪದೇ ಪದೇ ವರ್ಗಾವಣೆ ಮಾಡಬಾರದು; ಕನಿಷ್ಟ ಪಕ್ಷ ಒಬ್ಬ ಠಾಣಾಧಿಕಾರಿ ಎರಡು ವರ್ಷಗಳವರೆಗೆ ಠಾಣೆಯಲ್ಲಿ ಕೆಲಸ ಮಾಡಬೇಕು ಎನ್ನುವ ಅಭಿಪ್ರಾಯಗಳನ್ನು ವ್ಯಕ್ತಪಡಿಸತೊಡಗಿದರು. ಇದರಿಂದ ವ್ಯವಸ್ಥೆಯಲ್ಲಿ ಸುಧಾರಣೆಗಳು ತರಲು ಅನುಕೂಲವಾಯಿತು.

ಇಂತಹ ಪ್ರಯೋಗಗಳನ್ನು ರಾಷ್ಟ್ರದ ಇತರ ರಾಜ್ಯಗಳಲ್ಲೂ ಮಾಡಿದರೆ ಪೊಲೀಸರ ಬಗ್ಗೆ ಸಾರ್ವಜನಿಕರಿಗೆ ಇರುವ ಸಂದೇಹವು ಕಾಲಕ್ರಮೇಣ ಮಾಯವಾಗಿ ಪೊಲೀಸ್ ನಡವಳಿಕೆಯಲ್ಲಿ ಬದಲಾವಣೆಗಳು ಬಂದು ಪೊಲೀಸ್ ವ್ಯವಸ್ಥೆ ಇನ್ನಷ್ಟು ಬಲಗೊಳ್ಳುತ್ತದೆ ಎನ್ನುವುದು ನಿಸ್ಸಂದೇಹವಾದ ಮಾತು.

# 39

## ಪೊಲೀಸರ ಕ್ಷೇಮದ ಹೊಣೆ ಸಮಾಜದ ಮೇಲೆ

ಪೊಲೀಸರು ಅಂದರೆ ದುಷ್ಟರು, ದುರುಳರು, ನಮ್ಮ ಶತ್ರುಗಳು, ಆದಷ್ಟೂ ಅವರಿಂದ ದೂರವೇ ಇರಬೇಕು ಎನ್ನುವುದು ಶ್ರೀಸಾಮಾನ್ಯನ ಅನಿಸಿಕೆಯಾಗಿರುವಾಗ ವರ್ಷದ 365 ದಿವಸಗಳೂ ಹಗಲು ರಾತ್ರಿ ಎನ್ನದೇ, ಚಳಿ, ಮಳೆಗೆ ಹಿಂಜರಿಯದೆ, ಎಲ್ಲರೂ ನಿದ್ದೆಮಾಡುವಾಗ, ಎಲ್ಲರೂ ರಜೆಗಳನ್ನು ಸವಿಯುವಾಗ ಕರ್ತವ್ಯ ಮಾಡುತ್ತಾ ಸಮಾಜದ ಸೇವೆಗಾಗಿ ಜೀವನವನ್ನೇ ಮುಡುಪಾಗಿಡುವ ಬಹಳಷ್ಟು ಪೊಲೀಸರ ಬಗ್ಗೆ ಸಮಾಜ ತಲೆ ಕೆಡಿಸಿಕೊಳ್ಳದಿರುವುದು ಆಶ್ಚರ್ಯವೇನಲ್ಲ. ಬೆರಳೆಣಿಕೆಯಷ್ಟು ಕೆಟ್ಟ ಪೊಲೀಸರ ಕುಕೃತ್ಯಗಳಿಂದಾಗಿ ಇಡೀ ಪೊಲೀಸ್ ವ್ಯವಸ್ಥೆ ಸಾರ್ವಜನಿಕ ಸಹಾನುಭೂತಿಯನ್ನು ನಿರೀಕ್ಷೆಯ ಮಟ್ಟದಲ್ಲಿ ಗಳಿಸದಿರುವುದು ವಿಪರ್ಯಾಸ.

ಭಾರತಕ್ಕೆ ಸ್ವಾತಂತ್ರ್ಯ, ಬಂದ ನಂತರ ಯುದ್ಧಗಳಲ್ಲಿ ಮಡಿದ ಸೈನಿಕರ ಸಂಖ್ಯೆಗಿಂತ ಕರ್ತವ್ಯದಲ್ಲಿ ಪ್ರಾಣತೆತ್ತ ಪೊಲೀಸರ ಸಂಖ್ಯೆ ಜಾಸ್ತಿ ಎಂದರೆ ಬಹುಶಃ ಯಾರೂ ನಂಬಲಾರರು. ಆದರೆ ಇದು ಸತ್ಯ. ದುರಾದೃಷ್ಟದ ವಿಷಯವೇನೆಂದರೆ ಕರ್ತವ್ಯ ಮಾಡುತ್ತಾ ಮಡಿದ ಎಸ್.ಪಿ.ಹರಿಕೃಷ್ಣ ನಾಗಲೀ, ಪಂಜಾಬ್ ಆತಂಕವಾದಿಗಳಿಂದ ಹತ್ಯೆಯಾದ ಬ್ರಾರ್ ಆಗಲಿ ಸಾರ್ವಜನಿಕ ನೆನಪಿನಿಂದ ಈಗಾಗಲೇ ಮಾಯವಾಗಿಬಿಟ್ಟಿದ್ದಾರೆ. ಮೊನ್ನೆ ಮುಂಬಯಿಯ ರೈಲುಗಾಡಿ ಸ್ಫೋಟದಲ್ಲಿ ಪೊಲೀಸರೂ ಪ್ರಾಣ ತೆತ್ತರು ಎನ್ನುವುದು ಬಹಳ ಜನರ ಗಮನಕ್ಕೆ ಬಂದಿರದೇ ಇರಲಾರದು.

ಕರ್ತವ್ಯ ಮಾಡುತ್ತಾ ಪ್ರಾಣತ್ಯಾಗ ಮಾಡುವವರ ಮಾತು ಹಾಗಿರಲಿ, ಬಹಳಷ್ಟು ಜನ ಪೊಲೀಸರಿಗೆ ತಮ್ಮ ಕುಟುಂಬದ ಬಗ್ಗೆ ಗಮನ ಹರಿಸಲೂ ವೇಳೆ ಸಿಗಲಾರದು. ಈ ದೇಶದ ಶೇಕಡಾ 30 ಪೊಲೀಸರು ಕೊಳೆಗೇರಿಗಳಲ್ಲಿ ವಾಸಿಸುತ್ತಾರೆ. ಯಾರಿಗೆ ಸರಕಾರಿ ಮನೆ ಇದೆಯೋ ಆ ಮನೆಯೂ ಮಳೆಗಾಲದಲ್ಲಿ ಸೋರಿ, ಬೇಸಿಗೆಯಲ್ಲಿ ಕಾವು ಸುಡುವಂತಾಗಿ 700 ಚದರಡಿಗಳಲ್ಲಿ 7 ಜನಕ್ಕೂ ಹೆಚ್ಚಿನ ಆಶ್ರಯ ನೀಡುತ್ತದೆ. ಎಷ್ಟೋ ಮನೆಗಳಿಗೆ ವಿದ್ಯುತ್ ಸಂಪರ್ಕವೂ ಇಲ್ಲ. ನೀರಂತೂ ವಾರಕ್ಕೊಮ್ಮೆ ಹಾಗೂ ಶೌಚಾಲಯ ನೀಲಿ ಆಗಸದ ಕೆಳಗಡೆಯೇ.

ಇಂತಹ ಮನೆಗಳಲ್ಲಿ ವಾಸಿಸುವ ವಿದ್ಯಾರ್ಥಿಗಳು ಅಭ್ಯಾಸ ಹೇಗೆ ಮಾಡಬೇಕು? ಪೊಲೀಸರ ಮಡದಿಯರು ವರ್ಷದ ಬಹುತೇಕ ದಿನಗಳು ಗಂಡನ ನೆರವೇ ಇಲ್ಲದೆ ಸಂಸಾರ ಹೇಗೆ ಸಂಭಾಳಿಸಿಕೊಂಡು ಹೋಗುತ್ತಾರೆ ಮುಂತಾದ ಚಿಂತನೆಗಳು ಜನರಿಗೆ ಬರುವುದೇ ಇಲ್ಲ. ಬಹುತೇಕ ಪೊಲೀಸರ ಮಕ್ಕಳು ಅಡ್ಡದಾರಿ ಹಿಡಿಯುತ್ತಾರೆ, ಪೊಲೀಸರು ಕೆಲಸದ ಒತ್ತಡದಿಂದ ಹಲವಾರು ರೋಗಗಳನ್ನು ರೂಢಿಸಿಕೊಳ್ಳುತ್ತಾರೆ ಎನ್ನುವುದೂ ತುಂಬಾ ಜನರಿಗೆ ಗೊತ್ತಿಲ್ಲ. ಸುದೈವವೆಂದರೆ ಪೊಲೀಸರ ಬಗ್ಗೆ ಸಹಾನುಭೂತಿ ಇರುವ ಹಲವು ಸಾರ್ವಜನಿಕರು ಇನ್ನೂ ಇದ್ದಾರೆ. ತಮ್ಮ ಕೈ ಕೆಳಗಿನ ಅಧಿಕಾರಿ/ಸಿಬ್ಬಂದಿ ವರ್ಗದವರ ಕಲ್ಯಾಣದ ಬಗ್ಗೆ ಯೋಚಿಸುವ ಹಿರಿಯ ಅಧಿಕಾರಿಗಳಿದ್ದಾರೆ. ಪೊಲೀಸ್ ವ್ಯವಸ್ಥೆಯ ಸಮಸ್ಯೆಗಳಿಗೆ ಸ್ಪಂದಿಸಲು ಸದಾ ಸನ್ನದ್ಧವಾಗಿರುವ ಸರಕಾರಗಳಿವೆ. ಆದರಿಂದಾಗಿಯೇ ಪೊಲೀಸರ ಕಲ್ಯಾಣಕ್ಕಾಗಿ ಹಲವಾರು ಯೋಜನೆಗಳು ಬಹಳ ಹಿಂದೆಯೇ ಮೂಡಿಬಂದಿದೆ.

ಪೊಲೀಸರು 3 ಮುಖ್ಯ ಸಮಸ್ಯೆಗಳನ್ನು ಎದುರಿಸುತ್ತಾರೆ. ಮೊದಲನೆಯದು ವಸತಿ, ಎರಡನೆಯದು ಆರೋಗ್ಯ, ಹಾಗೂ ಮೂರನೆಯದು ಮಕ್ಕಳ ವಿದ್ಯಾಭ್ಯಾಸ. ಇವನ್ನು ಪರಿಹರಿಸಬೇಕಾದರೆ ಮುಖ್ಯವಾಗಿ ಬೇಕಾದ್ದು ಆರ್ಥಿಕ ನೆರವು. ರಾಜ್ಯದಲ್ಲಿ ಪೊಲೀಸರ ವಸತಿಗೆ ಸರ್ಕಾರ ಆದ್ಯತೆ ನೀಡಿರುವುದರಿಂದ ನಮ್ಮಲ್ಲಿ ಈ ಸಮಸ್ಯೆ ಬೇರೆಯವರಷ್ಟು ಇಲ್ಲ. ಉಳಿದ ಎರಡು ಸಮಸ್ಯೆಗಳ ನಿವಾರಣೆಗೆ ಬೇಕಾದ ಸಂಪೂರ್ಣ ಆರ್ಥಿಕ ನೆರವನ್ನು ಸರಕಾರವೇ ನೀಡಲು ಸಾಧ್ಯವಾಗದಿದ್ದಾಗ ಪೊಲೀಸ್ ಕ್ಷೇಮಾಭಿವೃದ್ಧಿಗೆ ನಿಧಿಯೊಂದನ್ನು ಸ್ಥಾಪಿಸಿ ಸಾರ್ವಜನಿಕರಿಂದ ವಂತಿಗೆ ಸಂಗ್ರಹಿಸಲು ಸರ್ಕಾರಗಳು ಒಪ್ಪಿಗೆ ನೀಡಿದ ಫಲವಾಗಿ ಉಗಮಗೊಂಡದ್ದು ಪೊಲೀಸ್ ಕಲ್ಯಾಣ ನಿಧಿ ಹಾಗೂ ನಿವೃತ್ತ ಪೊಲೀಸ್ ಅಧಿಕಾರಿಗಳ ಕ್ಷೇಮ ನಿಧಿ.

ಈ ನಿಧಿಗಳ ಸ್ಥಾಪನೆಗಾಗಿ ರಾಜ್ಯ ಸರಕಾರಗಳು ಮೂಲಧನವನ್ನು ನೀಡಿದ್ದೋ ಅಲ್ಲದೆ ಸಾಂಸ್ಕೃತಿಕ ಕಾರ್ಯಕ್ರಮಗಳನ್ನೇರ್ಪಡಿಸಿ ನಿಧಿ ಸಂಗ್ರಹಿಸಲು ಪೊಲೀಸರಿಗೆ ಅನುಮತಿಯನ್ನು ನೀಡಿದವು. ತತ್ಪರಿಣಾಮವಾಗಿ ಹಲವಾರು ರಾಜ್ಯಗಳಲ್ಲಿ, ಜಿಲ್ಲೆಗಳಲ್ಲಿ ಪೊಲೀಸ್ ಬೆನವಲೆಂಟ್ ಫಂಡ್ ಸ್ಥಾಪನೆಯಾಯಿತು. ಈ ರೀತಿ ಸಂಗ್ರಹಿಸಿದ ಹಣವನ್ನು ಬ್ಯಾಂಕುಗಳಲ್ಲಿ ಇಟ್ಟು ಬಂದ ಬಡ್ಡಿಯಿಂದ ಪೊಲೀಸರಿಗೆ ಆರ್ಥಿಕ ನೆರವು ನೀಡುವ ಕಾರ್ಯಕ್ರಮಗಳು ಆರಂಭವಾದವು. ಸಹಜವಾಗಿ ಬೇಡಿಕೆ ಹೆಚ್ಚಾದಂತೆ ಮೂಲ ನಿಧಿಯನ್ನು ಹೆಚ್ಚಿಸುವ ಅವಶ್ಯಕತೆ ಉಂಟಾಯಿತು. ಆದ್ದರಿಂದ ಪ್ರತಿವರ್ಷವೂ ಪೊಲೀಸ್ ಧ್ವಜದಿನಾಚರಣೆ ಎನ್ನುವ ದಿನವನ್ನು ಆಚರಿಸುವ ಸಂಪ್ರದಾಯ ಪ್ರಾರಂಭವಾಯಿತು.

ಭಾರತದ ರಕ್ಷಣಾ ಪಡೆಗಳು ಹೇಗೆ ಪ್ರತಿ ವರ್ಷವೂ ಧ್ವಜ ದಿನಾಚರಣೆ ಆಚರಿಸಿ ಧ್ವಜಗಳನ್ನು ಮಾರಾಟ ಮಾಡಿ ಹಣ ಸಂಗ್ರಹಿಸುತ್ತಿವೆಯೋ ಹಾಗೆಯೇ ಪೊಲೀಸ್ ಧ್ವಜದಿನಾಚರಣೆ ಆಚರಿಸಿ ಧ್ವಜಗಳ ಮಾರಾಟದಿಂದ ಬಂದ ಹಣವನ್ನು ಕಲ್ಯಾಣನಿಧಿಗೆಂದು ಜೋಡಿಸಲಾಗುತ್ತಿದೆ. ನಮ್ಮ ರಾಜ್ಯದಲ್ಲಿ ಪ್ರತಿವರ್ಷವೂ 2ನೇ ಏಪ್ರಿಲ್‌ರಂದು ಪೊಲೀಸ್ ಧ್ವಜದಿನಾಚರಣೆಯನ್ನು ಬೆಂಗಳೂರಿನಲ್ಲಿ ಹಾಗೂ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲೂ ಏರ್ಪಡಿಸಲಾಗುತ್ತಿದೆ. 2ನೇ ಏಪ್ರಿಲ್ ವೈಶಿಷ್ಟ್ಯವೆಂದರೆ 1965ರ ಆ ದಿನದಂದು ಕರ್ನಾಟಕ ರಾಜ್ಯದ ಪೊಲೀಸ್ ಅಧಿನಿಯಮ ಜಾರಿಗೆ ಬಂದಿದ್ದಲ್ಲದೆ ಕರ್ನಾಟಕದ ಹಲವಾರು ಪೊಲೀಸ್ ಪಡೆಗಳು ಏಕೀಕರಣಗೊಂಡವು.

ಸಾಮಾನ್ಯವಾಗಿ ಪೊಲೀಸರಿಗೆ ಕಲ್ಯಾಣ ನಿಧಿಯಿಂದ ನೀಡುವ ನೆರವು ಅವರ ಮಕ್ಕಳ ವಿದ್ಯಾಭ್ಯಾಸಕ್ಕೆ ಹಾಗೂ ಕುಟುಂಬದವರ ಆರೋಗ್ಯಪಾಲನೆಗೆ ಮುಡಿಪಾಗಿದೆ. ಪೊಲೀಸ್ ಮಕ್ಕಳಿಗೆ ಉತ್ತಮ ಶಿಕ್ಷಣ ನೀಡಲು ನಮ್ಮ ರಾಜ್ಯದಲ್ಲಿ ದೇಶದಲ್ಲೇ ಪ್ರಪ್ರಥಮವಾದ ಒಂದು ವಿನೂತನ ಯೋಜನೆ ಹಮ್ಮಿಕೊಳ್ಳಲಾಗಿದೆ. ಧಾರವಾಡದಲ್ಲಿ ಪೊಲೀಸರ ಮಕ್ಕಳಿಗಾಗಿ ಒಂದು ವಸತಿ ಶಾಲೆಯನ್ನು 1997ರ ಆಗಸ್ಟ್‌ನಿಂದ ತೆರೆಯಲಾಗಿದೆ. ಈ ಶಾಲೆಯ ಉದ್ದೇಶ ಪೊಲೀಸರ ಮಕ್ಕಳಿಗೆ ಅತ್ಯುತ್ತಮ ಶಿಕ್ಷಣ ನೀಡುವುದರ ಜತೆಗೆ ಅವರ ಸರ್ವಾಂಗೀಣ ಅಭಿವೃದ್ಧಿಗೆ ಮಾರ್ಗದರ್ಶನ ನೀಡಿ ವಿಕಾಸಕ್ಕೆ ನೆರವಾಗುವುದು. ಸಾಮಾನ್ಯವಾಗಿ ಪೊಲೀಸರಿಗೆ ತಮ್ಮ ಮಕ್ಕಳ ವಿದ್ಯಾಭ್ಯಾಸದ ಬಗ್ಗೆ ತಲೆ ಕೆಡಿಸಿಕೊಳ್ಳಲು ವೇಳೆಯೇ ಇಲ್ಲವಾದ್ದರಿಂದ ಅನೇಕ ಪೊಲೀಸರ ಮಕ್ಕಳು ಕೆಟ್ಟ ದಾರಿಗೆ ಬಿದ್ದು ಹಾಳಾಗುತ್ತಿದ್ದಾರೆ. ಇದರಿಂದ ಪೊಲೀಸ್ ಕಾರ್ಯಕ್ಷಮತೆಯ ಮೇಲೆ ಪ್ರತಿಕೂಲ ಪರಿಣಾಮವಾಗಿದೆ ಎಂದು ಮನಗಂಡ ಕರ್ನಾಟಕ ಪೊಲೀಸರು ಈ ಶಾಲೆಯನ್ನು ತೆರೆದಿದ್ದಾರೆ. 12 ತರಗತಿಗಳಿಂದ ಕೂಡಿದ 300 ಮಕ್ಕಳಿರುವ ಈ ಶಾಲೆಯ ಖರ್ಚುವೆಚ್ಚಗಳನ್ನು ಪೊಲೀಸ್ ಕ್ಷೇಮಾಭಿವೃದ್ಧಿ ನಿಧಿಯಿಂದ ಭರಿಸಲಾಗುತ್ತಿದೆ. ಇದಲ್ಲದೆ ಪ್ರತಿ ಜಿಲ್ಲೆಯಲ್ಲೂ ಪೊಲೀಸ್ ಕಲ್ಯಾಣ ನಿಧಿಯಿಂದ ಮಕ್ಕಳ ವಿದ್ಯಾಭ್ಯಾಸಕ್ಕೆಂದು ಆರ್ಥಿಕ ನೆರವನ್ನು ನೀಡಲಾಗುತ್ತಿದೆ. ಹಲವಾರು ಘಟಕಗಳಲ್ಲಿ ಪೊಲೀಸರ ಮಕ್ಕಳಿಗೆ ಕಂಪ್ಯೂಟರ್, ಬೆರಳಚ್ಚು ವೃತ್ತಿ ಶಿಕ್ಷಣ ತರಬೇತಿ ಇತ್ಯಾದಿ ನೀಡಲಾಗುತ್ತಿದೆ.

ಪೊಲೀಸರ ಕುಟುಂಬದ ಆರೋಗ್ಯಕ್ಕಾಗಿ ಬೆಂಗಳೂರಿನಲ್ಲಿ ಒಂದು ಸುಸಜ್ಜಿತ ಪೊಲೀಸ್ ಆಸ್ಪತ್ರೆಯನ್ನು ತೆರೆಯಲಾಗಿದೆ. ಹಲವಾರು ಜಿಲ್ಲೆಗಳಲ್ಲಿ ಕ್ಲಿನಿಕ್‌ಗಳನ್ನು ತೆರೆಯಲಾಗಿದೆ. ಪೊಲೀಸರ ಕುಟುಂಬಗಳು ಉತ್ತಮ ವೈದ್ಯಕೀಯ ಸೌಲಭ್ಯವನ್ನು ಪಡೆಯಬೇಕು ಎನ್ನುವ ನಿಟ್ಟಿನಿಂದ ರಾಜ್ಯದಲ್ಲಿ ಆರೋಗ್ಯ ಭಾಗ್ಯ ಎನ್ನುವ ವಿನೂತನ ಯೋಜನೆ ಆರಂಭವಾಗಿದ್ದು ಈ ಯೋಜನೆಗೆ ಸೇರಿದ ಪೊಲೀಸರಿಂದ ಪ್ರತಿ ಮಾಹೆ 40 ರೂಪಾಯಿಗಳ ವಂತಿಗೆ ಪಡೆದು ಪೊಲೀಸರ ಕುಟುಂಬದವರಿಗೆ ಕಾಯಿಲೆ ಬಂದಾಗ ಸುಸಜ್ಜಿತವಾದ ಆಸ್ಪತ್ರೆಗಳಲ್ಲಿ ತಪಾಸಣೆ ಮಾಡಿಸಿಕೊಳ್ಳಬಹುದಾಗಿದೆ.

ಹಲವಾರು ಜಿಲ್ಲೆಗಳು ಸಮುದಾಯ ಭವನಗಳನ್ನು ನಿರ್ಮಿಸಲಾಗಿದ್ದು, ಇಲ್ಲಿ ಪೊಲೀಸರು ತಮ್ಮ ಕುಟುಂಬವರ್ಗದವರ ಮದುವೆ ಮುಂಜಿ ಇತ್ಯಾದಿ ಸಮಾರಂಭಗಳನ್ನು ನೆರವೇರಿಸಬಹುದಾಗಿದೆ.

ಪೊಲೀಸರು ಸಮಾಜಕ್ಕಾಗಿಯೇ ತಮ್ಮ ತನು ಮನ ಹಾಗೂ ಪ್ರಾಣವನ್ನು ಮುಡಿಪಿಟ್ಟಿರುವಾಗ ಪೊಲೀಸರ ಕ್ಷೇಮಾಭಿವೃದ್ಧಿಯ ಹೊಣೆಗಾರಿಕೆ ಸಮಾಜದ ಮೇಲೆ ಬಹಳಷ್ಟು ಇದೆ. ಇದನ್ನು ಸಮಾಜವು ಅರಿತುಕೊಂಡಾಗ ಪೊಲೀಸರು ಇನ್ನೂ ಹೆಚ್ಚಿನ ರೀತಿಯಲ್ಲಿ ಸಮಾಜಕ್ಕೆ ಸೇವೆ ಸಲ್ಲಿಸಬಲ್ಲರು. ಪೊಲೀಸ್ ಧ್ವಜ ದಿನಾಚರಣೆ ಸಾರ್ವಜನಿಕರು ಪೊಲೀಸರಿಗೆ ಸಹಾಯ ಹಸ್ತಚಾಚಲು ಉತ್ತಮ ಅವಕಾಶ.

# 40

## ಕಾನೂನು ಸುವ್ಯವಸ್ಥೆ ನಿಭಾಯಿಸುವಲ್ಲಿ ಪೊಲೀಸರು ಹಿಂಜರಿಯುತ್ತಿದ್ದಾರೆಯೇ

ಇತ್ತೀಚೆಗೆ ತಮಿಳುನಾಡು ರಾಜ್ಯದ ಚೆನ್ನೈನಲ್ಲಿ ಎರಡು ದೊಡ್ಡ ಗುಂಪು ಘರ್ಷಣೆಗಳು ನಡೆದವು. ಅಲ್ಲಿನ ಕಾನೂನು ಮಹಾ ವಿದ್ಯಾಲಯದ ಆವರಣದಲ್ಲಿ ವಿದ್ಯಾರ್ಥಿಗಳ ಎರಡು ಗುಂಪುಗಳು ಹೊಡೆದಾಡಿಕೊಂಡು ಭಾರಿ ಪ್ರಮಾಣದ ಆಸ್ತಿಪಾಸ್ತಿಗಳ ನಷ್ಟಕ್ಕೆ ಕಾರಣವಾದವು. ಗಲಭೆ ಆಗಬಹುದೆಂದು ಕಾನೂನು ಕಾಲೇಜಿನ ಮುಂದುಗಡೆ ಹಿರಿಯ ಅಧಿಕಾರಿಗಳ ನೇತ್ರತ್ವದ ಪೊಲೀಸ್ ತಂಡವನ್ನು ಸಜ್ಜುಗೊಳಿಸಲಾಗಿತ್ತು. ತಮ್ಮ ಕಣ್ಣೆದುರೇ ಗಲಭೆ ನಡೆಯುತ್ತಿದ್ದರೂ ಪೊಲೀಸ್ ಸಿಬ್ಬಂದಿ ನಿಷ್ಕ್ರಿಯವಾಗಿ ಕುಳಿತು ತಮಾಷೆ ಆಟವನ್ನು ನೋಡುವಂತೆ ವಿದ್ಯಾರ್ಥಿಗಳ ಹೊಡೆದಾಟವನ್ನು ನೋಡುತ್ತಾ ಕುಳಿತಿದ್ದರು. ಇದನ್ನು ಟಿ.ವಿ.ವಾಹಿನಿಗಳಲ್ಲಿ ಪದೇ ಪದೇ ಬಿತ್ತರಿಸಲಾಯಿತು. ಹಿರಿಯ ಅಧಿಕಾರಿಗಳ ಮಧ್ಯ ಪ್ರವೇಶದಿಂದ ಘಟನೆಯನ್ನು ತಹಬದಿಗೆ ತರಲಾಯಿತು. "ನೀವು ಏಕೆ ನಿಮ್ಮ ಕಣ್ಣೆದುರಿಗೇ ನಡೆಯುತ್ತಿದ್ದ ಗಲಭೆಯನ್ನು ತಪ್ಪಿಸಲಿಲ್ಲ" ಎಂದು ಅಲ್ಲಿದ್ದ ಹಿರಿಯ ಪೊಲೀಸ್ ಅಧಿಕಾರಿಗಳನ್ನು ಕೇಳಿದಾಗ "ಘಟನೆ ಕಾಲೇಜಿನ ಆವರಣದಲ್ಲಿ ನಡೆಯುತ್ತಿತ್ತು. ಕಾಲೇಜಿನ ಪ್ರಾಂಶುಪಾಲರ ಆದೇಶವಿಲ್ಲದೆ ನಾವು ಕಾಲೇಜು ಆವರಣದೊಳಗೆ ಪ್ರವೇಶಿಸಲು ಬರುವುದಿಲ್ಲ. ಹೀಗಾಗಿ ನಾವು ಯಾವುದೇ ಕ್ರಮವನ್ನು ಕೈಗೊಳ್ಳಲಿಲ್ಲ" ಎಂದು ಅವರು ಉತ್ತರಿಸಿದರು. ಕರ್ತವ್ಯ ಲೋಪದ ಆರೋಪದ ಮೇಲೆ ಈ ಸಂಬಂಧ ಹಲವಾರು ಪೊಲೀಸರನ್ನು ಅಮಾನತ್ತಿನಲ್ಲಿ ಇಡಲಾಯಿತು. [ಅಂದ ಹಾಗೆ ಪೊಲೀಸರು ಅಪರಾಧಗಳನ್ನು ತಡೆಯಲು ಯಾವುದೇ ಪ್ರದೇಶಕ್ಕೆ ಪ್ರವೇಶಿಸುವುದಕ್ಕೆ ಕಾನೂನಿನ ನಿರ್ಬಂಧವಿಲ್ಲ] ಇದಾದ ಕೆಲವೇ ದಿನಗಳ ನಂತರ

ಮದ್ರಾಸ್ ಹೈಕೋರ್ಟ್ ಆವರಣದಲ್ಲಿ ವಕೀಲರ ಎರಡು ಗುಂಪುಗಳು ಘರ್ಷಣೆಯಲ್ಲಿ ತೊಡಗಿದ್ದವು. ಗಲಭೆಯನ್ನು ನಿಯಂತ್ರಿಸಲು ಪೊಲೀಸರು ಮಧ್ಯಪ್ರವೇಶ ಮಾಡಬೇಕಾಯಿತು. ಪೊಲೀಸರ ಈ ಕ್ರಮದಿಂದ ಹಲವಾರು ಜನರಿಗೆ ಗಾಯಗಳು ಆದವು. ಆನಂತರ ಈ ಘಟನೆ ಪೊಲೀಸರು ಹಾಗೂ ವಕೀಲರ ನಡುವಿನ ಸಂಘರ್ಷಣೆಯಾಗಿ ವಕೀಲರು ನ್ಯಾಯಾಲಯಗಳನ್ನು ಬಹಿಷ್ಕರಿಸಿದರು. ಘಟನೆ ಬಗ್ಗೆ ಸುಪ್ರೀಂಕೋರ್ಟ್ ಮಧ್ಯ ಪ್ರವೇಶಿಸಬೇಕಾಯಿತು. ಈ ಸಂಬಂಧ ಇಬ್ಬರು ಹಿರಿಯ ಪೊಲೀಸ್ ಅಧಿಕಾರಿಗಳನ್ನು ಅವಮಾನತ್ತುಗೊಳಿಸಲಾಯಿತು. ಹಲವಾರು ಹಿರಿ ಕಿರಿಯ ಅಧಿಕಾರಿಗಳು ವರ್ಗಾವಣೆಗೊಂಡರು.

ಕಾನೂನು ಸುವ್ಯವಸ್ಥೆ ಕಾಪಾಡಲು ಮುಂದಾದರೂ ನಮ್ಮ ವಿರುದ್ಧ ಆಡಳಿತಾತ್ಮಕ ಕ್ರಮ ಜರುಗಿಸಲಾಯಿತು. ನಿಷ್ಕ್ರಿಯರಾಗಿದ್ದರೂ ಇದೇ ರೀತಿ ತೊಂದರೆ ಅನುಭವಿಸಬೇಕಾಯಿತು ಎಂದು ಚೆನ್ನೈನ ಹಲವಾರು ಪೊಲೀಸರು ತಮ್ಮ ಅಳಲು ತೋಡಿಕೊಂಡರು. ಹೌದು ಪೊಲೀಸರು ಕಾನೂನು ಸುವ್ಯವಸ್ಥೆ ನಿಭಾಯಿಸುವಲ್ಲಿ ಈ ರೀತಿ ಧ್ವಂದ್ವಗಳನ್ನು ಎದುರಿಸಬೇಕಾಗುತ್ತದೆ. ಪೊಲೀಸರ ಕರ್ತವ್ಯ ಅಪರಾಧಗಳನ್ನು ತಡೆಗಟ್ಟುವುದು. ಅಪರಾಧಗಳ ಪತ್ತೆ ಹಚ್ಚುವುದು ಹಾಗೂ ಕಾನೂನು ಸುವ್ಯವಸ್ಥೆ ಕಾಪಾಡುವುದು. ತಮ್ಮ ಕಣ್ಣ ಮುಂದೆಯೇ ಅಪರಾಧ ಆಗುತ್ತಿದ್ದರೆ ಅವನ್ನು ತಡೆದು ನಿಯಂತ್ರಿಸಬೇಕಾದದ್ದು ಪ್ರತಿಯೊಬ್ಬ ಪೊಲೀಸನ ಕಾನೂನುಬದ್ಧ ಕರ್ತವ್ಯವಾಗಿದೆ.

ವಸ್ತುಸ್ಥಿತಿ ಹೀಗಿರುವಾಗ ಪೊಲೀಸರ ಎದುರೇ ಗುಂಪುಗಳ ಘರ್ಷಣೆಗಳು ನಡೆದಾಗ ಪೊಲೀಸರು ಈ ಘರ್ಷಣೆಗಳನ್ನು ತಡೆಯಲು ಕಾನೂನು ರೀತ್ಯ ಅಧಿಕಾರ ಹೊಂದಿರುತ್ತಾರೆ. ಘರ್ಷಣೆಗಳನ್ನು ಎದುರಿಸಲು ಪೊಲೀಸರು ಅಶ್ರುವಾಯು ಪ್ರಯೋಗ. ಬೆತ್ತದ ಪ್ರಯೋಗ. ಹಾಗೂ ಮದ್ದುಗುಂಡುಗಳ ಪ್ರಯೋಗ ಮಾಡಲು ಅಧಿಕಾರವಿದೆ. ಯಾವ ಗುಂಪಿನ ಮೇಲೆ ಯಾವ ಪ್ರಮಾಣದ ಬಲ ಪ್ರಯೋಗ ಮಾಡಬೇಕು ಎನ್ನುವುದನ್ನು ನಿರ್ಧರಿಸಬೇಕಾದವರು ಘಟನೆಯ ಸ್ಥಳದಲ್ಲಿಯೇ ಇದ್ದ ಪೊಲೀಸರೇ ಹೊರತು ಬೇರೆಯವರಲ್ಲ. ಗುಂಪನ್ನು ಚದುರಿಸುವ ತೀರ್ಮಾನ ಕೈಗೊಳ್ಳುವಾಗ ಸ್ಥಳದಲ್ಲಿ ಇದ್ದ ಪೊಲೀಸ್ ಅಧಿಕಾರಿ ವಸ್ತುಸ್ಥಿತಿಯನ್ನು ಅವಲೋಕಿಸಿ ತೀರ್ಮಾನ ಕೈಗೊಳ್ಳಬೇಕಾಗುತ್ತದೆ. ಈ ತೀರ್ಮಾನ ಸ್ಥಳದಲ್ಲಿ ಇದ್ದ ಅತಿ ಹಿರಿಯ ಅಧಿಕಾರಿಯ ವಿವೇಚನೆಗೆ ಬಿಟ್ಟ ವಿಷಯ. ಸಾಮಾನ್ಯವಾಗಿ ಘರ್ಷಣೆಯನ್ನು ತಡೆಯಲು ಪೊಲೀಸರು ಮೊದಲಿಗೆ ಅಶ್ರುವಾಯು ಪ್ರಯೋಗಿಸುತ್ತಾರೆ. ಸಾರ್ವಜನಿಕರಿಗೆ ತಿಳಿದಿರುವಂತೆ ಅಶ್ರುವಾಯು ಪರಿಣಾಮಕಾರಿ ಆಗಬೇಕಾದಲ್ಲಿ ಯಾವ ರೀತಿ ಆ ಜಾಗದಲ್ಲಿ ಗಾಳಿ ಬೀಸುತ್ತಿದೆ ಎನ್ನುವುದರ ಮೇಲೆ ಅವಲಂಬಿತವಾಗುತ್ತದೆ. ಕೆಲವು ಬಾರಿ ತಾವು ಪ್ರಯೋಗಿಸಿದ ಅಶ್ರುವಾಯು ತಮ್ಮ ಮೇಲೆಯೇ ಪರಿಣಾಮ ಬೀರಬಹುದೆಂದು ಪೊಲೀಸರಿಗೆ ತಿಳಿದಿದೆ. ಗುಂಪುಗಳನ್ನು ನಿಯಂತ್ರಿಸುವಲ್ಲಿ ಅಶ್ರುವಾಯುವಿನ ಪರಿಣಾಮ ಸೀಮಿತವಾದುದು.

ಅಶ್ರುವಾಯು ಪರಿಣಾಮಕಾರಿ ಆಗದಿದ್ದಾಗ ಪೋಲೀಸರು ತಮ್ಮ ಲಾಠಿಗಳನ್ನು ಬಳಸುತ್ತಾರೆ. ಎದುರು ಇರುವ ಗುಂಪಿನ ಮೇಲೆ ಪೋಲೀಸರು ಲಾಠಿ ಪ್ರಯೋಗ ಮಾಡುವಾಗ ಅವರಿಗೆ ತಮ್ಮ ಮುಂದುಗಡೆ ಇರುವವರು ಗಲಭೆಕೋರರರೇ. ಇಲ್ಲವೇ ಮಾಧ್ಯಮದವರೇ. ಇಲ್ಲವೇ ಅಮಾಯಕರೇ ಎನ್ನುವ ಬಗ್ಗೆ ತಿಳಿಯುವುದಿಲ್ಲ. ಲಾಠಿಗಳನ್ನು ಜಳಪಿಸುತ್ತ ಮುಂದಿರುವ ಗುಂಪನ್ನು ಚದುರಿಸಿವಾಗ ಲಾಠಿ ಏಟು ತಿನ್ನುವವರು ಅಮಾಯಕರೇ ಹೊರತು ಗಲಭೆಗಳನ್ನು ಪ್ರಾರಂಭಿಸುವವರು ಅಲ್ಲ. ಹಲವಾರು ಬಾರಿ ಲಾಠಿ ಚಾರ್ಜ್ ಮಾಡುವಾಗ ಗುಂಪಿನಲ್ಲಿ ಇರುವ ಕೆಲವರು ಪೋಲೀಸರ ಲಾಠಿಗಳನ್ನು ಕಸಿದುಕೊಂಡು ಪೋಲೀಸರ ಮೇಲೆಯೂ ಹಲ್ಲೆ ಮಾಡಿದ ನಿರ್ದಶನಗಳು ಹಲವಾರು ಇವೆ.

ಒಂದು ವೇಳೆ ಲಾಠಿ ಪ್ರಯೋಗ ಪರಿಣಾಮಕಾರಿ ಆಗದಿದ್ದಲ್ಲಿ ಪೋಲೀಸರ ಬಳಿ ಇರುವ ಕೊನೆಯ ಅಸ್ತ್ರವೆಂದರೆ ಗುಂಪಿನ ಮೇಲೆ ಗುಂಡನ್ನು ಹಾರಿಸುವುದು. ಗುಂಪಿನ ಮೇಲೆ ಗುಂಡನ್ನು ಹಾರಿಸುವ ಮುಂಚೆ ಪೋಲೀಸರು ಲೌಡ್‌ಸ್ಪೀಕರ್ ಮೂಲಕ ಎದುರುಗಡೆ ಇರುವ ಗುಂಪಿಗೆ ಚದುರಲು ತಿಳಿಸಿ ತಮ್ಮ ಮಾತಿಗೆ ಗುಂಪಿನಲ್ಲಿ ಇರುವ ಜನರು ಓಗೊಡದಿದ್ದಾಗ ಗುಂಡುಗಳನ್ನು ಹಾರಿಸಬಹುದಾಗಿದೆ. ಕೆಲವು ಜನರ ಅಭಿಪ್ರಾಯದಂತೆ ಪೋಲೀಸರು ಗಾಳಿಯಲ್ಲಿ ಗುಂಡು ಹಾರಿಸಬೇಕು ಹಾಗೂ ಎದುರುಗಡೆ ಇರುವ ಗುಂಪಿನ ಜನರ ಕಾಲಿಗೆ ಗುರಿ ಮಾಡಿ ಗುಂಡು ಹಾರಿಸಬೇಕು ಎನ್ನುವುದು. ಈ ರೀತಿ ಯಾವ ನಿಯಮಗಳೂ ರೂಪಿತವಾಗಿಲ್ಲ. ಪೋಲೀಸರು ಗುಂಡು ಹಾರಿಸಿದಾಗ ಕೆಲವೇ ಸುತ್ತು ಗುಂಡುಗಳನ್ನು ಗುಂಪಿನತ್ತ ಹಾರಿಸಿದರೆ ಹಲವಾರು ಜನರು ಪ್ರಾಣವನ್ನು ಕಳೆದುಕೊಳ್ಳಬಹುದು. ಗೋಲಿಬಾರ್ ಮಾಡಿದ ನಂತರ ಸರ್ವೇಸಾಮಾನ್ಯವಾಗಿ ಮಾಜಿಸ್ಟ್ರೇಟರ ಅಥವಾ ನ್ಯಾಯಾಂಗದ ತನಿಖೆ ನಡೆಯುವುದರಿಂದ ಪೋಲೀಸರು ಸುಮ್ಮಸುಮ್ಮನೇ ಗುಂಪಿನತ್ತ ಗುಂಡು ಹಾರಿಸುವುದಿಲ್ಲ. ಎಷ್ಟು ಸುತ್ತು ಗುಂಡುಗಳನ್ನು ಹಾರಿಸಲಾಯಿತು. ಏಕೆ ಹಾರಿಸಲಾಯಿತು ಎನ್ನುವುದರ ಬಗ್ಗೆ ನಿಖರವಾಗಿ ಸಾಕ್ಷಿ ಹೇಳಬೇಕಾದ್ದರಿಂದ ಪೋಲೀಸರು ಗೋಲಿಬಾರ್ ಅನ್ನು ಕೊನೆಯ ಅಸ್ತ್ರವನ್ನಾಗಿ ಉಪಯೋಗಿಸುತ್ತಾರೆ. ತಮ್ಮ ಜೀವಕ್ಕೇ ಅಪಾಯ ಬಂದಾಗ ಪೋಲೀಸರು ಗೋಲೀಬಾರ್ ಮಾಡುತ್ತಾರೆ.

ಅಂದಹಾಗೆ ಈಗಾಗಲೇ ರಾಷ್ಟ್ರದ ವಿವಿದ ಬಾಗಗಳಲ್ಲಿ ನೋಡಿರುವಂತೆ ರಬ್ಬರ್ ಗುಂಡು ಹಾರಿಸಿದಾಗ ಆಗುವ ಪರಿಣಾಮವೂ ನಿಜವಾದ ಗುಂಡು ಹಾರಿಸಿದಷ್ಟೇ ತೀವ್ರ. ಇತ್ತೀಚಿನ ದಿನಗಳಲ್ಲಿ ರಬ್ಬರ್ ಗುಂಡುಗಳು ಲಭ್ಯತೆಯು ಕಡಿಮೆ. ಹಾಗಾಗಿ ಇವುಗಳ ಪ್ರಯೋಗವೂ ಕಡಿಮೆ ಅದೇ ರೀತಿ ನೀರಿನ ರಭಸದ ಸಿಂಪಡಣೆಯೂ ಗುಂಪು ಚದುರಿಸುವಲ್ಲಿ ಅಷ್ಟು ಪರಿಣಾಮಕಾರಿಯಲ್ಲ.

ಸಾರ್ವಜನಿಕರು ತಿಳಿದಿರುವಂತೆ ನಮ್ಮ ದೇಶದಲ್ಲಿ ಪೋಲೀಸರು ಹೆಚ್ಚಾಗಿ ಗೋಲಿಬಾರ್ ಮಾಡುವುದಿಲ್ಲ. 2004-09ರವರೆಗೆ. ಅಂದರೆ ಆರು ವರ್ಷಗಳಲ್ಲಿ ನಮ್ಮ ರಾಷ್ಟ್ರದಲ್ಲಿ 750 ನಾಗರೀಕರು ಪೋಲೀಸ್ ಗೋಲಿಬಾರ್‌ನಲ್ಲಿ ಸಾವನಪ್ಪಿದ್ದಾರೆ. ಭಾರತದ ಜನಸಂಖ್ಯೆಗೆ

ಹೋಲಿಸಿದರೆ ಈ ಸಂಖ್ಯೆ ಆತಂಕಕಾರಿಯಲ್ಲ. ಅಮೇರಿಕಾದ ಟೆಕ್ಸಾಸ್ ನಗರವೊಂದರಲ್ಲೇ ಒಂದೇ ವರ್ಷ 103 ನಾಗರೀಕರು ಪೋಲೀಸರ ಗುಂಡಿಗೆ ಬಲಿಯಾಗಿರುವುದನ್ನು ಕಂಡರೆ ನಮ್ಮ ಪೋಲೀಸರು ಗೋಲೀಬಾರ್ ಪ್ರಿಯರಲ್ಲ ಎನ್ನಬಹುದಾಗಿದೆ.

ಹಿಂಸಾಚಾರದಲ್ಲಿ ತೊಡಗಿರುವ ಗುಂಪುಗಳನ್ನು ಚದುರಿಸುವಲ್ಲಿ ಇತ್ತೀಚಿನ ದಿನಗಳಲ್ಲಿ ಪೋಲೀಸರು ಹಿಂಜರಿಕೆಯನ್ನು ತೋರಿಸುತ್ತಿದ್ದಾರೆ. ಇದಕ್ಕೆ ಮುಖ್ಯಕಾರಣ ತಮ್ಮ ಮೇಲೆ ಮುಂದೆ ಆಗಬಹುದಾದ ಇಲಾಖಾ ವಿಚಾರಣೆ, ಮತ್ತಿತರ ಶಿಸ್ತುಕ್ರಮಗಳ ಬಗ್ಗೆ ಇರುವ ಹೆದರಿಕೆ. ಮಹಾರಾಷ್ಟ್ರದ ಹಿರಿಯ ಪೋಲೀಸ್ ಅಧಿಕಾರಿ ಒಬ್ಬರು ಆ ರಾಜ್ಯದಲ್ಲಿ ಇತ್ತೀಚಿನ ದಿನಗಳಲ್ಲಿ ಗುಂಪುಗಳನ್ನು ಚದುರಿಸಲು ಪೋಲೀಸರು ನಿಷ್ಕ್ರಿಯರಾಗುತ್ತಿದ್ದಾರೆ ಹಾಗೂ ಗುಂಪುಗಳ ಮೇಲೆ ಪರಿಣಾಮಕಾರಿಯಾಗಿ ಬಲಪ್ರಯೋಗ ಮಾಡಲು ಹಿಂಜರಿಯುತ್ತಿದ್ದಾರೆ ಎಂದು ಹೇಳಿದ್ದಾರೆ. ಈ ಮಾತು ಅಕ್ಷರಸಃ ಸತ್ಯ. ಇತ್ತೀಚಿನ ದಿನಗಳಲ್ಲಿ ಕಿರಿಯ ಪೋಲೀಸ್ ಅಧಿಕಾರಿಗಳು ಹಿಂಸಾಚಾರಕ್ಕೆ ಇಳಿಯುವ ಗುಂಪುಗಳ ಮೇಲೆ ಕ್ರಮವನ್ನು ತೆಗೆದುಕೊಳ್ಳಲು ಮುಂದಾಗುತ್ತಿಲ್ಲ. ಸಾಮಾನ್ಯವಾಗಿ ಪೋಲೀಸರು ಬಲಪ್ರಯೋಗ ಮಾಡುವುದು ತಮ್ಮ ಜೀವಕ್ಕೆ ಗಂಡಾಂತರ ಬಂದಾಗ. ಇತ್ತೀಚಿನ ದಿನಗಳಲ್ಲಿ ತಾವು ಬಲಪ್ರಯೋಗ ಮಾಡುವ ಬದಲು ಪೋಲೀಸರು ಸ್ಥಳದಿಂದಲೇ ಓಡಿ ಹೋಗುತ್ತಿದ್ದಾರೆ. ಎಷ್ಟೋ ಬಾರಿ ಹಿರಿಯ ಅಧಿಕಾರಿಗಳ ಆದೇಶವನ್ನೂ ಪಾಲಿಸುತ್ತಿಲ್ಲ. ಹೀಗಾಗಿ ಇತ್ತಿಚಿನ ಗುಂಪು ಘರ್ಷಣೆಗಳಲ್ಲಿ ಹಿರಿಯ ಅಧಿಕಾರಿಗಳೇ ಹೆಚ್ಚಾಗಿ ಗಾಯಗೊಳ್ಳುತ್ತಿದ್ದಾರೆ. ಕಿರಿಯ ಅಧಿಕಾರಿಗಳ ನೈತಿಕ ಸ್ಥೈರ್ಯ ಸಾಕಷ್ಟು ಕುಸಿದಿರುವುದು ಕಂಡುಬಂದಿದೆ. ಈ ರೀತಿ ಆಗುತ್ತಿರುವುದು ಸಮಾಜಕ್ಕೆ ಪ್ರಮಾದದಾಯಕ. ಕಾನೂನನ್ನು ರಕ್ಷಿಸಬೇಕಾದ ಪೋಲೀಸರೇ ನಮಗೆ ಮುಂದೆ ತೊಂದರೆ ಆಗಬಹುದು ಎನ್ನುವ ಹೆದರಿಕೆಯಿಂದ ಗುಂಪುಗಳನ್ನು ಎದುರಿಸದೇ ಪಲಾಯನಗೈದರೆ ಸಾರ್ವಜನಿಕರ ಜೀವ ಹಾಗೂ ಆಸ್ತಿಪಾಸ್ತಿಗಳಿಗೆ ರಕ್ಷಣೆ ಕೊಡುವವರು ಯಾರು? ಚೆನ್ನೈನ ಕಾನೂನು ವಿದ್ಯಾಲಯದ ಆವರಣದಲ್ಲಿ ತಮ್ಮೆದುರಿಗೆ ಗಲಭೆ ನಡೆಯುತ್ತಿದ್ದರೂ ನಿಷ್ಕ್ರಿಯವಾಗಿ ಕುಳಿತಿದ್ದ ಪೋಲೀಸರನ್ನು ಕಂಡು ಇಡೀ ಸಮಾಜ ಬೆಚ್ಚಿಬಿತ್ತು. ಈ ರೀತಿಯ ಘಟನೆಗಳು ಪುನರಾವರ್ತನೆ ಆಗಬಹುದು.

ಇಂತಹ ಘಟನೆಗಳನ್ನು ತಪ್ಪಿಸಬೇಕಾದರೆ ಪೋಲೀಸರಿಗೆ ಹೆಚ್ಚಿನ ನೈತಿಕ ಸ್ಥೈರ್ಯ ಬರುವಂತೆ ನಡೆದುಕೊಳ್ಳಬೇಕಾದ್ದು ಸಮಾಜದ ಕರ್ತವ್ಯ. ಪೋಲೀಸರು ಕೂತರೂ ತಪ್ಪು. ನಿಂತರೂ ತಪ್ಪು ಎನ್ನುವ ಮನೋಭಾವವನ್ನು ಸಮಾಜವು ಬೆಳೆಸಿಕೊಂಡರೆ ಸಹಜವಾಗಿ ತೊಂದರೆ ಉಂಟಾಗುವುದು ಸಮಾಜಕ್ಕೇ. ಇದನ್ನು ಅರಿತು ನಮ್ಮ ದೇಶದ ಪೋಲೀಸರಿಗೆ ಸಾಕಷ್ಟು ಧೈರ್ಯ ತುಂಬಿದರೆ ಕಾನೂನು ಸುವ್ಯವಸ್ಥೆಯಲ್ಲಿ ಸಕ್ರಿಯ ಪಾತ್ರವನ್ನು ಪೋಲೀಸರು ವಹಿಸಬಹುದಾಗಿದೆ.

# 41

## ಪೊಲೀಸರ ಅತಿರೇಕ - ಕಾರಣಗಳೇನು ?

ಇದೇ ವರ್ಷದ (2009) ಏಪ್ರಿಲ್ 26 ರಿಂದ ಮೇ 3 ರವರೆಗೆ ರಾಜ್ಯದಲ್ಲಿ ಪೊಲೀಸರು ಹಾಗೂ ಸಾರ್ವಜನಿಕರ ನಡುವೆ ನಾಲ್ಕು ಘರ್ಷಣೆಗಳು ನಡೆದಿವೆ. ಪಣಂಬೂರು ಬಂದರಿನಲ್ಲಿ ಚುನಾವಣಾ ಕರ್ತವ್ಯಕ್ಕೆಂದು ಬಂದ ಕೇರಳ ರಾಜ್ಯದ ಮೀಸಲು ಪೊಲೀಸ್ ಪಡೆಯವರು ಸಮುದ್ರ ವಿಹಾರ ಮಾಡುತ್ತಿದ್ದ ಹೆಣ್ಣು ಮಕ್ಕಳ ಜೊತೆ ಅಸಭ್ಯವಾಗಿ ವರ್ತಿಸಿ ತಮ್ಮ ವರ್ತನೆಯನ್ನು ಆಕ್ಷೇಪಿಸಿದ ಸಾರ್ವಜನಿಕರಿಗೆ ಹೊಡೆಬಡೆ ಮಾಡಿ, ಮಧ್ಯ ಪ್ರವೇಶಿಸಿದ ಸ್ಥಳೀಯ ಪೊಲೀಸರ ಜೊತೆಗೂ ಕೈಕೈ ಮಿಲಾಯಿಸಿ ಸಾರ್ವಜನಿಕರ ಆಕ್ರೋಶಕ್ಕೆ ತುತ್ತಾದರು.

ಅದೇ ಜಿಲ್ಲೆಯ ಧರ್ಮಸ್ಥಳದಲ್ಲಿ ಚುನಾವಣೆ ಕರ್ತವ್ಯಕ್ಕೆಂದು ಬಂದಿದ್ದ ಆಂಧ್ರಪ್ರದೇಶದ ಮೀಸಲು ಪಡೆಯ ಪೊಲೀಸರು ಕ್ರಿಕೆಟ್ ಆಡುತ್ತಿದ್ದ ಸಾರ್ವಜನಿಕರೊಡನೆ ಕ್ಷುಲ್ಲಕ ಕಾರಣಕ್ಕಾಗಿ ಜಗಳ ತೆಗೆದು ಆನಂತರ ಸಾರ್ವಜನಿಕರ ಮೇಲೆ ಗುಂಡು ಹಾರಿಸಿ ಒಬ್ಬ ವ್ಯಕ್ತಿಯ ಸಾವಿಗೆ ಕಾರಣರಾಗಿದ್ದಾರೆ. ಆಂದ್ರ ಪೊಲೀಸರಲ್ಲಿ ಕೆಲವರು ಮಧ್ಯಪಾನ ಮಾಡಿ ದೇವಸ್ಥಾನದ ಆವರಣದಲ್ಲಿಯೂ ಅಸಭ್ಯವಾಗಿ ವರ್ತಿಸಿ ಸಾರ್ವಜನಿಕರ ಟೀಕೆಗೆ ಗುರಿಯಾಗಿದ್ದಾರೆ.

ಚಿಕ್ಕಮಗಳೂರು ಜಿಲ್ಲೆಯಲ್ಲಿ ಪೊಲೀಸರು ಹೋಗುತ್ತಿದ್ದ ವ್ಯಾನ್ ಒಂದು ಹಾದಿಹೋಕನೊಬ್ಬನಿಗೆ ಡಿಕ್ಕಿ ಹೊಡೆದು ತಮ್ಮ ಕೃತ್ಯದ ಬಗ್ಗೆ ಪ್ರತಿಭಟಿಸಿದ ಸಾರ್ವಜನಿಕರ ಮೇಲೆ ಪೊಲೀಸರು ಲಾಠಿ ಪ್ರಹಾರ ಮಾಡಿದ ಘಟನೆ ನಡೆದಿದೆ.

ಅದೇ ರೀತಿ ಮಂಡ್ಯ ಜಿಲ್ಲೆಯಲ್ಲಿ ಶ್ರೀರಂಗಪಟ್ಟಣದಲ್ಲಿ ಚುನಾವಣೆ ಕರ್ತವ್ಯಕ್ಕೆ ಬಂದಿದ್ದ ಕೇರಳದ ಪೊಲೀಸರು ಕ್ಷುಲ್ಲಕ ಕಾರಣಕ್ಕಾಗಿ ಪೆಟ್ಟಿಗೆ ಅಂಗಡಿ ಮಾಲೀಕನೊಂದಿಗೆ ಜಗಳವಾಡಿಕೊಂಡು ಅವನಿಗೆ ಹೊಡೆದು ಟೀಕೆಗೆ ಗುರಿಯಾಗಿದ್ದಾರೆ.

ಈ ಘಟನೆಗಳಿಗೆ ಸಂಬಂಧಿಸಿದ ಪೊಲೀಸರು ಬೇರೆ ಬೇರೆ ರಾಜ್ಯಗಳಿಗೆ ಸೇರಿದ್ದರೂ ಅವರ ವರ್ತನೆ ಒಂದೇ ತರಹದ್ದು. ಈ ಮೂರೂ ಪ್ರಕರಣಗಳಲ್ಲಿ ಕಂಡುಬಂದಿರುವ ಮುಖ್ಯ ಅಂಶ ತಾವು ತಪ್ಪು ಮಾಡಿದ್ದರೂ ತಪ್ಪನ್ನು ಆಕ್ಷೇಪಿಸಿದ ಸಾರ್ವಜನಿಕರ ಮೇಲೆಯೇ ಬಲಪ್ರಯೋಗ ಮಾಡಿರುವುದು. ಶಿಸ್ತಿನ ಸಿಪಾಯಿಗಳಾಗಿರಬೇಕಾದ ಪೊಲೀಸರೇ ಶಿಸ್ತನ್ನು ಮರೆತು ಅಶಿಸ್ತು ಹಾಗೂ ಅಸಹನೆಯನ್ನು ತೋರಿಸಿರುವುದು.

ಪಣಂಬೂರು ಪ್ರಕರಣವನ್ನೇ ತೆಗೆದುಕೊಳ್ಳೋಣ. ಸಮುದ್ರ ತೀರಕ್ಕೆ ಬಂದಂತಹ ಕೇರಳದ ಪೊಲೀಸರು. ನಮ್ಮ ರಾಜ್ಯಕ್ಕೆ ಚುನಾವಣೆ ಕರ್ತವ್ಯಕ್ಕೆಂದು ಬಂದಿದ್ದವರು. ಚುನಾವಣೆ ಕರ್ತವ್ಯವನ್ನು ಮುಗಿಸಿ ಅವರು ವಾಯು ವಿಹಾರಕ್ಕೆ ಹೊರಟಾಗ ಅವರ ಜೊತೆ ಸ್ಥಳೀಯ ಪೊಲೀಸರು ಏಕೆ ಇರಲಿಲ್ಲ ಎನ್ನುವುದು ಆಶ್ಚರ್ಯಕರ. ಏಕೆಂದರೆ ಸಾಮಾನ್ಯವಾಗಿ ಬೇರೆ ಊರುಗಳಿಂದ ಪೊಲೀಸ್ ಸಿಬ್ಬಂದಿವರ್ಗ ಬಂದಾಗ ಅವರಿಗೆ ಮಾರ್ಗದರ್ಶನ ನೀಡಲು ಸ್ಥಳೀಯ ಪೊಲೀಸರನ್ನು ನೇಮಿಸಲಾಗುತ್ತದೆ. ಕೇರಳದ ಪೊಲೀಸರಲ್ಲಿ ಕೆಲವರು ಹೆಣ್ಣು ಮಕ್ಕಳೊಡನೆ ಅಸಭ್ಯವಾಗಿ ವರ್ತಿಸಿದಾಗ ಅದೇ ತಂಡದಲ್ಲಿ ಇದ್ದ ಬೇರೆ ಪೊಲೀಸರು ಅವರನ್ನು ಏಕೆ ಹತೋಟಿಯಲ್ಲಿ ಇಡಲಿಲ್ಲ ಎನ್ನುವುದೂ ಇನ್ನೊಂದು ಪ್ರಶ್ನೆ. ಪೊಲೀಸ್ ತಂಡದಲ್ಲಿ ಅಧಿಕಾರಿಗಳು ಯಾರೂ ಇರಲಿಲ್ಲವೇ? ಸ್ಥಳೀಯರಿಂದ ದೂರು ಬಂದಾಗ ದೂರನ್ನು ವಿಚಾರಿಸಲು ಹೋದ ಪಣಂಬೂರು ಠಾಣಾ ಪೊಲೀಸರ ಮೇಲೆ ಕೇರಳ ಪೊಲೀಸರು ಏಕೆ ಕೈ ಮಾಡಿದರು? ಈ ಎಲ್ಲಾ ಪ್ರಶ್ನೆಗಳಿಗೂ ಲಭ್ಯವಾಗುವ ಒಂದು ಉತ್ತರ ಪೊಲೀಸರು ಗುಂಪು ಗುಂಪಾಗಿ ಸಂಚರಿಸುವಾಗ ಅವರಲ್ಲಿ ಉಗಮವಾಗುವ ಮೊಂಡು ಧೈರ್ಯ. ಇಲ್ಲವೇ ಅಹಂ ಭಾವ.

ಧರ್ಮಸ್ಥಳದಲ್ಲೂ ಸರಿ ಸುಮಾರು ಇದೇ ರೀತಿಯ ಸನ್ನಿವೇಶ ಜರುಗಿದೆ. ಸ್ಥಳೀಯರು ಕ್ರಿಕೆಟ್ ಮ್ಯಾಚ್ ಆಡಬೇಕೆಂದು ಹೊರಟಾಗ ಮೈದಾನದಲ್ಲಿ ಆಂಧ್ರಪ್ರದೇಶದ ಪೊಲೀಸರು ಇದ್ದ ಎರಡು ಬಸ್ಸುಗಳು ಬಂದು ನಿಂತಾಗ ಸ್ಥಳೀಯರು ಅವನ್ನು ಬೇರೆ ಕಡೆ ನಿಲ್ಲಿಸಲು ವಿನಂತಿಸಿದಾಗ ಆಂಧ್ರ ಪೊಲೀಸರು ಸಾರ್ವಜನಿಕರ ವಿನಂತಿಯನ್ನು ಧಿಕ್ಕರಿಸಿರುತ್ತಾರೆ. ಅದಲ್ಲದೆ ದೇವಸ್ಥಾನಕ್ಕೆ ಮದ್ಯಪಾನ ಮಾಡಿ ಹೋಗಿದ್ದಾರೆ. ಆನಂತರ ಸ್ಥಳೀಯರು ಪೊಲೀಸ್ ವರ್ತನೆಯನ್ನು ಪ್ರತಿಭಟಿಸಿದಾಗ ಪೊಲೀಸರು ಸಾರ್ವಜನಿಕರಿಗೆ ಲಾಠಿ ರುಚಿ ತೋರಿಸಿದ್ದಾರೆ. ಇದರಿಂದ ರೊಚ್ಚಿಗೆದ್ದ ಜನ ಪೊಲೀಸ್ ಬಸ್‌ಗೆ ಮುತ್ತಿದಾಗ ತಮ್ಮ ವಾಹನದ ಒಳಗಡೆ ಹೋಗಿ ಪ್ರತಿಭಟನಾಕಾರರ ಮೇಲೆ ಗುಂಡನ್ನು ಹಾರಿಸಿದ್ದಾರೆ. ಇಲ್ಲಿಯೂ ಉದ್ಭವವಾಗುವ ಮೊದಲ ಪ್ರಶ್ನೆಯೆಂದರೆ ಆಂಧ್ರಪ್ರದೇಶ ಪೊಲೀಸರ ತಂಡದಲ್ಲಿ ಯಾವುದೇ ಹಿರಿಯ ಪೊಲೀಸ್ ಅಧಿಕಾರಿಗಳು ಇರಲಿಲ್ಲವೇ? ಇದ್ದಿದ್ದಲ್ಲಿ ಗುಂಡನ್ನು ಹಾರಿಸಲು ಈ ಹಿರಿಯ ಅಧಿಕಾರಿ ಅನುಮತಿ

ನೀಡಿದ್ದರೇ? ಆಂಧ್ರ ಪೋಲೀಸರ ತಂಡಕ್ಕೆ ಮಾರ್ಗದರ್ಶನ ಮಾಡಲು ಸ್ಥಳೀಯ ಪೋಲೀಸರು ಹೋಗಿರಲಿಲ್ಲವೇ? ಒಂದು ವೇಳೆ ಹೋಗಿದ್ದರೆ ಅವರು ಮಧ್ಯಸ್ಥಿಕೆ ವಹಿಸಿ ಸಾರ್ವಜನಿಕರು ಹಾಗೂ ಆಂಧ್ರ ಪೋಲೀಸರಿಗೆ ಏಕೆ ರಾಜಿ ಮಾಡಿಸಲಿಲ್ಲ ಎನ್ನುವುದು.

ಧರ್ಮಸ್ಥಳದ ಘಟನೆಯಲ್ಲಿ ಕಂಡುಬರುತ್ತಿರುವ ಇನ್ನೊಂದು ಅಂಶವೆಂದರೆ ಆಂಧ್ರ ಪೋಲೀಸರು ಹೆದರಿ ಸಾರ್ವಜನಿಕರು ತಮ್ಮ ವಾಹನವನ್ನು ಸುಟ್ಟು ಹಾಕಬಹುದು ಎಂಬ ಭಯಕ್ಕೆ ಗುಂಡು ಹಾರಿಸಿರಬಹುದು ಎನ್ನುವುದು. ಇತ್ತೀಚಿನ ದಿನಗಳಲ್ಲಿ ಇಂತಹ ವರ್ತನೆಗಳನ್ನು ನಾವು ಆಗಿಂದ್ದಾಗೆ ಕಾಣುತ್ತಿದ್ದೇವೆ. ಹಲವಾರು ಸಂದರ್ಭಗಳಲ್ಲಿ ಪೋಲೀಸರು ವಾಹನದ ಒಳಗಡೆ ಕುಳಿತುಕೊಂಡೇ ಹೊರಗಡೆ ಇರುವ ಗುಂಪಿನ ಮೇಲೆ ಗುಂಡು ಹಾರಿಸಿರುತ್ತಾರೆ. ತಮ್ಮ ವರ್ತನೆಯಿಂದ ರೊಚ್ಚಿಗೆದ್ದ ಸಾರ್ವಜನಿಕರು ತಮ್ಮನ್ನು ಕೊಂದುಬಿಡುತ್ತಾರೆ ಇಲ್ಲವೇ ತಮ್ಮ ವಾಹನವನ್ನು ಸುಡುತ್ತಾರೆ ಎಂಬ ಹೆದರಿಕೆ ಸ್ಥಳದಲ್ಲೇ ಇದ್ದ ಪೋಲೀಸರಿಗೆ ಬಂರುವುದರಿಂದ ಅವರುಗಳು ಈ ರೀತಿ ಗುಂಡು ಹಾರಿಸಿರಬಹುದೆಂದು ವಿಶ್ಲೇಷಿಸಬಹುದು.

ಚಿಕ್ಕಮಗಳೂರು ಜಿಲ್ಲೆಯ ಘಟನೆಯನ್ನು ತೆಗೆದುಕೊಂಡರೆ ಅಲ್ಲಿಯ ಪೋಲೀಸರ ಅಮಾನವೀಯತೆಯ ಚಿತ್ರ ಎದ್ದು ಕಾಣುತ್ತದೆ. ಪೋಲೀಸ್ ವಾಹನವನ್ನು ನಡೆಸುವಾಗ ಎಚ್ಚರಿಕೆಯಿಂದ ನಡೆಸಬೇಕು. ಒಂದು ವೇಳೆ ಅಪಘಾತ ನಡೆದರೆ ಅಪಘಾತದಲ್ಲಿ ಗಾಯಗೊಂಡ ವ್ಯಕ್ತಿಗೆ ತಕ್ಷಣ ಶುಶ್ರೂಷೆ ಕೊಡಬೇಕು. ಇದನ್ನು ಬಿಟ್ಟು ಅಪಘಾತದ ಬಗ್ಗೆ ಪ್ರತಿಭಟಿಸಲು ಬಂದ ಸ್ಥಳೀಯ ನಾಗರೀಕರ ಮೇಲೆ ಲಾಠಿ ಪ್ರಹಾರ ಮಾಡಿರುವುದೂ ಹೆದರಿಕೆಯ ಪರಿಣಾಮ ಎಂದೇ ಭಾವಿಸಬಹುದು.

ಪೋಲೀಸರು ಒಟ್ಟಾಗಿ ಸಮವಸ್ತ್ರ ಧರಿಸಿ ಕರ್ತವ್ಯ ನಿರ್ವಹಿಸುವಾಗ ಅವರಲ್ಲಿ ಒಂದು ರೀತಿಯ ಮೊಂಡು ಧೈರ್ಯ. ತಮ್ಮ ಕೃತ್ಯದಿಂದಾಗಬಹುದಾದ ಪರಿಣಾಮದ ಬಗ್ಗೆ ಗಮನವಿರದಿರುವುದು. ಕ್ರೌರ್ಯ. ಅಹಂಕಾರ. ಅಮಾಯಕರ ಮೇಲೆ ಬಲಾತ್ಕಾರ. ಅಧಿಕಾರದಿಂದ ಬರುವಂತಹ ಅಮಲು ಮುಂತಾದ ವರ್ತನೆಗಳನ್ನು ನಾವು ಕಾಣಬಹುದಾಗಿದೆ. ಗುಂಪಿನಲ್ಲಿ ಕಾರ್ಯನಿರ್ವಹಿಸುವಾಗ ದೊರಕುವ ಅನಾಮಿಕತೆ [Anonymity] ಇಂತಹ ಪೋಲೀಸ್ ಗುಂಪು ಮಾನಸಿಕ ಸ್ಥಿತಿ [Police Mob-Mentality] ಗೆ ಕಾರಣವಾಗಬಹುದೇನೋ. ನಾವು ವಿಶ್ಲೇಷಿಸುತ್ತಿರುವ ಎಲ್ಲ ಮೂರು ಘಟನೆಗಳಲ್ಲೂ ಇಂತಹ ಮಾನಸಿಕ ಸ್ಥಿತಿ ಬಯಲಿಗೆ ಬಂದಿದೆ.

ಇಂತಹ ಸ್ಥಿತಿಯನ್ನು ಹದ್ದುಬಸ್ತಿನಲ್ಲಿಡಬೇಕಾದರೆ ಪೋಲೀಸರ ಗುಂಪಿನಲ್ಲೇ ಒಬ್ಬ ನಾಯಕ ಇರಬೇಕು. ಆ ನಾಯಕ ತನ್ನ ಗುಂಪಿನ ಮೇಲೆ ನಿಯಂತ್ರಣ ಇಟ್ಟುಕೊಳ್ಳಬೇಕು ಹಾಗೂ ಶಿಸ್ತನ್ನು ಪರಿಪಾಲಿಸಬೇಕು. ಹಾಗೂ ತನ್ನ ತಂಡ ಹದ್ದುಬಸ್ತು ಮೀರದಂತೆ ನೋಡಿಕೊಳ್ಳಬೇಕು.

ಪೊಲೀಸರು ಸಾರ್ವಜನಿಕರನ್ನು ಕಂಡರೆ ಏಕೆ ಹೆದರುತ್ತಾರೆ ಎನ್ನುವುದ ಇಲ್ಲಿ ಉದ್ಭವಿಸುವ ಮುಖ್ಯ ಪ್ರಶ್ನೆ. ಪೊಲೀಸರಿಗೆ ಸಾರ್ವಜನಿಕರು ತಮ್ಮನ್ನು ಸ್ವಲ್ಪವೂ ಮೆಚ್ಚುವುದಿಲ್ಲ. ಹಾಗೂ ತಮ್ಮ ವರ್ತನೆ ಸಾರ್ವಜನಿಕರ ಸಮಗ್ರ ಟೀಕೆಗೆ ಗುರಿಯಾಗಿದೆ ಎನ್ನುವ ವಿಷಯ ಸಾಕಷ್ಟು ತಿಳಿದಿದೆ. ಹೀಗಾಗಿ ಪೊಲೀಸರು ಒಬ್ಬಂಟಿಗರಾಗಿ ಹೋಗುವಾಗ ಇಲ್ಲವೇ ಕರ್ತವ್ಯದ ಮೇಲೆ ಇರದಿದ್ದಾಗ ಸಮವಸ್ತ್ರವನ್ನೇ ಧರಿಸುವುದಿಲ್ಲ. ಬೆಂಗಳೂರು ನಗರದಲ್ಲಿ ನಾನೇ ಹಲವಾರು ಬಾರಿ ನೋಡಿದ್ದೇನೆ. ಡ್ಯೂಟಿ ಮುಗಿಸಿದ ಪೊಲೀಸ್ ಕಾನ್ಸ್‌ಟೇಬಲ್‌ಗಳು ತಮ್ಮ ಟೋಪಿಗಳನ್ನು ಠಾಣೆಯಲ್ಲಿ ಇಟ್ಟು, ತಮ್ಮ ಖಾಕಿ ಶರ್ಟಿನ ಮೇಲೆ ಟಿ-ಶರ್ಟ್ ಒಂದನ್ನು ಇಲ್ಲವೇ ಜಾಕೆಟ್ ಒಂದನ್ನು ಧರಿಸಿಕೊಂಡು ಓಡಾಡುತ್ತಾರೆ. ಯೂನಿಫಾರಂ ಧರಿಸಿ ರಾಜಾರೋಷವಾಗಿ ಸಾರ್ವಜನಿಕರ ಮಧ್ಯೆ ಓಡಾಡಲು ಅವರಿಗೆ ಒಂದು ರೀತಿಯ ಅವ್ಯಕ್ತ ಹಿಂಜರಿಕೆ. ಸಾರ್ವಜನಿಕರ ಜೊತೆ ನಾನೂ ಒಬ್ಬನಲ್ಲ ಹಾಗೂ ನನ್ನನ್ನು ಸಾರ್ವಜನಿಕರು ಒಪ್ಪುವುದಿಲ್ಲ ಎನ್ನುವ ಯಾವುದೋ ರೀತಿಯ ಭಾವನೆ ಅವರನ್ನು ಕಾಡುತ್ತದೆ ಎನಿಸುತ್ತದೆ. ಪೊಲೀಸ್ ಸಿಬ್ಬಂದಿ ತಮ್ಮ ಕರ್ತವ್ಯ ವ್ಯಾಪ್ತಿಯನ್ನು ಹೊರತು ಪಡಿಸಿದರೆ ಸಾರ್ವಜನಿಕರ ಜೊತೆ ಬೆರೆಯುವುದು ತೀರಾ ಕಡಿಮೆ. ತಮ್ಮದೇ ಸೇವೆಯಲ್ಲಿಯೇ ಇರುವ ಇತರರು ಹಾಗೂ ತಮ್ಮ ನೆಂಟರಿಷ್ಟರೊಡನೆ ಬೆರೆಯುತ್ತಾರೆಯೇ ಹೊರತು ಸಾರ್ವಜನಿಕರ ಜೊತೆ ಪೊಲೀಸರಾಗಲೀ ಅವರ ಕುಟುಂಬದವರಾಗಲೀ ಬೆರೆಯುವುದು ಕಡಿಮೆ.

ಇದಲ್ಲದೆ ಪೊಲೀಸರಲ್ಲಿ ಇನ್ನೊಂದು ರೀತಿಯ ಮನೋಭಾವನೆ ತಲೆದೋರುತ್ತದೆ. ಸಮವಸ್ತ್ರ ಧಾರಣೆಯಿಂದ ಹಲವಾರು ಪೊಲೀಸರು ಮಾನಸಿಕವಾಗಿ ತಾನು ಇತರರಿಗಿಂತ ಮೇಲು, ತನಗೆ ಯಾವ ರೀತಿಯ ತೊಂದರೆ ಬರುವುದಿಲ್ಲ ಎನ್ನುವ ಭಾವನೆಯನ್ನು ಬೆಳೆಸಿಕೊಳ್ಳುತ್ತಾರೆ. ನಾವೆಲ್ಲಾ ಮೇಲು ಅಥವಾ ಸಾರ್ವಜನಿಕರು ಕೀಳು ಇಲ್ಲವೇ ನಾವೆಲ್ಲಾ ಕೀಳು ಎನ್ನುವ ವಿಭಿನ್ನ ರೀತಿಯ ಭಾವನೆಗಳು ಪೊಲೀಸರ ಮನಸ್ಸಿನಲ್ಲಿ ಬರುವುದರಿಂದ ಬಹಳಷ್ಟು ಮಂದಿ ಪೊಲೀಸರು ತಾವೂ ಸಾರ್ವಜನಿಕರಲ್ಲಿ ಒಬ್ಬರು ಎನ್ನುವ ಭಾವನೆಯನ್ನು ಇಟ್ಟುಕೊಂಡಿರುವುದಿಲ್ಲ. ಇದರಿಂದಾಗಿ ಅವರು ಸಮಾಜದಿಂದ ದೂರವಾಗಿಯೇ ಉಳಿಯುತ್ತಾರೆ. ಪರಿಣಾಮವಾಗಿ ಅವರನ್ನು ಒಂದು ರೀತಿಯ ಏಕಾಂಗಿತನ ಕಾಡುತ್ತದೆ. ಏಕಾಂಗಿತನದಿಂದಾಗಿ ಬಹಳಷ್ಟು ಮಂದಿ ಪೊಲೀಸರು ಮದ್ಯಪಾನ, ಧೂಮಪಾನ ಮತ್ತಿತರ ದುಶ್ಚಟಗಳಿಗೆ ದಾಸರಾಗುತ್ತಾರೆ. ಮದ್ಯಪಾನದಿಂದ ಅವರಿಗೆ ಎಲ್ಲಿಲ್ಲದ ಹುರುಪು ಬರುತ್ತವೆ ಹಾಗೂ ಇದರ ಪರಿಣಾಮವಾಗಿ ಪಣಂಬೂರು ಹಾಗೂ ಧರ್ಮಸ್ಥಳದಲ್ಲಿ ಆದಂತಹ ಘಟನೆಗಳು ಜರುಗುತ್ತವೆ.

ಈ ರೀತಿಯ ಸಮಸ್ಯೆಯನ್ನು ಎದುರಿಸಬೇಕಾದರೆ ಸಮಾಜ ಮತ್ತು ಪೊಲೀಸರ ಮಧ್ಯೆ ನಂಬಿಕೆ ಮೂಡಬೇಕು. ಪೊಲೀಸರ ಮನಸ್ಥಿತಿ ಬದಲಾಗಿ ತಾವೂ ಸಾರ್ವಜನಿಕರಲ್ಲಿ ಒಬ್ಬರು ಎನ್ನುವ ಭಾವನೆ ಮೂಡಬೇಕು. ಪೊಲೀಸರಲ್ಲಿ ಇನ್ನಷ್ಟು ಶಿಸ್ತು ಬರಬೇಕು. ಹಾಗೂ ಪೊಲೀಸರಿಗೆ ಸಾರ್ವಜನಿಕರೊಡನೆ ಹೇಗೆ ವರ್ತಿಸಬೇಕು ಎನ್ನುವ ಬಗ್ಗೆ ಕಾಲಕಾಲಕ್ಕೆ

ತರಬೇತಿ ನೀಡಬೇಕು. ಪೊಲೀಸರಿಗೆ ಕಾಲಕಾಲಕ್ಕೆ ಕೌನ್ಸಿಲಿಂಗ್ ನೀಡಬೇಕು. ಹಿರಿಯ ಪೊಲೀಸ್ ಅಧಿಕಾರಿಗಳು ತಮ್ಮ ಕಿರಿಯರಿಗೆ ಮಾರ್ಗದರ್ಶಕರಾಗಿ ಅವರ ಮನ ಪರಿವರ್ತನೆಯತ್ತ ಗಮನವಿಡಬೇಕು. ಪೊಲೀಸರು ಸಾಮೂಹಿಕವಾಗಿ ಕರ್ತವ್ಯಕ್ಕೆ ಹೊರಟಾಗ ಅವರನ್ನು ಹದ್ದುಬಸ್ತಿನಲ್ಲಿಡಲು ಹಿರಿಯ ಪೊಲೀಸ್ ಅಧಿಕಾರಿಗಳು ಶ್ರಮಿಸಬೇಕು. ತಪ್ಪು ಮಾಡಿದ ಪೊಲೀಸರಿಗೆ ತಕ್ಕ ಶಿಕ್ಷೆ ದೊರೆಯಲೇ ಬೇಕು. ಈ ಶಿಕ್ಷೆ ಇತರರಿಗೆ ಮಾದರಿಯಾಗಬೇಕು.

ಮೇ 7 ರಂದು ಮಹಾರಾಷ್ಟ್ರದ ಸೆಷನ್ಸ್ ನ್ಯಾಯಾಲಯವೊಂದು ಗುಂಪೊಂದರ ಮೇಲೆ 1997ರಲ್ಲಿ ಗುಂಡು ಹಾರಿಸಿ 10 ಜನರ ಸಾವಿಗೆ ಕಾರಣವಾಗಿದ್ದ ಪೊಲೀಸ್ ತಂಡದ ಮುಖ್ಯಸ್ಥನಾಗಿದ್ದ ಮನೋಹರ ಕದಂ ಎನ್ನುವ ಸಬ್ ಇನ್ಸ್‌ಪೆಕ್ಟರ್‌ಗೆ ಜೀವಾವಧೀ ಶಿಕ್ಷೆ ನೀಡಿದೆ.

ಇದಲ್ಲದೆ ಪೊಲೀಸ್ ಹುದ್ದೆಗೆ ನೇಮಕಾತಿ ಮಾಡುವಾಗ ಮತ್ತು ಪ್ರತಿ 5-6 ವರ್ಷಗಳಿಗೊಮ್ಮೆ ಪೊಲೀಸ್ ಸಿಬ್ಬಂದಿಗೆ ಅವರ ಮಾನಸಿಕ ಸಾಮರ್ಥ್ಯದ ಪರೀಕ್ಷೆಯನ್ನು ನಡೆಸಬೇಕು.

# 42

## ಸ್ತ್ರೀ - ಮಕ್ಕಳ ಸ್ನೇಹಿ ಪೊಲೀಸರ ತರಬೇತಿಗೆ ವಿನೂತನ ಹೆಜ್ಜೆ

ಸಾಮಾನ್ಯವಾಗಿ ಪೊಲೀಸರನ್ನು ಕಂಡರೆ ಎಲ್ಲರೂ ಹೆದರುತ್ತಾರೆ. ಬಲವಾದ ಕಾರಣ ಇಲ್ಲದಿದ್ದರೆ ಪೊಲೀಸರ ಬಳಿ ಯಾರೂ ಹೋಗುವುದೇ ಇಲ್ಲ. ಪೊಲೀಸ್ ಠಾಣೆಗೆ ಹೋಗಬೇಕಾಗಿ ಬಂದರೆ ಸಾರ್ವಜನಿಕರಿಗೆ ಎಲ್ಲಿಲ್ಲದ ಭಯ ಬರುತ್ತದೆ. ಮಕ್ಕಳು ಹಾಗೂ ಮಹಿಳೆಯರಿಗಂತೂ ಪೊಲೀಸ್ ಠಾಣೆಯೆಂದರೆ ಏನೋ ಒಂದು ರೀತಿಯ ಭಯ. ತಾಯಿಯ ತೊಡೆಯಲ್ಲಿ ಮಲಗಿ ಹಾಲು ಕುಡಿಯುವಾಗಿನಿಂದಲೇ ಏನೋ ಪೊಲೀಸರ ಬಗ್ಗೆ ಭಯ ಬೆಳೆದುಕೊಂಡು ಬಿಡುತ್ತದೆ. "ಅಳಬೇಡ. ಅತ್ತರೆ ಪೊಲೀಸರನ್ನು ಕರೆಯುತ್ತೇನೆ" ಎಂದು ತಾಯಿ ಮಗುವಿಗೆ ಹೇಳಿದಾಗ ಪೊಲೀಸ್ ಎಂದರೆ ಒಬ್ಬ ಗುಮ್ಮ ಎಂಬ ಚಿತ್ರ ಮಗುವಿನ ಮನಸ್ಸಿನಲ್ಲಿ ಅಚ್ಚಳಿಯದೇ ಮೂಡುವುದರಿಂದ ಇಂದಿಗೂ ಪೊಲೀಸರೆಂದರೆ ಜನರಿಗೆ ಹೆದರಿಕೆಯೇ!

ಯಾರಾದರೂ ತಮ್ಮನ್ನು ಕಂಡರೆ ಹೆದರುತ್ತಾರೆ ಎಂದರೆ ಎಲ್ಲರಿಗೂ ಒಂದು ರೀತಿಯ ಸಂತಸವೇ ಆಗುತ್ತದೆ ಎಂದು ನನ್ನ ಊಹೆ. ಯಾರೊಬ್ಬರ ಮೇಲೆಯೂ ಹಿಡಿತ ಸಾಧಿಸಬೇಕಾದರೆ ಅಂತಹವರು ತಮ್ಮ ಬಗ್ಗೆ ಹೆದರಿಕೆ ಇಟ್ಟುಕೊಂಡಿರಬೇಕೆಂಬುದು ಮಾನವ ಸಹಜವಾದ ನಡವಳಿಕೆಯೇ. ಬ್ರಿಟಿಷರ ಕಾಲದಿಂದಲೂ ಪೊಲೀಸರು ಸಾರ್ವಜನಿಕರನ್ನು ತಮ್ಮ ಹತೋಟಿಯಲ್ಲಿ ಇಟ್ಟುಕೊಳ್ಳಬೇಕಾದಂತಹ ಸಂದರ್ಭ ಬಂದಿದ್ದರಿಂದ ಪೊಲೀಸರು ತಮಗೆ ಬಂದಂತಹ ಇಮೇಜನ್ನು ಬದಲಿಸಿಕೊಳ್ಳಲು ಯಾವ ರೀತಿಯ ಪ್ರಯತ್ನವನ್ನೂ ನಡೆಸಲಿಲ್ಲ ಎನ್ನಬಹುದು.

ಸ್ವಾತಂತ್ರ್ಯದ ಅನಂತರ ಪ್ರಜೆಗಳ ಪ್ರಭುತ್ವ ಬಂದಾಗಲೂ ಪೊಲೀಸರು ಪ್ರಜೆಗಳೇ ತಮ್ಮ ಮಾಲೀಕರು ಎನ್ನುವ ತತ್ವವನ್ನು ತಮ್ಮದಾಗಿಸಿಕೊಳ್ಳಲಿಲ್ಲ. ಬ್ರಿಟೀಷರಿಂದ ಬಳುವಳಿಯಾಗಿ ಬಂದಂತಹ ತಮ್ಮ ನಡತೆಯನ್ನೇ ಮುಂದುವರಿಸಿಕೊಂಡು ಹೋದರು. ಕಾಲಕ್ರಮೇಣ ಜನರಲ್ಲಿ ಪೊಲೀಸರ ಬಗ್ಗೆ ಕೆಟ್ಟ ಭಾವನೆ ಅಚ್ಚಳಿಯದೇ ಮೂಡತೊಡಗಿದಾಗ ಪೊಲೀಸರ ಇಮೇಜನ್ನು ಬದಲಿಸಲು ಪೊಲೀಸ್ ಹಿರಿಯ ಅಧಿಕಾರಿಗಳು ಹಲವಾರು ಕಾರ್ಯಕ್ರಮಗಳನ್ನು ರೂಪಿಸಿದರು. ಪೊಲೀಸರು ಜನ ಸ್ನೇಹಿ ಆಗದಿದ್ದರೆ ಹಾಗೂ ತಮ್ಮ ನಡವಳಿಕೆ ಬದಲಿಸದಿದ್ದರೆ ಪ್ರಜಾ ಪ್ರಭುತ್ವದ ವ್ಯವಸ್ಥೆಯಲ್ಲಿ ಪೊಲೀಸ್ ಕೆಲಸ ಮಾಡಲು ಅಸಾಧ್ಯ ಎಂದು ಮನಗಂಡ ಪೊಲೀಸ ನಾಯಕತ್ವ ಜನರೊಂದಿಗೆ ನೇರ ಸಂಪರ್ಕ ಬರುವಂತಹ ಕಿರಿಯ ಪೊಲೀಸ ಸಿಬ್ಬಂದಿಗೆ ಸಾರ್ವಜನಿಕರೊಂದಿಗೆ ಸೌಜನ್ಯದಿಂದ ನಡೆದುಕೊಳ್ಳಲು ತಿಳಿ ಹೇಳುವ ಹಲವಾರು ಪ್ರಯತ್ನಗಳನ್ನು ಮಾಡಿತು. ಈ ಪ್ರಯತ್ನಗಳು ಸಾಕಷ್ಟು ಯಶಸ್ವಿಯೂ ಆದವು. ಕಾಲಕ್ರಮೇಣ ಪೊಲೀಸ್ ಇಲಾಖೆಗೆ ಸೇರುತ್ತಿರುವ ಕಿರಿಯ ಅಧಿಕಾರಿಗಳು ಉತ್ತಮ ಕುಟುಂಬದಿಂದ ಬಂದವರಾಗಿದ್ದು, ಉತ್ತಮ ವಿದ್ಯಾಭ್ಯಾಸವನ್ನು ಹೊಂದಿರುವುದರಿಂದ ಕಿರಿಯ ದರ್ಜೆಯ ಪೊಲೀಸರ ಮನೋವರ್ತನೆಯಲ್ಲೂ ಇತ್ತೀಚೆಗೆ ಸ್ವಲ್ಪ ಬದಲಾವಣೆಯನ್ನು ನಾವು ಕಾಣಬಹುದು. ಅವರುಗಳು ಸಾಕಷ್ಟು ಜನಪರರಾಗುತ್ತಿದ್ದಾರೆ.

ಜನಸ್ನೇಹಿ ಪೊಲೀಸರಾಗಲು ಬೇರೆ ಬೇರೆ ರಾಜ್ಯಗಳ ಪೊಲೀಸರು ಬೇರೆ ಬೇರೆ ರೀತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದಾರೆ. ನಮ್ಮ ರಾಜ್ಯದಲ್ಲೂ ಹಲವಾರು ಜಿಲ್ಲಾ ಎಸ್.ಪಿ.ಗಳೂ ಹಾಗೂ ಪೊಲೀಸ್ ಕಮೀಷನರ್‌ಗಳು ಸಾರ್ವಜನಿಕರು ಪೊಲೀಸ್ ಇಲಾಖೆಯ ಹತ್ತಿರ ಬರುವಂತಹ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಯಶಸ್ಸನ್ನು ಪಡೆದಿದ್ದಾರೆ. ಆದರೆ ಈ ಅಧಿಕಾರಿಗಳು ತಮ್ಮ ಸ್ಥಾನದಿಂದ ವರ್ಗಾವಣೆಯಾಗಿ ಹೋದ ನಂತರ ಅವರು ಹಮ್ಮಿಕೊಂಡ ಕಾರ್ಯಕ್ರಮಗಳು ಮುಂದುವರೆಯದೇ ಅರ್ಧಕ್ಕೆ ನಿಂತು ಹೋಗಿರುವುದರಿಂದ ಅವುಗಳಿಗೆ ಹೆಚ್ಚಿನ ಯಶಸ್ಸು ಬಂದಿಲ್ಲ.

ಕರ್ನಾಟಕ ರಾಜ್ಯ ಪೊಲೀಸ್ ಇಲಾಖೆ ತನ್ನ ಎಲ್ಲಾ ಪೊಲೀಸ್ ಸಿಬ್ಬಂದಿ ವರ್ಗದವರೂ ಜನ ಸ್ನೇಹಿ ಆಗಬೇಕೆಂಬ ಉದ್ದೇಶದಿಂದ "ಲಿಂಗ ಸಂವೇದನಾ ಶೀಲ ಜನಸ್ನೇಹಿ ಪೊಲೀಸ್" ಎನ್ನುವ ಕಾರ್ಯಕ್ರಮವನ್ನು ರಾಜ್ಯದಾದ್ಯಂತ ಪ್ರಾರಂಭಿಸಿದೆ. ಅಂತರರಾಷ್ಟ್ರೀಯ ಮಕ್ಕಳ ನಿಧಿ [UNICEF]ನ ಸಹಯೋಗದಿಂದ 2001 ರಲ್ಲಿ ಪ್ರಾರಂಭವಾದ ಈ ಕಾರ್ಯಕ್ರಮ ರಾಜ್ಯದ ಹಲವಾರು ಪೊಲೀಸರನ್ನು ಜನಸ್ನೇಹಿ ಆಗುವಂತೆ ಮಾಡಿದೆ. ಈ ಕಾರ್ಯಕ್ರಮದ ಅಡಿಯಲ್ಲಿ ಎಲ್ಲಾ ಪೊಲೀಸರಿಗೂ ಹಂತಹಂತವಾಗಿ ಲಿಂಗ ಸಂವೇದನಾ ಶೀಲರಾಗುವಂತೆ ಮಾಡಲು ಕಾರ್ಯಕ್ರಮ ಕೈಗೊಳ್ಳಲಾಗುತ್ತಿದೆ. ಜತೆಜತೆಗೆ ಜನಸ್ನೇಹಿ ಪೊಲೀಸರಾಗಲು ಏನು ಮಾಡಬೇಕು ಎಂಬ ತಿಳುವಳಿಕೆಯನ್ನು ನೀಡಲಾಗುತ್ತಿದೆ.

ಲಿಂಗ ಸಂವೇದನೆ ಎಂದರೆ ಏನು? ನಮ್ಮ ಸಮಾಜದಲ್ಲಿ ಈಗಲೂ ಮಹಿಳೆಗೆ ಅಗ್ರಸ್ಥಾನವಿಲ್ಲ. ಒಬ್ಬ ಸ್ತ್ರೀಯನ್ನು ಹುಟ್ಟಿದಾಗಿನಿಂದ ಕೀಳಾಗಿ ನೋಡಿಕೊಳ್ಳಲಾಗುತ್ತಿದೆ. ಹಲವಾರು

ರಾಜ್ಯಗಳಲ್ಲಿ ಹುಟ್ಟುವ ಮಗು ಸ್ತ್ರೀ ಎಂದು ಗೊತ್ತಾದ ಕೂಡಲೇ ತಾಯಿಗೆ ಗರ್ಭಪಾತ ಮಾಡಿಸಿ ಮಗುವನ್ನು ಗರ್ಭದಲ್ಲೇ ಕೊಲ್ಲಲಾಗುತ್ತಿದೆ. ಹೆಣ್ಣು ಮಗು ಹುಟ್ಟಿದ ನಂತರ ಬಾಣಂತಿ ಹಾಗೂ ಮಗುವಿಗೆ ಸರಿಯಾದ ಶುಶ್ರೂಷೆ ನೀಡದೆ ಅವರಿಬ್ಬರೂ ಪ್ರಸೂತಿಯಾದ ಕೆಲವೇ ತಿಂಗಳಲ್ಲಿ ಅಸುನೀಗುವಂತೆ ಮಾಡಲಾಗುತ್ತಿದೆ. ಒಂದು ವೇಳೆ ಹೆಣ್ಣು ಮಗು ಹುಟ್ಟಿದ ನಂತರ ಸಾಯದೇ ಇದ್ದರೂ ಆಕೆಗೆ ವಯಸ್ಸಾಗುತ್ತಾ ಬಂದಂತೆ ಆಕೆಯ ಬಗ್ಗೆ ತಾರತಮ್ಯ ಮಾಡಲಾಗುತ್ತಿದೆ. ಹೆಣ್ಣು ಮಗುವಿಗೆ ಸರಿಯಾಗಿ ಊಟವನ್ನು ಹಾಕುವುದಿಲ್ಲ. ಶಾಲೆಗೆ ಕಳುಹಿಸುವುದಿಲ್ಲ. ಬಟ್ಟೆಬರೆಗಳನ್ನು ಕೊಡಿಸುವುದಿಲ್ಲ. ಚಿಕ್ಕ ವಯಸ್ಸಿನಲ್ಲೇ ನೌಕರಿಗೆ ಕಳುಹಿಸಲಾಗುತ್ತಿದೆ. ಅಪ್ರಾಪ್ತ ವಯಸ್ಸಿನಲ್ಲೇ ಮದುವೆ ಮಾಡಿ ಆ ಮಗುವನ್ನು ದೈಹಿಕ ಹಾಗೂ ಮಾನಸಿಕ ತೊಂದರೆಗೆ ಒಳಪಡಿಸಲಾಗುತ್ತದೆ. ಹೀಗಾಗಿ ದೇಶದಲ್ಲಿ ಪುರುಷರ ಸಂಖ್ಯೆ ಹೆಚ್ಚುತ್ತಾ ಹೋಗಿ ಸ್ತ್ರೀಯರ ಸಂಖ್ಯೆ ಕೆಲ ರಾಜ್ಯಗಳಲ್ಲಿ ಆಘಾತಕಾರಿಯಾಗಿ ಕುಸಿಯುತ್ತಿದೆ.

ಇದಲ್ಲದೆ ಮಹಿಳೆಯರ ಮೇಲೆ ಸಾಕಷ್ಟು ದೌರ್ಜನ್ಯಗಳು ನಡೆಯುತ್ತಲೇ ಬರುತ್ತಿವೆ. ಎಲ್ಲಾ ರೀತಿಯ ದೈಹಿಕ ಹಾಗೂ ಮಾನಸಿಕ ಶೋಷಣೆಗಳು ನಡೆಯುತ್ತಿವೆ. ಈ ಎಲ್ಲ ತೊಂದರೆಗಳನ್ನು ಅನುಭವಿಸುವ ಸ್ತ್ರೀಯರ ಬಗ್ಗೆ ಸಂವೇದನಾಶೀಲರಾಗಿ ಅವರ ತೊಂದರೆಗಳನ್ನು ನಿವಾರಿಸುವತ್ತ ಪ್ರಾಮಾಣಿಕ ಪ್ರಯತ್ನ ಮಾಡುವುದೇ ಲಿಂಗ ಸಂವೇದನೆ.

ಇದೇ ರೀತಿ ಮಕ್ಕಳ ಬಗ್ಗೆಯೂ ನಮ್ಮ ಸಮಾಜ ಹೆಚ್ಚಿನ ಕಾಳಜಿ ತೆಗೆದುಕೊಳ್ಳುತ್ತಿಲ್ಲ. ಮಕ್ಕಳು ಹಲವಾರು ತರಹದ ದೌರ್ಜನ್ಯಗಳಿಗೆ ಒಳಗಾಗುತ್ತಿದ್ದಾರೆ. ಮಕ್ಕಳನ್ನು ಶಾಲೆಗೆ ಕಳುಹಿಸುವುದಿಲ್ಲ. ಬಾಲ ಕಾರ್ಮಿಕರ ವ್ಯವಸ್ಥೆ ಇನ್ನೂ ದೂರವಾಗಿಲ್ಲ. ಕಲಿತು ನಲಿಯಬೇಕಾದ ಬಾಲಕರು ಗಾಣದ ಎತ್ತಿನಂತೆ ದುಡಿಯುತ್ತಾ ತಮ್ಮ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತಿದ್ದಾರೆ. ಸಮಾಜದ ಅಂಗವೇ ಆಗಿರುವ ಪೊಲೀಸರು ಸ್ತ್ರೀಯರು ಹಾಗೂ ಮಕ್ಕಳ ಬಗ್ಗೆ ಹೆಚ್ಚಿನ ರೀತಿಯ ಕಾಳಜಿ ತೆಗೆದುಕೊಳ್ಳುವುದಿಲ್ಲ ಎನ್ನುವುದು ಸಾರ್ವಜನಿಕರ ದೂರಾಗಿದೆ. ಅಪರಾಧವನ್ನು ಮಾಡುವ ಹಾಗೂ ದೌರ್ಜನ್ಯಕ್ಕೆ ಈಡಾದ ಮಕ್ಕಳೊಂದಿಗೆ ಯಾವ ರೀತಿ ವರ್ತಿಸಬೇಕು ಎನ್ನುವ ಬಗ್ಗೆ ಕಾನೂನುಗಳೇ ಇದ್ದರೂ ಪೊಲೀಸ್ ಠಾಣೆಗಳಲ್ಲಿಯೂ ಮಕ್ಕಳ ಮೇಲೆ ದೌರ್ಜನ್ಯ ಆಗುತ್ತಿದೆ ಎಂಬ ದೂರಿದೆ. ಹೊರಗಡೆ ಮಕ್ಕಳ ಮೇಲೆ ದೌರ್ಜನ್ಯ ಆಗುತ್ತಿದ್ದರೂ ಪೊಲೀಸರು ಕಣ್ಣು ಮುಚ್ಚಿಕೊಂಡು ಕುಳಿತುಕೊಳ್ಳುತ್ತಾರೆ ಎನ್ನುವ ಆರೋಪವೂ ಬರುತ್ತಿದೆ.

ಈ ಕಾರಣದಿಂದ ದೊಡ್ಡಮಟ್ಟದಲ್ಲಿಗೆ ಪೊಲೀಸರು ಸ್ತ್ರೀಯರು ಹಾಗೂ ಮಕ್ಕಳ ತೊಂದರೆಗಳನ್ನು ಅರಿಯಬೇಕು. ಈ ವರ್ಗದವರ ಬಗ್ಗೆ ಒಲವನ್ನು ಮೂಡಿಸಿಕೊಳ್ಳಬೇಕು. ಈ ವರ್ಗಕ್ಕೆ ಆಗುತ್ತಿರುವ ದೌರ್ಜನ್ಯವನ್ನು ನಿವಾರಣೆ ಮಾಡಬೇಕು ಹಾಗೂ ಈ ವರ್ಗದ ವ್ಯಕ್ತಿಗಳ ನೋವು ನಲಿವುಗಳಿಗೆ ಸ್ಪಂದಿಸಬೇಕು ಎನ್ನುವ ಉದ್ದೇಶದಿಂದಲೇ ರಾಜ್ಯ ಪೊಲೀಸ್ ಇಲಾಖೆ ಹೊಸ ಮಾದರಿಯ ತರಬೇತಿ ಕಾರ್ಯಕ್ರಮವನ್ನು ರೂಪಿಸಿಕೊಂಡಿದೆ. ಈ ಕಾರ್ಯಕ್ರಮದ ಮೊದಲ ಅಂಗವಾಗಿ ಯುನಿಸೆಫ್‌ನ ಕಾರ್ಯಕರ್ತರು ಹಾಗೂ ಹಲವಾರು ಸರ್ಕಾರೇತರ ಸಂಘಟನೆಗಳ ಸದಸ್ಯರು ಅಲ್ಲದೆ ಪೊಲೀಸ್ ಜೊತೆಗೆ ಸ್ತ್ರೀಯರು ಹಾಗೂ

ಮಕ್ಕಳ ಬಗ್ಗೆ ಹೆಚ್ಚಿನ ಸಂವೇದನೆ ಬೆಳೆಸಿಕೊಂಡು ಜನಸ್ನೇಹಿ ಆಗುವ ಬಗ್ಗೆ ತರಬೇತಿ ಕೊಟ್ಟು ತತ್ಪರಿಣಾಮವಾಗಿ ಹಲವಾರು ಪೊಲೀಸ್ ತರಬೇತಿದಾರರನ್ನು ಹುಟ್ಟು ಹಾಕಿದೆ. ಈ ಪೊಲೀಸ್ ತರಬೇತಿದಾರರು ತಮ್ಮ ತಮ್ಮ ಠಾಣೆಗಳಲ್ಲಿ ತಮ್ಮ ತಮ್ಮ ಜಿಲ್ಲೆಗಳಲ್ಲಿ ಇರುವ ಇತರ ಪೊಲೀಸರಿಗೆ ತರಬೇತಿಯನ್ನು ಕೊಡಲು ಆರಂಭಿಸಿದ್ದಾರೆ. ಕಳೆದ ವರ್ಷ ಅಂದರೆ ೨೦೦೬ರ ಅಂತ್ಯದಿಂದ ಜನಸ್ನೇಹಿ ಹಾಗೂ ಲಿಂಗ ಸಂವೇದನಾ ತರಬೇತಿ ಕಾರ್ಯಕ್ರಮವನ್ನು ಪೊಲೀಸರಿಗೆ ಕೊಡುವ ಮೂಲ ತರಬೇತಿಯಲ್ಲೇ ಅಳವಡಿಸಲಾಗಿದೆ. ಇದರ ಫಲವಾಗಿ ಪೊಲೀಸ್ ಶಾಲೆಗಳಿಂದ ಹೊರ ಹೋಗುವ ಎಲ್ಲಾ ಪೊಲೀಸರೂ ಸ್ತ್ರೀಯರು ಹಾಗೂ ಮಕ್ಕಳ ಬಗೆಗಿನ ಕಾನೂನುಗಳನ್ನು ಅರಿತುಕೊಂಡು ಸಾರ್ವಜನಿಕ ಜೊತೆ ಹೇಗೆ ವ್ಯವಹರಿಸಬೇಕು, ಹೇಗೆ ಜನರ ಕಷ್ಟ ನಷ್ಟಗಳಿಗೆ ಸ್ಪಂಧಿಸಬೇಕು ಎನ್ನುವ ಬಗ್ಗೆ ಸಾಕಷ್ಟು ಮಾಹಿತಿಯನ್ನು ಪಡೆದಿರುತ್ತಾರೆ.

ವಿನೂತನ ಮಾದರಿಯಲ್ಲಿ ಈ ತರಬೇತಿಯನ್ನು ಕೊಡಲಾಗುತ್ತಿದೆ. ಬೀದಿ ನಾಟಕಗಳು, ಮಿಮಿಕ್ರಿ, ಏಕಪಾತ್ರಾಭಿನಯ, ಪವರ್‌ಪಾಯಿಂಟ್ ಪ್ರದರ್ಶನ, ಸಿನಿಮಾ ಪ್ರದರ್ಶನ, ರೋಲ್‌ಪ್ಲೇ ಮತ್ತಿತರ ಮಾದರಿಗಳನ್ನು ಉಪಯೋಗಿಸಿ ತರಬೇತಿ ನೀಡುತ್ತಿರುವದರಿಂದ ತಾವು ಕಲಿತ ವಿಷಯಗಳು ಪೊಲೀಸರ ಮನದಲ್ಲಿ ಅಚ್ಚಳಿಯದೇ ಮೂಡುತ್ತದೆ. ಸ್ತ್ರೀಯರಿಗೆ ಹಾಗೂ ಮಕ್ಕಳಿಗೆ ಸಂಬಂಧಿಸಿದ ಎಲ್ಲಾ ಕಾನೂನುಗಳ ಮುಖ್ಯ ಅಂಶಗಳನ್ನು ಒಂದುಗೂಡಿಸಿ ೨೦೦ ಪುಟಗಳ ಮಾಹಿತಿ ಹೊತ್ತಿಗೆಯೊಂದನ್ನು ತಯಾರಿಸಲಾಗಿದೆ. ತರಬೇತಿ ಪಡೆವ ಪ್ರತಿಯೊಬ್ಬ ಪೊಲೀಸ್ ಕಾನ್ಸ್‌ಟೇಬಲ್‌ಗೆ ಈ ಪುಸ್ತಕವನ್ನು ಉಚಿತವಾಗಿ ನೀಡಲಾಗುತ್ತಿದೆ. ಸ್ತ್ರೀ ಹಾಗೂ ಮಕ್ಕಳ ಕಾನೂನಿನ ಬಗ್ಗೆ ಯಾವುದೇ ಸಂಶಯ ಬಂದರೂ ಈ ಪುಸ್ತಕವನ್ನು ರೆಫರ್ ಮಾಡಬಹುದಾಗಿದೆ.

ಕರ್ನಾಟಕ ರಾಜ್ಯದ ಈ ವಿನೂತನ ಕಾರ್ಯಕ್ರಮವು ಇಡೀ ಭಾರತದಲ್ಲಿ ಪ್ರಖ್ಯಾತಿಗಳಿಸಿರುವುದಲ್ಲದೇ ಅಂತರ ರಾಷ್ಟ್ರೀಯ ಮಟ್ಟದಲ್ಲೂ ಖ್ಯಾತಿಗಳಿಸಿರುವುದು ನಮಗೆಲ್ಲರಿಗೂ ಹೆಮ್ಮೆಯ ವಿಷಯ. ಸಧ್ಯ ಈ ಕಾರ್ಯಕ್ರಮದ ಉಸ್ತುವಾರಿ ಅಧಿಕಾರಿ ನಾನೇ ಆಗಿರುವುದರಿಂದ ನನಗೂ ಇದರ ಬಗ್ಗೆ ಸಾಕಷ್ಟು ಹೆಮ್ಮೆ ಇದೆ.

# 43

## ರಿಜ್ವಾನೂರ್ ಪ್ರಕರಣ : ಪೊಲೀಸರು ಎಡವಿದ್ದೆಲ್ಲಿ ?

ರಿಜ್ವಾನೂರ್ ರೆಹಮಾನ್ ಕೋಲ್ಕತ್ತಾದಲ್ಲಿ ಕಂಪ್ಯೂಟರ್ ಚಿತ್ರ ರಚನೆ ತರಬೇತಿದಾರನಾಗಿದ್ದ. ಆತ ಕೆಲಸ ಮಾಡುತ್ತಿದ್ದ ಎರೀನಾ ಮಲ್ಟಿಮೀಡಿಯಾಗೆ ಚಿತ್ರ ರಚನೆ ಕಲಿಯಲು ಬಂದ ಪ್ರಿಯಾಂಕ (23) ಜೊತೆ ಆತನಿಗೆ ಪ್ರೇಮ ಉಂಟಾಯಿತು. ಪಶ್ಚಿಮ ಬಂಗಾಳದ ಹೆಸರಾಂತ ಲಕ್ಸ್ ಕೋಜಿ ಸಂಸ್ಥೆಯ ಮಾಲೀಕ ಅಶೋಕ್ ತೋಡಿ ಮಗಳಾದ ಪ್ರಿಯಾಂಕ ಆಗರ್ಭ ಶ್ರೀಮಂತೆ. ರಿಜ್ವಾನೂರ್ ರೆಹಮಾನ್ ಬಡ ಮುಸಲ್ಮಾನರ ಕುಟುಂಬಕ್ಕೆ ಸೇರಿದವನು.

ಕೆಲ ಕಾಲ ಪ್ರೇಮಲೋಕದಲ್ಲಿ ವಿಹರಿಸಿದ ಯುವ ಜೋಡಿ ಇದೇ ವರ್ಷ ಆಗಸ್ಟ್ 18 ರಂದು ಸಬ್‌ರಿಜಿಸ್ಟ್ರಾರ್ ಕಚೇರಿಯಲ್ಲಿ ಲಗ್ನವಾದರು. ನಂತರ ತವರು ಮನೆಯಲ್ಲೇ ಇದ್ದ ಪ್ರಿಯಾಂಕ ಆಗಸ್ಟ್ 31 ರಂದು ಗಂಡನ ಮನೆಗೆ ಬಂದಳು. ಕೂಡಲೇ ಪ್ರಿಯಾಂಕಾಳ ತಂದೆ ತಾಯಿ ರಿಜ್ವಾನ್‌ನ ಮನೆಗೆ ಬಂದು ಗಲಾಟೆ ಮಾಡಿ ಪ್ರಿಯಾಂಕಾಳನ್ನು ತಮ್ಮ ಜತೆ ಬರಲು ಹೇಳಿದರು. ಪ್ರಿಯಾಂಕಾ ಒಪ್ಪಲಿಲ್ಲ. ನಿನಗೆ ತಕ್ಕ ಶಾಸ್ತಿ ಮಾಡುತ್ತೇವೆ ಎಂದು ರಿಜ್ವಾನ್‌ನನ್ನು ಬೆದರಿಸಿ ಅವರು ಹೊರಟುಹೋದರು. ಮುಂದೆ ಅಶೋಕ್ ತೋಡಿ ಕಲ್ಕತ್ತಾದ ಪೊಲೀಸ್ ಕಮೀಷನರ್ ಪ್ರಸನ್ನ ಮುಖರ್ಜಿಯವರನ್ನು ಭೇಟಿ ಮಾಡಿ ವಿಷಯ ತಿಳಿಸಿದ. ನಂತರ ಸ್ಥಳೀಯ ಪೊಲೀಸರು ರಿಜ್ವಾನ್‌ನನ್ನು ಕಾಡಲು ಆರಂಭಿಸಿದರು.

ಪ್ರಿಯಾಂಕಾಳನ್ನು ಬಿಟ್ಟು ಬಿಡುವಂತೆ ರಿಜ್ವಾನ್‌ನಿಗೆ ತಾಕೀತು ಮಾಡಲಾಯಿತು. ಪುಸಲಾಯಿಸುವಿಕೆ, ಆಮಿಷಗಳು ಅಥವಾ ಬೆದರಿಕೆಗಳಿಗೆ ರಿಜ್ವಾನ್ ಬಗ್ಗಲಿಲ್ಲ. ಕೆಲ ಕಾರಣಗಳನ್ನು ನೀಡಿ ಕೆಲ ಕಾಲದ ಮಟ್ಟಿಗಾದರೂ ಪ್ರಿಯಾಂಕಾಳನ್ನು ತವರು ಮನೆಗೆ ಕಳುಹಿಸುವಂತೆ ರಿಜ್ವಾನ್‌ನನ್ನು ತೋಡಿ ಕುಟುಂಬ ಪೊಲೀಸರ ಮೂಲಕ ಕೋರಿತು. ಪೊಲೀಸರ ಕೋರಿಕೆ ಮೇರೆಗೆ ಪ್ರಿಯಾಂಕಳನ್ನು ಬಿಡದಿದ್ದರೆ ತನ್ನ ಮೇಲೆ ಅಪಹರಣ ಹಾಗೂ ಕಳ್ಳತನದ ಪ್ರಕರಣ ದಾಖಲಿಸಿ ತೊಂದರೆಗೀಡು ಮಾಡುವುದಾಗಿ ಪೊಲೀಸರು ಹೇಳಿದ್ದಾರೆ ಎಂದು ದೂರಿದ.

ಸೆಪ್ಟೆಂಬರ್-21 ರಂದು ಕಲ್ಕತ್ತಾ ನಗರದ ಡಂಡಂ ವಿಮಾನ ನಿಲ್ದಾಣದ ಬಳಿ ರೈಲು ಹಳಿಗಳ ಮೇಲೆ ರಿಜ್ವಾನೂರ್ ರೆಹಮಾನ್‌ನ ದೇಹ ದೊರಕಿತು. ಪ್ರಕರಣವನ್ನು ದಾಖಲಿಸಿದ ಪೊಲೀಸರು ಈತನದ್ದು ಆತ್ಮಹತ್ಯೆ ಪ್ರಕರಣವೆಂದು ಕೇಸನ್ನು ಮುಚ್ಚಲು ಹೊರಟರು. ಅಷ್ಟರಲ್ಲಿ ರಿಜ್ವಾನೂರ್ ರೆಹಮಾನ್‌ನ ತಾಯಿ ಹಾಗೂ ಸೋದರರು ರಿಜ್ವಾನೂರ್ ಆತ್ಮಹತ್ಯೆ ಮಾಡಿಕೊಳ್ಳಲು ಯಾವ ಕಾರಣವೂ ಇರಲಿಲ್ಲ. ಆತನನ್ನು ಭೀಕರವಾಗಿ ಕೊಲೆ ಮಾಡಿದ್ದು, ಪೊಲೀಸರು ಪ್ರಕರಣವನ್ನು ಮುಚ್ಚಿ ಹಾಕಲು ಪ್ರಯತ್ನಿಸುತ್ತಿದ್ದಾರೆಂದು ದೂರಿದರು. ರಿಜ್ವಾನೂರ್ ಅಂಗಾತ ಮಲಗಿದ್ದು, ಅವನ ಕೈಗಳು ಎದೆಯ ಮೇಲಿದ್ದವು. ತಲೆಯ ಮೇಲಷ್ಟೇ ಗಾಯಗಳಾಗಿತ್ತು. ಇದು ಖಂಡಿತಾ ರೈಲು ಹರಿದಿದ್ದರಿಂದ ಆದ ಸಾವಲ್ಲ ಎಂದು ರಿಜ್ವಾನ್ ಕಡೆಯವರು ಅಭಿಪ್ರಾಯಪಟ್ಟಿದ್ದಾರೆ.

ಈ ಮಧ್ಯೆ ಕಲ್ಕತ್ತಾದ ಪೊಲೀಸ್ ಕಮೀಷನರ್ ಹೇಳಿಕೆಯೊಂದನ್ನು ನೀಡಿ ಇದು ಮಾಮೂಲಿ ಆತ್ಮಹತ್ಯೆ ಕೇಸು: ವಿನಾಕಾರಣ ಪ್ರಕರಣವನ್ನು ತಪ್ಪಾಗಿ ಅರ್ಥೈಸಲಾಗಿದೆ. ಎರಡು ಬೇರೆ ಬೇರೆ ಸಾಮಾಜಿಕ ಹಿನ್ನೆಲೆಯುಳ್ಳ ವ್ಯಕ್ತಿಗಳು ಒಂದಾದರೆ ಪೊಲೀಸರು ಮಧ್ಯಪ್ರವೇಶಿಸಲೇಬೇಕಾಗುತ್ತದೆ ಎಂದರು. ತತ್‌ಕ್ಷಣವೇ ಹಲವಾರು ಸರ್ಕಾರೇತರ ಸಂಘಟನೆಗಳು ಈ ಪ್ರಕರಣದಲ್ಲಿ ಪ್ರಿಯಾಂಕಾಳ ಮನೆಯವರ ಪ್ರಭಾವದಿಂದ ಪೊಲೀಸರು ಕೊಲೆ ಪ್ರಕರಣವನ್ನು ಮುಚ್ಚಿ ಹಾಕುತ್ತಿದ್ದಾರೆ. ಈ ಪ್ರಕರಣದಲ್ಲಿ ಇಬ್ಬರು ಹಿರಿಯ ಪೊಲೀಸ್ ಅಧಿಕಾರಿಗಳು ಶಾಮೀಲಾಗಿದ್ದಾರೆ. ಪೊಲೀಸ್ ಅಧಿಕಾರಿಗಳ ಮೇಲೆ ಕ್ರಮ ಕೈಗೊಳ್ಳಬೇಕು ಹಾಗೂ ತನಿಖೆಯನ್ನು ಸಿ.ಬಿ.ಐ.ಗೆ ಒಪ್ಪಿಸಬೇಕೆಂದು ಆಗ್ರಹಿಸಿ ಪ್ರತಿಭಟನೆ ನಡೆಸಲಾರಂಭಿಸಿದವು. ಹೈಕೋರ್ಟಿನ ಆದೇಶ ಹಾಗೂ ಪೊಲೀಸ್ ಕಮೀಷನರರ ವರ್ಗಾವಣೆಯಿಂದ ಸಾರ್ವಜನಿಕರಿಗೆ ಸಮಾಧಾನವಾಗಿದೆ.

ಮೇಲು ನೋಟಕ್ಕೆ ಎದ್ದು ಕಾಣುವ ಸಂಗತಿ ಪೊಲೀಸರು ಪ್ರಿಯಾಂಕಾಳ ಕುಟುಂಬದವರ ಪ್ರಭಾವಕ್ಕೆ ಒಳಗಾಗಿರುವುದು. ಸಾಮಾನ್ಯ ಜನರ ಮನದಲ್ಲಿ ಪೊಲೀಸರು ಪ್ರಭಾವಿತರು ಹಾಗೂ ಶ್ರೀಮಂತ ಜನರ ಪರವಾಗಿ ಕೆಲಸ ಮಾಡುತ್ತಾರೆ ಎನ್ನುವ ಭಾವನೆ ಮೂಡಿದೆ. ಈ ಪ್ರಕರಣದಲ್ಲಿ ರಿಜ್ವಾನೂರ್ ರೆಹಮಾನ್ ಪ್ರಿಯಾಂಕಾಳಿಗಿಂತ ಕೆಳ ಸ್ತರದ ಸಾಮಾಜಿಕ ನೆಲೆಯಿಂದ ಬಂದಿದ್ದು ಹಾಗೂ ಪೊಲೀಸ್ ಕಮೀಷನರರ ವಿವಾದಾತ್ಮಕ ಹೇಳಿಕೆಯಿಂದ

ಜನರ ಮನಸ್ಸಿನಲ್ಲಿ ಪೊಲೀಸರು ಪ್ರಿಯಾಂಕಾಳ! ಕುಟುಂಬದ ಜೊತೆ ಹೊಂದಾಣಿಕೆಯಾಗಿದ್ದರೆ ಎನ್ನುವ ಅನುಮಾನ ಬಂದಿರುವುದು ಸಹಜ.

ಶ್ರೀಮಂತರ ಕುಟುಂಬದ ಹೆಣ್ಣು ಮಕ್ಕಳು ಸಮಾಜದಲ್ಲಿ ತಮಗಿಂತ ಕಡಿಮೆ ಸ್ಥಾನದಲ್ಲಿರುವ ವ್ಯಕ್ತಿಗಳೊಂದಿಗೆ ಓಡಿ ಹೋಗಿ ಮದುವೆ ಆಗುವುದು ಹೊಸತೇನೂ ಅಲ್ಲ. ಎಷ್ಟೋ ಯುವತಿಯರು ತಮ್ಮ ಮನೆಯ ಡ್ರೈವರ್, ಸೇವಕರು, ಅಡಿಗೆಯವರು ಮುಂತಾದವರ ಜೊತೆ ಓಡಿ ಹೋಗಿರುವ ಹಲವಾರು ಪ್ರಕರಣಗಳು ನಮ್ಮ ದೇಶದಲ್ಲಿ ನಡೆದಿವೆ. ಸಾಮಾನ್ಯವಾಗಿ ಇಂಥ ಪ್ರಕರಣಗಳು ಸಂಭವಿಸಿದಾಗ ಮರ್ಯಾದೆಯ ದೃಷ್ಟಿಯಿಂದ ಶ್ರೀಮಂತ ಕುಟುಂಬಗಳು ಪೊಲೀಸರನ್ನು ಪುಸಲಾಯಿಸಿ ಓಡಿ ಹೋದ ತಮ್ಮ ಮನೆಯ ಹೆಣ್ಣು ಮಕ್ಕಳನ್ನು ವಾಪಸು ಕರೆಸಿಕೊಳ್ಳಲು ಸಾಕಷ್ಟು ಪ್ರಯತ್ನ ಪಡುತ್ತವೆ. ಕೆಲವರು ಅಪಹರಣದ ಕೇಸುಗಳನ್ನು ದಾಖಲಿಸುತ್ತಾರೆ. ಅಪ್ರಾಪ್ತ ವಯಸ್ಸಿನ ಹೆಣ್ಣು ಮಕ್ಕಳನ್ನು ಹಾರಿಸಿಕೊಂಡು ಹೋಗಿದ್ದಾರೆ ಎನ್ನುವ ದೂರನ್ನು ನೀಡಿ ಪೊಲೀಸರು ಕಾರ್ಯ ಪ್ರವೃತ್ತರಾಗುವಂತೆ ಮಾಡುತ್ತಾರೆ.

ಮನೆಯಿಂದ ಓಡಿ ಹೋದ ಹೆಣ್ಣುಮಗಳನ್ನು ಪತ್ತೆ ಹಚ್ಚಲು ಸಫಲರಾದ ಅನೇಕರು ಆಕೆಯನ್ನು ಗೃಹ ಬಂಧನದಲ್ಲಿ ಇಡುತ್ತಾರೆ. ಇಲ್ಲವೇ ಬೇರೆ ಊರಿಗೆ ಕಳಿಸುತ್ತಾರೆ. ಆಕೆಗೆ ಬೇರೊಂದು ಲಗ್ನವನ್ನು ಮಾಡಿ ಗಂಡನ ಮನೆಗೆ ರವಾನಿಸುತ್ತಾರೆ. ಕುಟುಂಬದ ಮರ್ಯಾದೆಯ ಪ್ರಶ್ನೆಯಿಂದ ಈ ರೀತಿ ಮಾಡುವುದುಂಟು. ಓಡಿಸಿಕೊಂಡು ಹೋದ ವ್ಯಕ್ತಿಗೆ ಹಣ ಕೊಟ್ಟೋ ಅಥವಾ ಬೆದರಿಸಿಯೋ ತಮ್ಮ ಮಗಳನ್ನು ಮರೆಯುವಂತೆ ಮಾಡುತ್ತಾರೆ.

ಇಂಥ ಪ್ರಕರಣಗಳಲ್ಲಿ ಸಾಮಾನ್ಯವಾಗಿ ಪೊಲೀಸರು ಅಪಹರಣ ಮಾಡಿದ ವ್ಯಕ್ತಿಯನ್ನು ಹಾಗೂ ಆತನ ಕುಟುಂಬದವರನ್ನು ಕರೆಸಿ ವಿಚಾರಣೆ ಮಾಡಿ ಹಲವಾರು ಆಸೆ-ಆಮಿಷಗಳನ್ನು ಒಡ್ಡಿ ಇಲ್ಲವೇ ಹೆದರಿಸಿ ಹೆಣ್ಣು ಮಗಳನ್ನು ಬಿಟ್ಟುಬಿಡಲು ಒತ್ತಾಯಿಸುತ್ತಾರೆ. ಇದು ಕಾನೂನು ಬಾಹಿರ.

ಒಂದು ವೇಳೆ ಯುವತಿಯೊಬ್ಬಳ ಅಪಹರಣದ ದೂರು ಬಂದರೆ ಪೊಲೀಸರು ಭಾರತ ದಂಡ ಸಂಹಿತೆ ಅನ್ವಯ ದೂರು ದಾಖಲಿಸಿಕೊಳ್ಳಬೇಕು. ತದ ನಂತರ ದೂರಿನ ತನಿಖೆಯನ್ನು ಕೈಗೊಂಡು ಓಡಿ ಹೋಗಿರುವ ಹೆಣ್ಣು ಮಗಳನ್ನು ಮತ್ತು ಆಕೆಯ ಪ್ರಿಯಕರನನ್ನು ಪತ್ತೆ ಮಾಡಿ ಅವರ ಹೇಳಿಕೆಯನ್ನು ಪಡೆದ ಹೆಣ್ಣುಮಗಳು ಪ್ರಾಪ್ತ ವಯಸ್ಕಳೇ ಅಥವಾ ಇಲ್ಲವೇ ಎನ್ನುವುದನ್ನು ನಿರ್ಧರಿಸಬೇಕು. ಒಂದು ವೇಳೆ ಆಕೆ ಪ್ರಾಪ್ತ ವಯಸ್ಕಳಾಗಿದ್ದಲ್ಲಿ ಸಂಪೂರ್ಣ ಹಾಗೂ ಸಮಗ್ರ ವಿಚಾರಣೆಯನ್ನು ನಡೆಸಿ, ಕಾನೂನಿನ್ವಯ ಲಗ್ನ ನಡೆದಿದ್ದ ಪಕ್ಷದಲ್ಲಿ ಪ್ರಕರಣ ಮುಚ್ಚಿ, ನ್ಯಾಯಾಲಯಕ್ಕೆ ವರದಿ ಸಲ್ಲಿಸಬೇಕು. ಯುವತಿಯನ್ನು ಬಿಟ್ಟುಬಿಡಲು 'ತಾಕೀತು' ಮಾಡುವುದು ಪೊಲೀಸರ ಕರ್ತವ್ಯವಲ್ಲ.

ಪೊಲೀಸರು ರಿಜ್ವಾನನಿಗೆ ಬೆದರಿಕೆ ಒಡ್ಡಿದ ನಂತರ ಆತನ ಸಾವು ಸಂಭವಿಸಿರುವುದು ಹಾಗೂ ಕಲ್ಕತ್ತಾ ಪೊಲೀಸ್ ಕಮೀಷನರ್ ಬೇಜವಾಬ್ದಾರಿ ಹೇಳಿಕೆ ನೀಡಿದ್ದರಿಂದ ಪೊಲೀಸರ ಕಾನೂನು ಬಾಹಿರ ಕೃತ್ಯಗಳ ಬಗ್ಗೆ ಈ ಪ್ರಕರಣದಲ್ಲಿ ಜನರಿಗೆ ಸಂಶಯ ಬಂದಿದೆ.

ಒಬ್ಬ ವ್ಯಕ್ತಿಯ ದೇಹವು ರೈಲ್ವೆ ಹಳಿಗಳ ಮೇಲೆ ಸಿಕ್ಕಾಗ ಪ್ರಕರಣವನ್ನು ದಾಖಲಿಸುವವರು ರೈಲ್ವೇ ಪೊಲೀಸರು. ಹೆಣದ ಪಂಚನಾಮೆ ಮಾಡಿದ ನಂತರ ಪೋಸ್ಟ್‌ಮಾರ್ಟಂ ವರದಿಯಲ್ಲಿ ಏನು ಬರೆಯಲಾಗಿದೆ ಎನ್ನುವುದು ಬಹಿರಂಗ ಆಗಿಲ್ಲ. ಪರಿಸ್ಥಿತಿ ಹೀಗಿರುವಾಗ ರಿಜ್ವಾನ್‌ನ ಸಾವು ಕೊಲೆಯೋ ಅಥವಾ ಆತ್ಮಹತ್ಯೆಯೋ ಎಂದು ತಿಳಿದಿಲ್ಲ. ಪೊಲೀಸರು ಈ ಪ್ರಕರಣವನ್ನು ಆತ್ಮಹತ್ಯೆ ಎಂದು ತಿಳಿಸಿರುವುದು ಅನುಮಾನಕ್ಕೆ ಎಡೆ ಮಾಡಿಕೊಟ್ಟಿದೆ.

ಇಲ್ಲಿ ಗಮನಿಸಬೇಕಾದ ಅಂಶಗಳೆಂದರೆ ಈ ಪ್ರಕರಣದ ಕೇಂದ್ರ ಬಿಂದು ಪ್ರಿಯಾಂಕಾ ರಿಜ್ವಾನ್‌ನ ಸಾವಿನ ಬಗ್ಗೆ ಏನನ್ನೂ ಹೇಳದೇ ಇರುವುದು. ಸಾಮಾನ್ಯವಾಗಿ ಒಬ್ಬ ವ್ಯಕ್ತಿಯ ಜೊತೆ ಓಡಿ ಹೋದ ಹೆಣ್ಣುಮಗಳಿಗೆ ತವರು ಮನೆಯವರು ಹಲವಾರು ಮಾನಸಿಕ ಒತ್ತಡಗಳನ್ನು ಹೇರುತ್ತಾರೆ. ಇದೇ ರೀತಿ ಒತ್ತಡ ಪ್ರಿಯಾಂಕಾಳ ಮೇಲೂ ಆಗಿದೆ ಎಂದು ಊಹಿಸಬಹುದಾಗಿದೆ. ಪ್ರಿಯಾಂಕಾಳನ್ನು ಆಕೆಯ ಮನೆಯಿಂದ ಹೊರಗಡೆ ಕರೆತಂದು ವಿಚಾರಣೆಗಳನ್ನು ಮಾಡಿದಾಗ ಸತ್ಯ ಹೊರಬೀಳಬಹುದು. ಗಂಡನೂ ಸತ್ತು ಹೋದ ತವರು ಮನೆಯವರನ್ನು ಏಕೆ ಜೈಲಿಗೆ ಕಳುಹಿಸಬೇಕು ಎನ್ನುವ ಉದ್ದೇಶದಿಂದ ಪ್ರಿಯಾಂಕ ತನ್ನ ಮೌನ ವ್ರತವನ್ನು ಮುಂದುವರಿಸಬಹುದು.

ಪೊಲೀಸರು, ಅದರಲ್ಲೂ ಕಮೀಷನರ್ ಹುದ್ದೆಯ ಅಧಿಕಾರಿಗಳು. ಇಂಥ ಪ್ರಕರಣದಲ್ಲಿ ಒಂದು ಗುಂಪಿನ ಪರವಾಗಿ ನಿಲುವನ್ನು ತೆಗೆದುಕೊಳ್ಳುವುದು ಸರಿ ಅಲ್ಲ. ಇಂಥ ಪ್ರಕರಣಗಳಲ್ಲಿ ಪ್ರಭಾವಗಳು ಬಂದೇ ಬರುತ್ತವೆ. ಇಂಥ ಪ್ರಕರಣಗಳು ಸಾಮಾಜಿಕ ಸಮಸ್ಯೆಗಳಿಗೆ ಸಂಬಂಧಿಸಿರುವುದರಿಂದ ಇವುಗಳ ಬಗ್ಗೆ ಪೊಲೀಸರು ಹೆಚ್ಚಿನ ಸಂವೇದನಾಶೀಲತೆ ಹೊಂದಿರಬೇಕಾದ ಅಗತ್ಯ ಇದೆ.

# 44

## ಪ್ರತಿಕೂಲ ಸಾಕ್ಷಿಗಳಿಗೆ ಶಿಕ್ಷೆ - ಸಾಧಕ ಬಾಧಕ

ದೆಹಲಿಯ ಭಾರತೀಯ ಕಾನೂನು ಸಂಸ್ಥೆಯಲ್ಲಿ ನಡೆದ ವಿಚಾರ ಸಂಕಿರಣ ಉದ್ಘಾಟಿಸುತ್ತಾ ರಾಷ್ಟ್ರಪತಿ ಅಬ್ದುಲ್ ಕಲಾಂ ಕ್ರಿಮಿನಲ್ ಪ್ರಕರಣಗಳಲ್ಲಿ ನ್ಯಾಯಾಲಯದ ವಿಚಾರಣಾ ಸಮಯದಲ್ಲಿ ಪ್ರತಿಕೂಲ ಸಾಕ್ಷಿ ಹೇಳುವಂತಹ ವ್ಯಕ್ತಿಗಳ ವಿರುದ್ಧ ಕಠಿಣ ಕ್ರಮ ಜರುಗಿಸಬೇಕೆಂದು ಕರೆ ನೀಡಿರುವುದು ಸ್ವಾಗತಾರ್ಹ. ಹಲವಾರು ಗುರುತರ ಪ್ರಕರಣಗಳು ಕೇವಲ ಪ್ರತಿಕೂಲ ಸಾಕ್ಷಿಗಳ ಫಲವಾಗಿ ಖುಲಾಸೆ ಹೊಂದುತ್ತಿರುವ ಇಂದಿನ ದಿನಗಳಲ್ಲಿ ಸಾಕ್ಷಿಗಳು ನ್ಯಾಯಾಲಯದಲ್ಲಿ ಪ್ರತಿಕೂಲ ಹೇಳಿಕೆ ನೀಡುವುದನ್ನು ತಪ್ಪಿಸಬೇಕೆಂಬುದು ಪ್ರಜ್ಞಾವಂತ ನಾಗರೀಕರ ಆಶಯ.

ಕ್ರಿಮಿನಲ್ ಪ್ರಕರಣಗಳಲ್ಲಿ ಸಾಕ್ಷಿಗಳು ಯಾರಾಗಬೇಕೆಂಬುವ ಮೊಟ್ಟಮೊದಲ ತೀರ್ಮಾನ ಆ ಕೇಸಿನ ತನಿಖೆ ನಡೆಸುವ ತನಿಖಾಧಿಕಾರಿಯದ್ದು. ಘಟನೆಯನ್ನು ನೋಡಿದಂತಹ ಪ್ರತ್ಯಕ್ಷ ಸಾಕ್ಷಿಗಳು ಹಾಗೂ ಘಟನೆಯ ಬಗ್ಗೆ ಮಾಹಿತಿ ಹೊಂದಿರುವ ವ್ಯಕ್ತಿಗಳನ್ನು ತನಿಖಾಧಿಕಾರಿ ತನ್ನ ಮುಂದೆ ಬರಮಾಡಿಕೊಂಡು ಅವರಿಗೆ ಹಲವಾರು ಪ್ರಶ್ನೆಗಳನ್ನು ಹಾಕಿ ಅವರು ನೀಡಿದ ಉತ್ತರಗಳನ್ನು ಹೇಳಿಕೆಯ ರೂಪದಲ್ಲಿ ದಾಖಲಿಸಿ, ಆ ಹೇಳಿಕೆಯನ್ನು ಅವರಿಗೆ ಮತ್ತೆ ಓದಿ ಹೇಳಿ ತದನಂತರ ಹೇಳಿಕೆಗೆ ತಾನು ಸಹಿ ಮಾಡಿ ಪ್ರಕರಣದ ಅಂತಿಮ ವರದಿಯ ಜತೆಗೆ ನ್ಯಾಯಾಲಯಕ್ಕೆ ಕಳಿಸುತ್ತಾನೆ. ತನಿಖಾಧಿಕಾರಿ ಕ್ರಿಮಿನಲ್ ಪ್ರೊಸಿಜರ್ ಕೋಡ್‌ನ ಕಲಂ 161 ಹಾಗೂ 162 ರನ್ವಯ ಈ ಕ್ರಮ ಜರುಗಿಸುತ್ತಾನೆ. ಕಾನೂನಿನ ಅನ್ವಯ ಪೊಲೀಸ್ ಅಧಿಕಾರಿಯ ಮುಂದೆ ನೀಡಿದ ಹೇಳಿಕೆಗೆ ಸಾಕ್ಷಿ ಸಹಿ ಮಾಡುವಂತಿಲ್ಲ. ಈ ಪ್ರಕ್ರಿಯೆ ಮುಖ್ಯವಾಗಿ

ಈ ಹೇಳಿಕೆಯನ್ನು ಪ್ರಕರಣದ ವಿಚಾರಣೆಯಲ್ಲಿ ನ್ಯಾಯಾಲಯದಲ್ಲಿ ಬಳಸುವಂತಿಲ್ಲ. ಸಿ.ಆರ್.ಪಿ.ಸಿ. ಕಲಂ 164 ರ ಅನ್ವಯ ಸಾಕ್ಷಿಗಳ ಹೇಳಿಕೆಯನ್ನು ಮ್ಯಾಜಿಸ್ಟ್ರೇಟರ ಮುಂದೆಯೂ ಮಾಡಿಸಿ ದಾಖಲಿಸಬಹುದು.

ಪೊಲೀಸ್ ಅಧಿಕಾರಿ ಪ್ರಕರಣದ ಚಾರ್ಜ್‌ಷೀಟ್ ಜತೆ ಲಗತ್ತಿಸಿರುವ ಸಾಕ್ಷಿಗಳ ಹೇಳಿಕೆಯನ್ನು ನ್ಯಾಯಾಲಯದಲ್ಲಿ ಪಬ್ಲಿಕ್ ಪ್ರಾಸಿಕ್ಯೂಟರ್ ಪರಿಶೀಲಿಸಿ ನ್ಯಾಯಾಲಯದ ವಿಚಾರಣೆ ಸಂದರ್ಭದಲ್ಲಿ ಸಾಕ್ಷಿಗೆ ಪ್ರಶ್ನೆಗಳನ್ನು ಕೇಳಲು ಉಪಯೋಗಿಸುತ್ತಾನೆ. ನ್ಯಾಯಾಲಯದಲ್ಲಿ ಪೊಲೀಸರ ಮುಂದೆ ಮಾಡಿರುವ ಹೇಳಿಕೆಯನ್ನೇ ಸಾಕ್ಷಿಯು ಪುಷ್ಟೀಕರಿಸಿದರೆ ಆಯಾ ಅಂಶಗಳು ವಿಚಾರಣೆ ಸಮಯದಲ್ಲಿ ಪುಷ್ಟೀಕರಣಗೊಂಡವು ಎಂದು ಹೇಳಬಹುದು. ಉದಾಹರಣೆಗೆ 'ಅ' ಎನ್ನುವವನು ಪೊಲೀಸರ ಮುಂದೆ "ನಾನು ಕೃಷ್ಣನನ್ನು ಒಬ್ಬ ವ್ಯಕ್ತಿ ಕೊಡಲಿಯಿಂದ ಹೊಡೆದ್ದುದನ್ನು ನೋಡಿದೆ" ಎಂದು ಹೇಳಿಕೆ ನೀಡಿ ನ್ಯಾಯಾಲಯದ ವಿಚಾರಣಾ ಸಮಯದಲ್ಲಿಯೂ ತನ್ನ ಹೇಳಿಕೆಯನ್ನೇ ಪುನರುಚ್ಚರಿಸಬಹುದು. ಇಲ್ಲವೇ "ಕೃಷ್ಣನಿಗೆ ಒಬ್ಬ ವ್ಯಕ್ತಿ ಹೊಡೆದ, ಆದರೆ ಕೊಡಲಿಯಿಂದಲ್ಲ" ಎನ್ನಬಹುದು. ಇಲ್ಲವೇ "ನಾನು ಕೃಷ್ಣನಿಗೆ ಯಾವ ವ್ಯಕ್ತಿ ಕೊಡಲಿ ಯಿಂದ ಹೊಡೆದ ಎನ್ನುವುದನ್ನು ನೋಡಿಲ್ಲ" ಎನ್ನಬಹುದು ಇಲ್ಲವೇ "ಈ ಘಟನೆಗೂ ನನಗೂ ಏನೇನೂ ಸಂಬಂಧವಿಲ್ಲ – ನಾನು ಕೃಷ್ಣನಿಗೆ ಹೊಡೆದದ್ದನ್ನು ನೋಡಿಯೇ ಇಲ್ಲ" ಎನ್ನಬಹುದು. ಈ ನಾಲ್ಕು ಹೇಳಿಕೆಗಳಲ್ಲಿ ಕಡೆಯ ಹೇಳಿಕೆ ಖಂಡಿತವಾಗಿಯೂ ಪ್ರತಿಕೂಲ ಹೇಳಿಕೆ ಎಂದು ಪರಿಗಣಿಸಲ್ಪಡುವಂತಹದು.

ಪೊಲೀಸರ ಮುಂದೆ ಸಾಕ್ಷಿ ನೀಡಿದ ಹೇಳಿಕೆಗೆ ಸಾಕ್ಷಿಯು ಸಹಿ ಮಾಡಬೇಕಾಗಿಲ್ಲದ್ದರಿಂದ "ನಾನು ಪೊಲೀಸರ ಮುಂದೆ ಹೇಳಿದ್ದೇ ಬೇರೆ, ಅವರು ದಾಖಲಿಸಿದ್ದೇ ಬೇರೆ" ಎಂದು ಸಾಮಾನ್ಯವಾಗಿ ನ್ಯಾಯಾಲಯದಲ್ಲಿ ಸಾಕ್ಷಿಗಳು ಹೇಳಿಬಿಡುತ್ತಾರೆ. ಇಂತಹವರು ಪ್ರತಿಕೂಲ ಸಾಕ್ಷಿಗಳು ಎಂದು ಕರೆಸಿಕೊಳ್ಳುವುದಿಲ್ಲ.

ಕೆಲವು ತನಿಖಾಧಿಕಾರಿಗಳು ಆರೋಪಿಗೆ ಶಿಕ್ಷೆ ಸಿಗಲಿ ಎನ್ನುವ ಘನ ಉದ್ದೇಶದಿಂದ ತನ್ನ ಮುಂದೆ ಸಾಕ್ಷಿ ನೀಡಿದ ಹೇಳಿಕೆಗೆ ಸ್ವಲ್ಪ ಮಟ್ಟಿಗೆ ಸಾಕ್ಷಿ ಹೇಳದಂತಹ ಅಂಶಗಳನ್ನೂ ಸೇರಿಸಿ ಹೇಳಿಕೆಯನ್ನು 'ಮಜಬೂತ್' ಮಾಡುತ್ತಾರೆ. ಉದಾಹರಣೆಗೆ ಸಾಕ್ಷಿ ತಾನು "ಆರೋಪಿ ಕಲ್ಲಿನಲ್ಲಿ ಮುದುಕಿಯೊಬ್ಬಳನ್ನು ಜಜ್ಜಿದ" ಎಂದು ಹೇಳಿದ್ದರೆ, ತನಿಖಾಧಿಕಾರಿ "ಆರೋಪಿ ಶನಿವಾರ ಸಂಜೆ ಆರ್ ಮುಂದುಗಡೆ ಹಸಿರು ಸೀರೆ ಧರಿಸಿದ್ದ ಮುದುಕಿಗೆ ಕಲ್ಲಿನಿಂದ ಐದಾರು ಬಾರಿ ಜಜ್ಜಿದ" ಎಂದು ಬರೆಯಬಹುದು. ಸಾಕ್ಷಿಯು ನ್ಯಾಯಾಲಯದಲ್ಲಿ ಪ್ರಾಸಿಕ್ಯೂಟರ್ ಮುಂದೆ ತಾನು ಹೀಗೆ ಪೊಲೀಸರ ಮುಂದೆ ಹೇಳಲೇ ಇಲ್ಲ ಎಂದು ಖಡಾಖಂಡಿತವಾಗಿ ಹೇಳಿಬಿಡಬಹುದು. ಹೀಗಾದಾಗ ಪೊಲೀಸರು ಸುಳ್ಳು ಹೇಳಿಕೆ ಬರೆದುಕೊಂಡಿದ್ದಾರೆ ಎಂಬ ಅಭಿಪ್ರಾಯ ನ್ಯಾಯಾಲಯದಲ್ಲಿ ಮೂಡಿಬಿಡುತ್ತದೆ. ಇದು ಕೇಸಿಗೆ ಮಾರಕವಾಗುತ್ತದೆ.

ಸಾಮಾನ್ಯವಾಗಿ ಪೊಲೀಸರ ಬಗ್ಗೆ ಸಾರ್ವತ್ರಿಕವಾಗಿ ಅಪನಂಬಿಕೆ ಇರುವುದರಿಂದ ಕ್ರಿಮಿನಲ್ ಪ್ರೊಸಿಜರ್ ಕೋಡಿನ ಅನ್ವಯ ತನಿಖಾಧಿಕಾರಿ ದಾಖಲಿಸಿರುವ ಸಾಕ್ಷಿಗಳ ಹೇಳಿಕೆಯ ಸತ್ಯಾಸತ್ಯತೆಯನ್ನು ಯಾರೂ ಗಂಭೀರವಾಗಿ ಪರಿಗಣಿಸುವುದೇ ಇಲ್ಲ. ಪೊಲೀಸರ ಮುಂದೆ ನೀಡಿದ ಹೇಳಿಕೆಯನ್ನು ಚಾಚೂ ತಪ್ಪದೆ ನ್ಯಾಯಾಲಯದಲ್ಲಿ ಸಾಕ್ಷಿಯೊಬ್ಬ ಸಮರ್ಥಿಸಿಕೊಂಡಾಗಲೇ ಅತ ಪ್ರಾಸಿಕ್ಯೂಷನ್ ಪರವಾಗಿ ಸಾಕ್ಷಿ ಹೇಳಿದ ಎನ್ನಬಹುದು.

ಪೊಲೀಸರು ವಸ್ತುನಿಷ್ಠವಾಗಿ ಸಾಕ್ಷಿಯ ಹೇಳಿಕೆಯನ್ನು ಚಾಚೂ ತಪ್ಪದೇ ದಾಖಲಿಸಿಕೊಂಡರೂ ಸಾಕ್ಷಿಗಳು ಕೋರ್ಟಿನಲ್ಲಿ ತಮ್ಮ ಹೇಳಿಕೆಯನ್ನು ತಿರುಚುತ್ತಾರೆ ಇಲ್ಲವೇ ಅಲ್ಲಗಳೆಯುತ್ತಾರೆ. ಇದಕ್ಕೆ ಮುಖ್ಯ ಕಾರಣ ಆರೋಪಿಯ ಬಗ್ಗೆ ಅವರಿಗೆ ಇರುವ ಭಯ. ಆರೋಪವನ್ನು ಎದುರಿಸುತ್ತಿರುವ ವ್ಯಕ್ತಿ ಅಧಿಕಾರದಿಂದಾಗಲೀ, ಹಣದಿಂದಾಗಲೀ, ಗೂಂಡಾಗಿರಿಯಿಂದಾಗಲಿ ಬಲಿಷ್ಠನಾಗಿದ್ದರೆ ಅಂತಹವನ ವಿರುದ್ಧ ಕೋರ್ಟಿನಲ್ಲಿ ಸಾಕ್ಷಿ ನೀಡಿದರೆ ತಮಗಾಗಲೀ, ತಮ್ಮ ಕುಟುಂಬದ ಸದಸ್ಯರಾಗಲೀ ಏನಾದರೂ ತೊಂದರೆ ಬರಬಹುದು ಎಂಬ ಹೆದರಿಕೆಯಿಂದ ಸಾಕ್ಷಿಗಳು ಪೊಲೀಸರ ಮುಂದೆ ನೀಡಿದ ಹೇಳಿಕೆಯನ್ನು ಅಲ್ಲಗಳೆಯುತ್ತಾರೆ. ಕೆಲವೊಮ್ಮೆ ಪ್ರಭಾವೀ ಆರೋಪಿಗಳು ತಮ್ಮ ಧನಬಲದಿಂದ ಸಾಕ್ಷಿಗಳನ್ನು ಖರೀದಿಸಿಬಿಡುತ್ತಾರೆ. ಗುಜರಾತಿನ "ಬೆಸ್ಟ್‌ಬೇಕರಿ" ಪ್ರಕರಣದಲ್ಲಿ ಸಾಕ್ಷಿಗಳು ಪ್ರತಿಕೂಲ ಹೇಳಿಕೆ ನೀಡಿದ್ದು ಹೆದರಿಕೆಯ ಕಾರಣದಿಂದಾದರೆ ದೆಹಲಿಯ 'ಜೆಸ್ಸಿಕಾ ಲಾಲ್' ಪ್ರಕರಣದಲ್ಲಿ ಇಂತಹ ಹೇಳಿಕೆ ಧನದ ಆಮಿಷದಿಂದಲೇ ನೀಡಿರಬಹುದು ಎಂದು ಸಾರ್ವಜನಿಕರ ಊಹೆ.

ರಾಷ್ಟ್ರಪತಿಗಳು ಇನ್ನೊಂದು ಸಂದರ್ಭದ ಇರುವಿಕೆಯ ಬಗ್ಗೆ ಹೇಳಿದ್ದಾರೆ. ಅದೇನೆಂದರೆ ಪೊಲೀಸರಿಂದಲೇ ಸಾಕ್ಷಿಗಳ ಬೆದರಿಕೆ. ಪೊಲೀಸರು ತನಿಖಾ ಸಮಯದಲ್ಲಿ ಸಾಕ್ಷಿಗಳ ಹೇಳಿಕೆಯನ್ನು ಸರಿಯಾಗಿ ದಾಖಲು ಮಾಡಿಕೊಂಡರೂ, ಅಂತಹ ಸಾಕ್ಷಿಗಳು ನ್ಯಾಯಾಲಯದಲ್ಲಿ ಸಾಕ್ಷಿ ಹೇಳಲು ಬರುವಾಗ ಪೊಲೀಸರೇ ಆರೋಪಿಗಳೊಂದಿಗೆ ಶಾಮೀಲಾಗಿ ಸಾಕ್ಷಿಗಳಿಗೆ ಬೆದರಿಕೆ ಹಾಕಿ ನ್ಯಾಯಾಲಯದಲ್ಲಿ ಸುಳ್ಳು ಸಾಕ್ಷಿ ಹೇಳುವಂತೆ ಪ್ರೇರೇಪಿಸುವುದು. ಎಷ್ಟೋ ಬಾರಿ ಪೊಲೀಸರು ತಮ್ಮ ಮೇಲಾಧಿಕಾರಿಗಳಿಗೆ ಹೆದರಿ, ಅಥವಾ ಅಂದಿನ ಸಂದರ್ಭಕ್ಕೆ ತಲೆಬಾಗಿ ಸಾಕ್ಷಿಗಳ ಹೇಳಿಕೆಯನ್ನು ವಸ್ತುನಿಷ್ಠವಾಗಿ ದಾಖಲಿಸಿಕೊಂಡರೂ, ಆ ಪ್ರಕರಣ ಕೋರ್ಟಿನ ಮೆಟ್ಟಿಲು ಹತ್ತಿದಾಗ ತಾವೇ ಆರೋಪಿಗಳ ಜತೆ ಗುಟ್ಟಾಗಿ ಒಂದುಗೂಡಿ ಸುಳ್ಳು ಸಾಕ್ಷಿ ಹೇಳುವಂತೆ ಒತ್ತಡ ಹೇರುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ.

ನಮ್ಮ ದೇಶದಲ್ಲಿ ಒಂದು ಕ್ರಿಮಿನಲ್ ಪ್ರಕರಣ ದಾಖಲಾದ ದಿನದಿಂದ ನ್ಯಾಯಾಲಯದಲ್ಲಿ ವಿಚಾರಣೆಗೆ ಬರುವವರೆಗೆ ಹಲವು ಹತ್ತು ವರ್ಷಗಳೇ ಕಳೆಯುವುದರಿಂದ ಎಂತಹ ಗುರುತರ ಪ್ರಕರಣವಾದರೂ ಸಮಾಜ ಆ ಪ್ರಕರಣವನ್ನು ಮರೆತುಬಿಟ್ಟಿರುತ್ತದೆ. ಮೇಲಾಗಿ ಪ್ರಕರಣದ ತನಿಖೆ ನಡೆಸಿದ ಅಧಿಕಾರಿ ವರ್ಗವಾಗಿ ಹೋಗಿರುತ್ತಾನೆ ಇಲ್ಲವೇ ನಿವೃತ್ತಿ ಹೊಂದಿರುತ್ತಾನೆ. ಸಾಕ್ಷಿಗಳು [ಪ್ರತ್ಯಕ್ಷದರ್ಶಿಗಳ ಸಹಿತವಾಗಿ] ಪ್ರಕರಣವನ್ನೇ ಮರೆತುಬಿಟ್ಟಿರುತ್ತಾರೆ. ಹಲವಾರು ವರ್ಷಗಳ ಹಿಂದೆ ನಡೆದ ಘಟನೆಯನ್ನು ಪೊಲೀಸರ ಮುಂದೆ ತಾವಿತ್ತ [illegible]

ಕೋರ್ಟಿನಲ್ಲಿ ದಾಖಲಿಸಲು ಸಾಧ್ಯವಿಲ್ಲ. ಮಾನವನಿಗೆ ಮರೆವು ಸಹಜವಾದ್ದರಿಂದ ಘಟನೆಯ ಬಗ್ಗೆ 'ಮರೆವು' ಬಂದರೆ ಅಂತಹ ಸಾಕ್ಷಿಯನ್ನು ಪ್ರತಿಕೂಲ ಸಾಕ್ಷಿ ಎಂದು ಹೇಗೆ ಕರೆಯಬಹುದು ಎಂಬ ಪ್ರಶ್ನೆಯೂ ಉದ್ಭವಿಸುತ್ತದೆ.

ಒಬ್ಬನನ್ನು ಪ್ರತಿಕೂಲ ಸಾಕ್ಷಿ ಎಂದು ಪರಿಗಣಿಸಬೇಕಾದಲ್ಲಿ ಪ್ರಪ್ರಥಮವಾಗಿ ಪಬ್ಲಿಕ್ ಪ್ರಾಸಿಕ್ಯೂಟರ್ ಆತನ ಸಾಕ್ಷ್ಯದ ಬಗ್ಗೆ ನ್ಯಾಯಾಧೀಶರಿಗೆ ಮನವರಿಕೆ ಮಾಡಿಕೊಟ್ಟು ನ್ಯಾಯಾಲಯದ ಅಪ್ಪಣೆಯ ಮೇರೆಗೆ ಅವನನ್ನು 'ಪ್ರತಿಕೂಲ ಸಾಕ್ಷಿ' ಎಂದು ದಾಖಲಿಸಿ ಆ ಸಾಕ್ಷಿಗೆ ಪಾಟೀ ಸವಾಲು ಮಾಡಬೇಕಾಗುತ್ತದೆ. ಕೆಲವೊಮ್ಮೆ ಪ್ರಾಸಿಕ್ಯೂಟರ್‌ಗಳೂ ಹಲವಾರು ರೀತಿಯ ಪ್ರೇರೇಪಣೆಗಳಿಗೆ ಒಳಗಾಗಿ ಒಬ್ಬ ವ್ಯಕ್ತಿ ಪೋಲೀಸರ ಮುಂದೆ ನೀಡಿದ ಹೇಳಿಕೆಯ ತದ್ವಿರುದ್ಧ ಹೇಳಿಕೆಯನ್ನು ನ್ಯಾಯಾಲಯದಲ್ಲಿ ನೀಡಿದರೂ ಅವನನ್ನು ಪ್ರತಿಕೂಲ ಸಾಕ್ಷಿ ಎಂದು ಪರಿಗಣಿಸದೇ ಆರೋಪಿಗೆ ಅನುಕೂಲ ಮಾಡಿಕೊಡಬಹುದು.

ಈ ಕಾರಣಗಳಿಂದ ಒಬ್ಬ ವ್ಯಕ್ತಿಯನ್ನು 'ಪ್ರತಿಕೂಲ ಸಾಕ್ಷಿ' ಎಂದು ಪರಿಗಣಿಸುವ ಸಂದರ್ಭಗಳು ತೀರಾ ವಿರಳ. ಮೀಡಿಯಾಗಳ ಗಮನ ಸೆಳೆದ ಪ್ರಕರಣಗಳಲ್ಲಿ ಮಾತ್ರ ಪ್ರತಿಕೂಲ ಸಾಕ್ಷಿಗಳು ಗುರುತಿಸಲ್ಪಡುತ್ತಾರೆ. ಉಳಿದಂತೆ ಪೋಲೀಸರ ಮುಂದೆ ನೀಡಿದ ಹೇಳಿಕೆಯ ತದ್ವಿರುದ್ಧವಾಗಿ ನ್ಯಾಯಾಲಯದಲ್ಲಿ ಹೇಳಿಕೆ ನೀಡಿದ ವ್ಯಕ್ತಿಗಳೂ ಯಾವ ರೀತಿಯ ತೊಂದರೆ ಇಲ್ಲದಂತೆ ತಪ್ಪಿಸಿಕೊಳ್ಳುತ್ತಾರೆ.

ಭಾರತ ದಂಡ ಸಂಹಿತೆಯ ಕಲಂ 193 ರ ಅನ್ವಯ ನ್ಯಾಯಾಲಯದಲ್ಲಿ ಸುಳ್ಳು ಹೇಳುವ ವ್ಯಕ್ತಿಗಳಿಗೆ ಏಳು ವರ್ಷಗಳವರೆಗೆ ಜೈಲಿಗೆ ಕಳುಹಿಸಬಹುದಾಗಿದೆ. ಆದರೂ ಇಂದಿಗೂ ಸಹಸ್ರಾರು ವ್ಯಕ್ತಿಗಳು ಸತ್ಯವನ್ನೇ ಹೇಳುತ್ತೇನೆ ಎಂದು ಪ್ರಮಾಣ ಮಾಡಿ ಅಸತ್ಯ ನುಡಿಯುತ್ತಾರೆ. ಇಂತಹ ಸಾಕ್ಷಿಗಳ ವಿರುದ್ಧ ಬಿಗಿಯಾದ ಕ್ರಮ ತೆಗೆದುಕೊಳ್ಳದಿದ್ದರೆ ನ್ಯಾಯದೇವತೆಗೇ ಅವಮಾನ ಮಾಡಿದಂತಾಗುತ್ತದೆ. ನಮ್ಮ ದೇಶದಲ್ಲಿ 'ಸಾಕ್ಷಿಗಳ ರಕ್ಷಣೆ' ಅಂದರೆ ಪ್ರಭಾವಶಾಲೀ ವ್ಯಕ್ತಿಗಳಿಂದ ಸಾಕ್ಷಿಗಳನ್ನು ರಕ್ಷಿಸುವ ಬಗ್ಗೆ ಕಾನೂನನ್ನು ರೂಪಿಸಬೇಕೆಂಬ ಚಿಂತನೆ ನಡೆಯುತ್ತಿದೆಯಾದರೂ ಇಲ್ಲಿಯವರೆಗೂ "ಸಾಕ್ಷಿ ರಕ್ಷಣೆ ಕಾನೂನು" ಬಂದಿಲ್ಲ.

2003ರಲ್ಲಿ ಕೇಂದ್ರ ಸರ್ಕಾರ ಕ್ರಿಮಿನಲ್ ತಿದ್ದುಪಡಿ ಮಸೂದೆಯೊಂದನ್ನು ಜಾರಿಗೊಳಿಸಲು ಹೊರಟಿತ್ತು. ಕ್ರಿಮಿನಲ್ ಪ್ರೊಸಿಜರ್ ಕೋಡಿನಲ್ಲಿ 164ಎ ಎಂಬ ಹೊಸ ಕಂಡಿಕೆ ಅಳವಡಿಸಿ ಯಾವ ಅಪರಾಧಕ್ಕೆ ಏಳು ವರ್ಷಗಳ ಕಾಲ ಜೈಲು ಶಿಕ್ಷೆ ಇಲ್ಲವೇ ಮರಣದಂಡನೆ ಇದೆಯೋ ಅಂಥಹಾ ಅಪರಾಧಗಳ ಸಾಕ್ಷಿಗಳ ಹೇಳಿಕೆಯನ್ನು ಪೋಲೀಸರು ಕಡ್ಡಾಯವಾಗಿ ಮ್ಯಾಜಿಸ್ಟ್ರೇಟರ ಮುಂದೆಯೇ ಮಾಡಿಸಬೇಕು; 344ಎ ಎಂಬ ಕಂಡಿಕೆ ಅಳವಡಿಸಿ ಪ್ರತೀಕೂಲ ಸಾಕ್ಷಿ ನೀಡಿದವರ ವಿರುದ್ಧ ನ್ಯಾಯಾಧೀಶರೇ ಕೂಡಲೇ ಕ್ರಮ ಜರುಗಿಸಬೇಕು ಎನ್ನುವ ತಿದ್ದುಪಡಿ ತರಲು ಉದ್ದೇಶಿಸಿತ್ತು. ಅಂತೆಯೇ ಭಾರತ ದಂಡ ಸಂಹಿತೆಯಲ್ಲಿ 195ಎ ಎಂಬ ಕಂಡಿಕೆ ಸೇರಿಸಿ ಯಾವ ವ್ಯಕ್ತಿ ಸಾಕ್ಷಿಗಳಿಗೆ ಪ್ರತಿಕೂಲ ಹೇಳಿಕೆ

ನೀಡುವಂತೆ ಪ್ರೇರೇಪಿಸುತ್ತಾನೋ ಇಲ್ಲವೇ ಬೆದರಿಸುತ್ತಾನೋ ಅಂತಹವನ ಮೇಲೂ ಕಠಿಣ ಕ್ರಮ ತೆಗೆದುಕೊಳ್ಳಬಹುದೆಂದು ಸೂಚಿಸಿತ್ತು. ದುರಾದೃಷ್ಟವಶಾತ್ ಈ ಮಸೂದೆ ಕಾನೂನಾಗಿ ಮಾರ್ಪಡಲಿಲ್ಲ.

ಮೇಲ್ಕಾಣಿಸಿದ ತಿದ್ದುಪಡಿಗಳೇ ಅಲ್ಲದೆ ಕ್ರಿಮಿನಲ್ ಪ್ರೊಸೀಜರ್ ಕೋಡಿನ ಕಂಡಿಕೆ 162ಕ್ಕೆ ತಿದ್ದುಪಡಿ ತಂದು [ಇದರೊಡನೆ ತತ್ಸಂಬಂಧದ ಭಾರತೀಯ ಸಾಕ್ಷ್ಯ ಅಧಿನಿಯಮಕ್ಕೂ ತಿದ್ದುಪಡಿಯಾಗಬೇಕು] ಎಸ್.ಪಿ. ದರ್ಜೆಯ ಅಧಿಕಾರಿಯೊಬ್ಬನ ಮುಂದೆ ಸಾಕ್ಷಿ ನೀಡಿದ ಹೇಳಿಕೆಯನ್ನು ನ್ಯಾಯಾಲಯ ಸತ್ಯವೆಂದು ಪರಿಗಣಿಸಬೇಕು. "ಸಾಕ್ಷಿ ರಕ್ಷಣಾ ಕಾಯ್ದೆ" ಶೀಘ್ರದಲ್ಲಿ ಜಾರಿಗೆ ಬರಬೇಕು. ಹೀಗಾದಾಗಲೇ ಅಪರಾಧಿಗಳು ಕಾನೂನಿನ ಚೌಕಟ್ಟಿನಿಂದ ಸುಲಭವಾಗಿ ತಪ್ಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲ.

# 45

## ಮರಣ ದಂಡನೆ - ಇಂದಿಗೆ ಪ್ರಸ್ತುತವೇ ?

ಸುಪ್ರೀಂಕೋರ್ಟ್ ಇತ್ತೀಚೆಗೆ ಎರಡು ಬೇರೆ ಬೇರೆ ಪ್ರಕರಣದಲ್ಲಿ ಮರಣದಂಡನೆಯ ತೀರ್ಪಿತ್ತಿದೆ. ಇದರಲ್ಲಿ ಮೊದಲನೆಯದು ನಮ್ಮ ರಾಜ್ಯದ ಚಾಮರಾಜನಗರ ಜಿಲ್ಲೆಗೆ ಸಂಬಂಧಿಸಿದ್ದು. ಶಿವು ಹಾಗೂ ಜಡೆಸ್ವಾಮಿ ಎಂಬಿಬ್ಬರು ಯುವಕರು ಭದ್ರಯ್ಯನಹಳ್ಳಿಯ ಶಿವಮ್ಮ ಎಂಬ ಯುವತಿಯ ಮೇಲೆ 2001ರ ಅಕ್ಟೋಬರ್‌ನಲ್ಲಿ ಅತ್ಯಾಚಾರ ನಡೆಸಿ ಆಕೆಯನ್ನು ಅಮಾನುಷವಾಗಿ ಕೊಲೆಮಾಡಿದ್ದರು. ಈ ಕೊಲೆಗೆ ಮೊದಲು ಇದೇ ಯುವಕರು ಶಿವಮ್ಮನ ಸೋದರಿಯ ಮೇಲೂ ಹಾಗೂ ಇನ್ನೊಬ್ಬ ಯುವತಿಯ ಮೇಲೂ ಅತ್ಯಾಚಾರಕ್ಕೆ ಪ್ರಯತ್ನಿಸಿದ್ದು ಇವರಲ್ಲಿ ಅತ್ಯಾಚಾರ ಮಾಡುವ ಪ್ರವೃತ್ತಿ ಇತ್ತು ಎಂದು ಕಂಡುಬಂದಿತ್ತು. ಈ ಕೇಸಿನಲ್ಲಿ ಸೆಷನ್ಸ್ ಹಾಗೂ ಉಚ್ಚ ನ್ಯಾಯಾಲಯದಲ್ಲಿ ನೀಡಿದ ಮರಣ ದಂಡನೆ ತೀರ್ಪನ್ನು ಸುಪ್ರಿಂಕೋರ್ಟ್ ಎತ್ತಿ ಹಿಡಿದಿದೆ.

ಎರಡನೆಯ ಪ್ರಕರಣ 2001ರ ಆಗಸ್ಟ್‌ನಲ್ಲಿ ಹರಿಯಾಣಾದ ಹಿಸಾರ್ ಜಿಲ್ಲೆಯಲ್ಲಿ ನಡೆದದ್ದು. ಸೋನಿಯಾ ತನ್ನ ಗಂಡ ಸಂಜೀವ್‌ಕುಮಾರ್ ಜತೆಗೂಡಿ ತನ್ನ ಕೋಟ್ಯಾಧಿಪತಿ ತಂದೆ ರೇಲುರಾಮ್ ಪೂನಿಯಾ, ತಾಯಿ ಕೃಷ್ಣಾ ಬಲಸೋದರ ಸುನೀಲ್, ಅತ್ತಿಗೆ ಶಕುಂತಲಾ, ಸುನೀಲ್‌ನ ಮೂರು ಮಕ್ಕಳು (4 ವರ್ಷ, 2 ವರ್ಷ ಹಾಗೂ ಎರಡೂವರ ತಿಂಗಳು) ಮತ್ತು ತನ್ನ ತಂಗಿ ಪ್ರಿಯಾಂಕಾ ಇವರನ್ನು ಕೊಂದಿದ್ದಳು. ಸೋನಿಯಾ ಹಾಗೂ ಪ್ರಿಯಾಂಕಾ ರೇಲುರಾಂನ ಎರಡನೇ ಪತ್ನಿ ಕೃಷ್ಣಾಳ ಮಕ್ಕಳು. ಸುನಿಲ್ ಮೊದಲ ಪತ್ನಿಯ

ಮಗ. ತಂದೆಯ ಅಪಾರ ಆಸ್ತಿಯಲ್ಲಿ ತನಗೆ ಪಾಲು ಬರದೇ ಹೋಗಬಹುದು ಎನ್ನುವ ಭಾವನೆಯಿಂದ ಕರಾಟೆ ಪಟುವಾದ ಸೋನಿಯಾ ಎಂಟೂ ಜನ ಸಂಬಂಧಿಗಳ ಕೊಲೆ ಮಾಡಿದ್ದಳು. ಈ ಕೇಸಿನಲ್ಲಿ ಸೆಷನ್ಸ್ ನ್ಯಾಯಾಲಯ ನೀಡಿದ ಮರಣದಂಡನೆ ಶಿಕ್ಷೆಯನ್ನು ಪಂಜಾಬ್ ಹೈಕೋರ್ಟ್ ಜೀವಾವಧಿ ಶಿಕ್ಷೆಗೆ ಇಳಿಸಿತ್ತು. ಆದರೆ ಸುಪ್ರಿಂಕೋರ್ಟ್ ಮರಣ ದಂಡನೆಯನ್ನೇ ಖಾಯಂ ಮಾಡಿದೆ.

ಏತನ್ಮಧ್ಯೆ, ತಮಿಳುನಾಡಿನ ಸೇಲಂ ಸೆಷನ್ಸ್ ನ್ಯಾಯಾಲಯ ಧರ್ಮಪುರಿಯಲ್ಲಿ ಫೆಬ್ರುವರಿ 2, 2000 ದಂದು ಶೈಕ್ಷಣಿಕ ಪ್ರವಾಸದಲ್ಲಿದ್ದ ಕಾಲೇಜು ವಿದ್ಯಾರ್ಥಿನಿಯರಿಂದ ತುಂಬಿದ್ದ ಬಸ್ ಒಂದಕ್ಕೆ ಬೆಂಕಿ ಹಚ್ಚಿ ಮೂವರು ವಿದ್ಯಾರ್ಥಿನಿಯರ ಸಜೀವ ದಹನಕ್ಕೆ ಕಾರಣವಾದ ಅಣ್ಣಾ ಡಿಎಂಕೆ ಮೂವರು ಕಾರ್ಯಕರ್ತರನ್ನು ಗಲ್ಲಿಗೇರಿಸುವ ತೀರ್ಪಿತ್ತಿದೆ.

ಸಂಸತ್‌ಭವನದ ದಾಳಿಗೆ ಕಾರಣನಾಗಿ ಮರಣದಂಡನೆ ಎದುರಿಸುತ್ತಿರುವ ಅಫ್ಜಲ್ ಗುರು ಎನ್ನುವ ಆತಂಕವಾದಿಗೆ ರಾಷ್ಟ್ರಪತಿಗಳು ಕ್ಷಮಾದಾನ ಮಾಡಬೇಕೆಂದು ಅರುಂಧತಿ ರಾಯ್, ಸೇರಿದಂತೆ ಹಲವಾರು 'ಬುದ್ಧಿಜೀವಿಗಳು' ಒತ್ತಡ ಹೇರುತ್ತಿರುವ ಈ ಸಮಯದಲ್ಲಿ ಕಳೆದ ವಾರದ ಸುಪ್ರೀಂ ಕೋರ್ಟಿನ ತೀರ್ಪುಗಳು ಒಂದು ವಿಶೇಷ ಸಂಕೇತವನ್ನು ನೀಡಿವೆ. 2004ರಲ್ಲಿ ಧನಂಜಯ ಚಟರ್ಜಿ ಎನ್ನುವವನನ್ನು 14 ವರ್ಷದ ಶಾಲಾ ಬಾಲಕಿಯನ್ನು ಅತ್ಯಾಚಾರ ಮಾಡಿ ಕೊಲೆಗೈದ ಕೇಸಿನಲ್ಲಿ ಗಲ್ಲಿಗೇರಿಸಿದಾಗ ಮರಣದಂಡನೆ ನಮ್ಮ ಕಾನೂನಿನಲ್ಲಿ ಇರಬೇಕೇ ಎನ್ನುವ ವಾದ ಪ್ರಾರಂಭವಾಗಿತ್ತು.

ಎಂತಹ ಪ್ರಕರಣಗಳಲ್ಲಿ ಮರಣ ದಂಡನೆಯನ್ನು ನೀಡಬಹುದೆಂದು ಈಗಾಗಲೇ ಸುಪ್ರೀಂ ಕೋರ್ಟ್ 'ಬಚ್ಚನ್‌ಸಿಂಗ್ ವಿರುದ್ಧ ಪಂಜಾಬ್ ರಾಜ್ಯ' ಕೇಸಿನಲ್ಲಿ ವಿವರಿಸಿ ಇಂತಹ ಶಿಕ್ಷೆಯು ವಿರಳದಲ್ಲಿಯೂ ಅತಿ ವಿರಳ ಪ್ರಕರಣದಲ್ಲಿ ಮಾತ್ರ ನೀಡಬೇಕು ಎಂದಿದೆ. 'ಮಚ್ಚಿಸಿಂಗ್ ಪ್ರಕರಣ'ದಲ್ಲಿ ಮರಣದಂಡನೆ ತೀರ್ಪು ನೀಡುವಾಗ ಎಂತಹ ನಿಯಮಗಳನ್ನು ನ್ಯಾಯಾಲಯಗಳು ಅನುಸರಿಸಬೇಕು ಎಂದು ಸುಪ್ರೀಂ ಕೋರ್ಟ್ ದಾಖಲಿಸಿದೆ. ಯಾವ ಸಂದರ್ಭದಲ್ಲಿ ಅಪರಾಧ ನಡೆದಿದೆ; ಯಾವ ರೀತಿ ನಡೆದಿದೆ; ಅಪರಾಧದ ಹಿಂದೇಇದ್ದಂತಹ ಇರಾದೆ; ಅಪರಾಧದ ಭೀಕರತೆ; ಎಂತಹ ವ್ಯಕ್ತಿಗಳು (ಅಂದರೆ ಅಬಲೆಯರು, ಬಾಲಕರು, ವೃದ್ಧರು, ಸಮಾಜದಲ್ಲಿ ಉನ್ನತ ಸ್ಥಾನ ಹೊಂದಿರುವವರು ಹಾಗೂ ಆರೋಪಿಯ ಎದುರು ಅಸಹಾಯಕರಾದಂತಹ ವ್ಯಕ್ತಿಗಳು) ಅಪರಾಧಕ್ಕೆ ತುತ್ತಾದರು ಎನ್ನುವ ವಿಷಯವನ್ನು ಪರಿಗಣಿಸಬೇಕು ಎಂದು ತಿಳಿಸಿದೆ. ಹೀಗಾಗಿ ಇಡೀ ಸಮಾಜದ ಹೃದಯವನ್ನೇ ಕಲಕುವಂತಹ ಪ್ರಕರಣಗಳಲ್ಲಿ ಮಾತ್ರ ಮರಣದಂಡನೆ ಲಭ್ಯ ಎಂದು ಭಾವಿಸಬಹುದಾಗಿದೆ.

ಮರಣ ದಂಡನೆ ಖಂಡಿಸುವವರು, ವಿಶ್ವದ ೫೦ಕ್ಕೂ ಹೆಚ್ಚು ರಾಷ್ಟ್ರಗಳು ಈ ಶಿಕ್ಷೆಯನ್ನು ರದ್ದು ಪಡಿಸಿವೆ. ಎಷ್ಟೋ ಬಾರಿ ಅಮಾಯಕ, ಬಡವರ್ಗದ ವ್ಯಕ್ತಿಗಳೇ ಇಂತಹ ಶಿಕ್ಷೆಗೆ ಗುರಿಯಾಗುತ್ತಾರೆ. ಶ್ರೀಮಂತ ವರ್ಗದವರು ಮರಣ ದಂಡನೆಯಿಂದ ಪಾರಾಗುತ್ತಾರೆ. ಕಣ್ಣಿಗೆ ಕಣ್ಣು, ಹಲ್ಲಿಗೆ ಹಲ್ಲು ಎನ್ನುವ ನಿಯಮದ ಪಾಲನೆ ಸಲ್ಲ. ಅಪರಾಧಿಗಳಿಗೆ ಸುಧಾರಣೆ

ಹೊಂದಿ ಸಮಾಜದ ಮುಖ್ಯವಾಹಿನಿಗೆ ಬರಲು ನಾವು ಅನುಕೂಲ ಮಾಡಿಕೊಡಬೇಕೇ ಹೊರತು ಅಪರಾಧಿಯ ಪ್ರಾಣವನ್ನು ತೆಗೆದು ಆತನ ಮಾನವ ಹಕ್ಕನ್ನು ಕಸಿದುಕೊಳ್ಳಬಾರದು ಎಂದು ಪ್ರತಿಪಾದಿಸುತ್ತಾರೆ.

ಮರಣದಂಡನೆಯ ವಿರೋಧಿಗಳು ಹೇಳುವ ಒಂದು ಮಾತನ್ನು ಒಪ್ಪಬಹುದು. ಈ ಶಿಕ್ಷೆಯಿಂದ ಘೋರ ರೀತಿಯ ಅಪರಾಧಗಳ ಪ್ರಮಾಣವೇನೂ ಕಡಿಮೆ ಆಗಿಲ್ಲ ಎನ್ನುವುದು. ಗಮನಿಸಬೇಕಾದ ಅಂಶವೆಂದರೆ ನೂರು ಘೋರ ಕ್ರಿಮಿನಲ್ ಪ್ರಕರಣಗಳಲ್ಲಿ ೪೦ ಪ್ರಕರಣಗಳಲ್ಲಿ ಮಾತ್ರ ಶಿಕ್ಷೆಯಾಗುತ್ತದೆ. ಮರಣದಂಡನೆ ಶಿಕ್ಷೆಗೆ ಗುರಿಯಾಗುವ ಪ್ರಕರಣಗಳ ಸಂಖ್ಯೆ ಅತಿ ವಿರಳ. 1975 ರಿಂದ 1991 ರವರೆಗೆ ಕೇವಲ 40 ಜನರು ನಮ್ಮ ದೇಶದಲ್ಲಿ ಗಲ್ಲಿಗೇರಿದ್ದರೆ 1995 ರಿಂದ 2004 ರವರೆಗೆ ಯಾರನ್ನೂ ಗಲ್ಲಿಗೇರಿಸಲಿರಲಿಲ್ಲ 2004 ರಿಂದ 2005ರ ಕೊನೆಯವರೆಗೆ ಸುಮಾರು 15 ಜನರಿಗೆ ಮರಣ ದಂಡನೆ ಶಿಕ್ಷೆಯಾಗಿರಬಹುದು ಎಂದು ಹೇಳಲಾಗುತ್ತಿದೆ. (ಇಲ್ಲಿಯವರೆಗೆ ಅಧಿಕೃತ ಅಂಕಿ ಅಂಶಗಳು ಲಭ್ಯವಿಲ್ಲದಿರುವುದರಿಂದ ಈ ಎಲ್ಲಾ ಸಂಖ್ಯೆಗಳೂ ಅಂದಾಜಷ್ಟೇ). ನಮ್ಮ ರಾಜ್ಯದಲ್ಲಿ ವೀರಪ್ಪನ್ ಸಹಚರರಾದ ನಾಲ್ಕು ಮಂದಿ ಟಾಡಾ ಪ್ರಕರಣವೊಂದರಲ್ಲಿ ಕಲ ವರ್ಷದ ಹಿಂದೆ ಗಲ್ಲು ಶಿಕ್ಷೆಗೆ ಗುರಿಯಾಗಿದ್ದಾರೆ.

ಮರಣದಂಡನೆಯಿಂದ 'ಜೀವನದ ಹಕ್ಕು' ಕುಂಠಿತವಾಗುವುದು ಸಹಜ. ಆದರೆ ಕಲ ಸಂದರ್ಭಗಳಲ್ಲಿ ಈ ಅನಿವಾರ್ಯತೆ ಉಂಟಾಗುತ್ತದೆ. ಯಾವ ವ್ಯಕ್ತಿ ಇನ್ನೊಬ್ಬನ ಮಾನವ ಹಕ್ಕುಗಳನ್ನು ಹಾನಿಗೊಳಿಸುವನೋ ಅಂತಹ ವ್ಯಕ್ತಿ ತನ್ನ ಮಾನವ ಹಕ್ಕುಗಳನ್ನು ಕಳೆದುಕೊಳ್ಳುತ್ತಾನೆ. ಮತ್ತು ಇಂತಹ ವ್ಯಕ್ತಿಗಳ ಬಗ್ಗೆ ಮರುಕ ಸಲ್ಲದು ಎಂದು ಕಾನೂನು ತಜ್ಞರ ಅಭಿಪ್ರಾಯ.

ಗಲ್ಲು ಶಿಕ್ಷೆ ಆಗಬೇಕಾದರೆ ನಾಲ್ಕು ಹಂತಗಳಲ್ಲಿ ಪರಿಶೀಲನೆ ಆಗಿರುತ್ತದೆ. ಮೊದಲನೆಯದು ಸೆಷನ್ಸ್ ನ್ಯಾಯಾಲಯ, ಎರಡನೆಯದು ಹೈಕೋರ್ಟ್. ಈ ಎರಡು ನ್ಯಾಯಾಲಯಗಳ ಹಂತದಲ್ಲಿ ಶಿಕ್ಷೆ ಆಗಬೇಕಾದರೆ ಸಾಕಷ್ಟು ಸಾಕ್ಷ್ಯಾಧಾರಗಳು ಇರಲೇಬೇಕು. ಮೂರನೇಯದು ಸುಪ್ರೀಂ ಕೋರ್ಟ್. ಎಲ್ಲಾ ಕೋನಗಳಿಂದಲೂ ಆರೋಪವನ್ನು ಪರಿಗಣಿಸಿದ ನಂತರವೇ ಸುಪ್ರೀಂ ಕೋರ್ಟ್ ಮರಣದಂಡನೆಯನ್ನು ನೀಡುವುದು. ನಾಲ್ಕನೆಯ ಹಂತದಲ್ಲಿ ರಾಷ್ಟ್ರಪತಿಗಳ ಮಟ್ಟದಲ್ಲೂ ಪರಿಶೀಲನೆ ಆಗುವುದರಿಂದ ಅಮಾಯಕರು ಮಾತ್ರ ಇಂತಹ ಶಿಕ್ಷೆಗೆ ಒಳಪಡಬಲ್ಲರು ಎನ್ನುವ ವಾದದಲ್ಲಿ ಹುರುಳಿಲ್ಲ.

ಎಂತಹ ಕೃತ್ಯಗಳು ಮರಣ ದಂಡನೆಗೆ ಅರ್ಹವಾಗಿದೆ ಎನ್ನುವುದನ್ನು ನೋಡಿದರೆ ದೇಶದ ನಾಯಕರ ಕಗ್ಗೊಲೆ (ಇಂದಿರಾ ಗಾಂಧಿ ಕೊಲೆ ಪ್ರಕರಣ ಹಾಗೂ ರಾಜೀವ್ ಗಾಂಧಿ ಹತ್ಯೆ) ಆತಂಕವಾದಿ ಕೃತ್ಯಗಳು (ಪಾರ್ಲಿಮೆಂಟ್ ಭವನದ ಮೇಲಿನ ದಾಳಿ). ಮುಗ್ಧ ಮಕ್ಕಳ ಹಾಗೂ ಅಮಾಯಕ ಸ್ತ್ರೀಯರ ಅತ್ಯಾಚಾರ ಹಾಗೂ ಕೊಲೆ, ದರೋಡೆ ಜತೆಗೆ ಕೊಲೆ, ದೇಶದ ವಿರುದ್ಧ ಯುದ್ಧ ಸಾರುವುದು ಇತ್ಯಾದಿ. ಗಲ್ಲು ಶಿಕ್ಷೆಗೆ ಈಡು ಮಾಡುವ ಕೃತ್ಯಗಳಲ್ಲಿ

ಮುಖ್ಯವಾಗಿ ನೋಡುವುದು ಆ ಪ್ರಕರಣದ ತೀವ್ರತೆ ಮತ್ತು ಭೀಕರತೆಯಲ್ಲದೆ ಕೃತ್ಯ ಮಾಡಿದವನ ಮಾನಸಿಕ ಸ್ಥಿತಿ. ಪೂರ್ವಯೋಜಿತ ಕೃತ್ಯವೇ ಅಲ್ಲವೇ, ಆರೋಪಿಯ ವಯಸ್ಸು ಮುಂತಾದುವನ್ನೂ ಪರಿಗಣಿಸಬೇಕು. ಆರೋಪಿಯು ತನ್ನನ್ನು ತಾನು ತಿದ್ದಿಕೊಳ್ಳಬಲ್ಲನೇ ಎನ್ನುವ ಅಂಶವೂ ಪರಿಗಣಿಸಲ್ಪಡುತ್ತದೆ. ಸಮಾಜಕ್ಕೆ ಹೇಸಿಗೆ ಬರಿಸುವಂತಹ (ನಿಥಾರಿಯಲ್ಲಿ ಇತ್ತೀಚೆಗೆ ನಡೆದ ಅಮಾಯಕ ಮಕ್ಕಳ ಹಾಗೂ ಯುವತಿಯರ ಅತ್ಯಾಚಾರ ಹಾಗೂ ಹತ್ಯೆ, ತದನಂತರ ಅಂಗಾಂಗಳ ಬೇರ್ಪಡೆ ಮತ್ತು ಅವುಗಳನ್ನು ಮೂಟೆಗಳಲ್ಲಿ ಕಟ್ಟಿ ಎಸೆದು ಸಾಕ್ಷ್ಯ ನಾಶ ಪಡಿಸಿದ್ದು ಇಂತಹ ಕೃತ್ಯವಲ್ಲವೇ) ಕೃತ್ಯಗಳು ಮರಣ ದಂಡನೆಗೆ ಯೋಗ್ಯ ಎಂದು ನಮ್ಮ ದೇಶ ಭಾವಿಸುತ್ತದೆ. ಬಾಂಬ್‌ಗಳನ್ನು ಸ್ಫೋಟಿಸಿ ನೂರಾರು ಅಮಾಯಕರ ಪ್ರಾಣವನ್ನು ತೆಗೆದುಕೊಳ್ಳುವಂತಹ ಕೃತ್ಯವೂ ಮರಣದಂಡನೆಗೆ ಅರ್ಹವಾದದ್ದು.

ಕ್ರಿಮಿನಲ್ ನ್ಯಾಯ ವ್ಯವಸ್ಥೆಯ ಪರಿಷ್ಕರಣೆಯ ಬಗ್ಗೆ ಇತ್ತೀಚಗೆ ರಚಿಸಲಾಗಿದ್ದ ನ್ಯಾಯಮೂರ್ತಿ ಮಳೀಮಠ ಆಯೋಗ ಮರಣದಂಡನೆ ಶಿಕ್ಷೆಯನ್ನು ರದ್ದುಪಡಿಸಬೇಕೆಂದು ಹೇಳಿಲ್ಲ. ಸರಿಸಮನಾದ ಕೃತ್ಯಗಳಿಗೆ ಸರಿಸಮಾನವಾಗಿ ಶಿಕ್ಷೆ ನೀಡುವ ಬಗ್ಗೆ ಮಾರ್ಗದರ್ಶಿ ಕಾನೂನನ್ನು ತರಬೇಕೆಂದು ಆಯೋಗ ಸೂಚಿಸಿದೆ. ರಾಷ್ಟ್ರೀಯ ಕಾನೂನು ಆಯೋಗ ಸಹಾ ಸದ್ಯದ ಪರಿಸ್ಥಿತಿ ಮರಣದಂಡನೆಯನ್ನು ರದ್ದುಪಡಿಸಲು ಸೂಕ್ತವಲ್ಲ ಎಂದೇ ಅಭಿಪ್ರಾಯ ಪಟ್ಟಿದೆ.

ಈ ಹಿನ್ನಲೆಯಲ್ಲಿ ಸುಪ್ರೀಂಕೋರ್ಟಿನ ಇತ್ತೀಚಿನ ತೀರ್ಪುಗಳು ಮರಣದಂಡನೆಯ ಮುಂದುವರಿಯುವಿಕೆಯ ಪರವಾಗಿಯೇ ಇದೆ. ವಿರೋಧಿಗಳು ಏನೇ ಅಭಿಪ್ರಾಯ ವ್ಯಕ್ತಪಡಿಸಿದರೂ ನಮ್ಮ ಸಮಾಜ ಮರಣದಂಡನೆಯ ರದ್ದತಿಗೆ ಇನ್ನೂ ಸಹಮತಿಯನ್ನು ನೀಡಿಲ್ಲ.

# 46

## ಗಣ್ಯ ವ್ಯಕ್ತಿಗಳ ವೈಯುಕ್ತಿಕ ರಕ್ಷಣೆಯಲ್ಲಿನ ಲೋಪ

1983 ರಲ್ಲಿ ಇಂದಿರಾ ಗಾಂಧಿಯವರ ಭೀಕರ ಹತ್ಯೆಯಾದ ಕೂಡಲೇ ದೇಶದಲ್ಲಿ ಒಂದು ರೀತಿಯ ಭಯದ ವಾತಾವರಣ ಉಂಟಾಯಿತು. ಸಾಕಷ್ಟುಗಣ್ಯರು ತಮ್ಮ ವೈಯಕ್ತಿಕ ರಕ್ಷಣೆಗೆ ಪೊಲೀಸರನ್ನು ನಿಯುಕ್ತಿಗೊಳಿಸಬೇಕು ಎನ್ನುವ ಬೇಡಿಕೆ ಸಲ್ಲಿಸಲು ಪ್ರಾರಂಭಿಸಿದರು. ಇವರ ಪರಿಣಾಮವಾಗಿ ಹಲವಾರು ಗಣ್ಯವ್ಯಕ್ತಿಗಳಿಗೆ ಅವರವರ ಅಂತಸ್ತಿಗೆ ತಕ್ಕಂತೆ ಅಂಗರಕ್ಷಕರನ್ನು ನಿಯೋಜಿಸುವ ಪರಿಪಾಠ ಆರಂಭವಾಯಿತು. ಕೆಲವರು ಪಿಹಲಿ ಪೊಲೀಸ್ ಪಡೆಯ ರಕ್ಷಕರನ್ನು ಪಡೆದರೆ ಇನ್ನೂ ಕೆಲವರು ಬ್ಲ್ಯಾಕ್ ಕ್ಯಾಟ್ ಕಮಾಂಡೋಗಳನ್ನು ಪಡೆದರು. ಮನೆ ಹಾಗೂ ಕಚೇರಿಗಳಿಗೆ ಅಂಗರಕ್ಷಕ ದಳವನ್ನು ನಿಯುಕ್ತಿಗೊಳಿಸಬೇಕಾಗಿ ಬಂದದ್ದರಿಂದ ಪೊಲೀಸ್ ಪಡೆಗಳ ಹೆಚ್ಚಿನ ಅಂಶ ಅಂಗರಕ್ಷಕ ಕರ್ತವ್ಯಕ್ಕೇ ಮೀಸಲು ಇಡುವಂತೆ ಆಗಿಬಿಟ್ಟಿತು. ಇದರಿಂದ ಪೊಲೀಸ್ ಪಡೆಗಳು ಮಾಡಬೇಕಾಗಿದ್ದ ದೈನಂದಿನ ಕರ್ತವ್ಯಗಳಿಗೆ ಸಾಕಷ್ಟು ತೊಂದರೆ ಉಂಟಾಯಿತು. ತತ್ಪರಿಣಾಮ ಪೊಲೀಸ್ ಪಡೆಗಳ ಮುಖ್ಯಸ್ಥರು ವಿ.ಐ.ಪಿ. ಸೆಕ್ಯೂರಿಟಿಯನ್ನು ವೈಜ್ಞಾನಿಕವಾಗಿ ಮಾಡಬೇಕು ಎನ್ನುವ ಒಮ್ಮತದ ಅಭಿಪ್ರಾಯಕ್ಕೆ ಬಂದರು.

ವಿ.ಐ.ಪಿ.ಗಳ ರಕ್ಷಣಾ ವ್ಯವಸ್ಥೆಯನ್ನು ಸಮರ್ಪಕ ರೀತಿಯಲ್ಲಿ ನಿರ್ವಹಿಸಬೇಕು, ಅಂಗರಕ್ಷಕರನ್ನು ಪಡೆಯುವುದು ಸ್ಟೇಟಸ್ ಸಿಂಬಲ್ ಆಗಿ ಪರಿಗಣಿಸಲ್ಪಡಬಾರದು. ಯಾವ ವ್ಯಕ್ತಿಯ ಜೀವಕ್ಕೆ ಯಾವ ಯಾವ ರೀತಿಯ ಅಪಾಯ ಒದಗಬಹುದು ಎಂಬುದನ್ನು ಪರಿಗಣಿಸಿ ಅದಕ್ಕೆತಕ್ಕಂತಹ ಭದ್ರತಾ ವ್ಯವಸ್ಥೆಮಾಡಬೇಕೇ ಹೊರತು ಒಬ್ಬ ವ್ಯಕ್ತಿಯ ಸ್ಥಾನವನ್ನೇ

ಮುಕ್ತವಾಗಿಟ್ಟುಕೊಂಡು ಅಂಗರಕ್ಷಕ ವ್ಯವಸ್ಥೆಯನ್ನು ರೂಪಿಸಬಾರದು ಇತ್ಯಾದಿ ವಿಷಯಗಳು ವ್ಯಕ್ತವಾದವು. ಪ್ರತಿಯೊಬ್ಬ ವಿ.ಐ.ಪಿ.ಗೆ ಕೊಡುವ ಭದ್ರತಾ ವ್ಯವಸ್ಥೆಯನ್ನು Z, Z+ Y, ಇತ್ಯಾದಿಯಾಗಿ ಗುರುತಿಸಿ ಅಂಥಾ ವರ್ಗಕ್ಕೆ ತಕ್ಕಂತೆ ಭದ್ರತಾ ಸಿಬ್ಬಂದಿಯನ್ನು ನಿಯುಕ್ತಿಗೊಳಿಸಬೇಕೆಂಬ ಅಭಿಪ್ರಾಯ ಮೂಡಿಬಂತು.

ಎಷ್ಟೋ ಬಾರಿ ಒಬ್ಬ ಗಣ್ಯ ವ್ಯಕ್ತಿಯ ಜೀವಕ್ಕೆ ಒಂದು ಸಂದರ್ಭದಲ್ಲಿರುವಂತಹ ಅಪಾಯ ಮುಂದಿನ ಸಂದರ್ಭದಲ್ಲಿ ರುವುದಿಲ್ಲ. ಉದಾಹರಣೆಗೆ ಒಬ್ಬ ವ್ಯಕ್ತಿ ನೌಕರಿಯಲ್ಲಿದ್ದಾಗ ಪಡೆಯುತ್ತಿದ್ದ ಭದ್ರತೆ ಆತ ನಿವೃತ್ತಿ ಹೊಂದಿದ ನಂತರ ಪಡೆಯಬೇಕಾಗಿಲ್ಲ. ಹೀಗಾಗಿ ಯಾವ ವ್ಯಕ್ತಿಗೆ ಎಷ್ಟು ಭದ್ರತೆಯನ್ನು ಯಾವಾಗ ನೀಡಬೇಕು ಎನ್ನುವುದರ ಬಗ್ಗೆ ಕಾಲಕಾಲಕ್ಕೆ ಪರಾಮರ್ಶೆ ನಡೆಸಬೇಕಾದ ಅಗತ್ಯ ಇದೆ. ಇತ್ತೀಚಿನ ದಿನಗಳಲ್ಲಿ ವಿ.ಐ.ಪಿ.ಗಳಿಗೆ ಅಂಗರಕ್ಷಕರನ್ನು ನೇಮಿಸುವಾಗ ಈ ರೀತಿಯ ಚಿಂತನೆ ನಡೆಸಲಾಗುತ್ತದೆ.

ಅಂಗರಕ್ಷಕರಿದ್ದ ಮಾತ್ರಕ್ಕೆ ವಿ.ಐ.ಪಿ.ಯ ಪ್ರಾಣಕ್ಕೆ ಯಾವ ರೀತಿಯ ಅಪಾಯವೂ ಇಲ್ಲ ಎಂದು ಭಾವಿಸಲು ಸಾಧ್ಯವಿಲ್ಲ. ಅಂಗರಕ್ಷಕರಿದ್ದಾಗಲೇ ರಾಜೀವ್ ಗಾಂಧಿಯವರ ಹತ್ಯೆ ಆಯಿತು. ಅಂಗರಕ್ಷಕರನ್ನು ನೇಮಿಸಲಾಗಿದ್ದ ಹಲವಾರು ವಿ.ಐ.ಪಿಗಳು ಕಿಡ್ನಾಪ್ ಆದರು. ಹೀಗಾಗಿ ಅಂಗರಕ್ಷಕರಿದ್ದ ಕೂಡಲೇ ಅಪಾಯವೇ ಇಲ್ಲ ಎಂದು ಭಾವಿಸಲು ಸಾಧ್ಯವಿಲ್ಲ. ಇಂಗ್ಲೀಷಿನಲ್ಲಿ ಒಂದು ಗಾದೆ ಮಾತಿದೆ. ಒಬ್ಬ ಅಂಗರಕ್ಷಕ ಸದಾಕಾಲವೂ ಅದೃಷ್ಟಶಾಲಿಯಾಗಿರಬೇಕು; ಆದರೆ ಒಬ್ಬ ಕೊಲೆಗಾರ ಒಂದು ಸಲ ಅದೃಷ್ಟಶಾಲಿಯಾದರೆ ಸಾಕು ಎಂದು. ಇದರ ತಾತ್ಪರ್ಯ ಅಂಗರಕ್ಷಕನ ಒಂದು ಬಾರಿಯ ವೈಫಲ್ಯ ಇಲ್ಲವೇ ಕರ್ತವ್ಯಲೋಪ ಕೊಲೆಗಾರನ ಅದೃಷ್ಟವನ್ನೇ ಖುಲಾಯಿಸುತ್ತದೆ. ಏಕೆಂದರೆ ಕೊಲೆಗಾರ ಕೇವಲ ಒಂದು ಬಾರಿ ತನ್ನ ಪ್ರಯತ್ನದಲ್ಲಿ ಸಫಲನಾದರೆ ಅವನು ತನ್ನ ಗುರಿ ಮುಟ್ಟಿರುತ್ತಾನೆ. ಹೀಗಾಗಿ ಅಂಗರಕ್ಷಕರು ಒಮ್ಮೆಯೂ ತಮ್ಮ ಕರ್ತವ್ಯದಲ್ಲಿ ವಿಫಲರಾಗುವಂತೆಯೇ ಇಲ್ಲ. ಹೀಗಿದ್ದರೂ ಸಹ ಅಂಗರಕ್ಷಣಾ ಕಾರ್ಯದಲ್ಲಿ ಹಲವಾರು ವೈಫಲ್ಯಗಳು ಇತ್ತೀಚಿನ ದಿನಗಳಲ್ಲಿ ಕಂಡುಬರುತ್ತಿವೆ.

ಇಂದಿನ ದಿನಗಳಲ್ಲಿ ಎರಡು ರೂಪದಲ್ಲಿ ಅಂಗ ರಕ್ಷಕರ ಕರ್ತವ್ಯಲೋಪವಾಗುತ್ತಿದೆ. ಒಂದನೆಯದು ಅಂಗರಕ್ಷಕ ತನ್ನ ಪೊಲೀಸ್ ಕರ್ತವ್ಯವನ್ನು ಸಾರಾ ಸಗಟಾಗಿ ಮರೆತುಬಿಡುವುದು ಗಣ್ಯ ವ್ಯಕ್ತಿಯ ರಕ್ಷಣೆ ಮಾಡುವ ಬದಲು ಅವರ ಕಾರಿನ ಬಾಗಿಲು ತೆಗೆಯುವುದು, ದೂರವಾಣಿ ಕರೆಗಳನ್ನು ಸ್ವೀಕರಿಸುವುದು, ಅಂಗಡಿಯಿಂದ ಸಣ್ಣಪುಟ್ಟ ವಸ್ತುಗಳನ್ನು ತಂದುಕೊಡುವುದು ಇತ್ಯಾದಿ ರಕ್ಷಣೆಗೆ ಸಂಬಂಧವೇ ಇಲ್ಲದ ಕಾರ್ಯಗಳನ್ನು ಮಾಡುವುದು. ಎರಡನೆಯದಾಗಿ ಅಂಗರಕ್ಷಕರು ತಾವು ಗಣ್ಯ ವ್ಯಕ್ತಿಯ ಜೀವದ ರಕ್ಷಣೆ ಮಾಡಬೇಕು ಎನ್ನುವ ಮೂಲ ಕರ್ತವ್ಯವನ್ನು ಬದಿಗೊತ್ತಿ ಗಣ್ಯ ವ್ಯಕ್ತಿ ಮನೆಯಲ್ಲಿರುವಾಗ ಅವರ ಖಾಸಗಿ ಕೆಲಸಗಳನ್ನು ಮಾಡಲು ತೊಡಗಿ ಪೂರ್ತಿಯಾಗಿ ಕರ್ತವ್ಯ ಮರೆತುಬಿಡುತ್ತಾರೆ. ನಾನು ಗುಜರಾತಿಗೆ ಹೋಗಿದ್ದಾಗ ಒಬ್ಬ ರಾಜಕೀಯ ವ್ಯಕ್ತಿಯನ್ನು ಭೇಟಿಯಾಗುವ ಆಕಸ್ಮಿಕ ಅವಕಾಶ ಒದಗಿಬಂತು. ಆ ವ್ಯಕ್ತಿಯು ರಾಜಕೀಯಕ್ಕೆ ಧುಮುಕುವ ಮೊದಲು ಪೊಲೀಸ್ ಕಾನ್‌ಸ್ಟೇಬಲ್ ಆಗಿದ್ದ ಎಂದು ಕೇಳಿದಾಗ ನನ್ನ ಆಶ್ಚರ್ಯಕ್ಕೆ ನಾನಾ!

ಇರಲಿಲ್ಲ. ನೀನು ಏಕೆ ಪೋಲೀಸ್ ಕೆಲಸ ಬಿಟ್ಟು ರಾಜಕೀಯಕ್ಕೆ ಬಂದೆ ಎಂದು ಕೇಳಿದಾಗ ಆತ ನೀಡಿದ ಉತ್ತರ ನನ್ನ ಮನದಿಂದ ಮಾಸಿಯೇ ಇಲ್ಲ. ಆತ ಒಬ್ಬ ಹಿರಿಯ ರಾಜಕಾರಣಿಯ ಅಂಗ ರಕ್ಷಕ ಕರ್ತವ್ಯಕ್ಕೆ ನಿಯುಕ್ತಗೊಂಡಾಗ ಆ ರಾಜಕಾರಣಿ ಪಟ್ಟಾಶಿಷ್ಯನಾಗಿ ಕಾಲಕ್ರಮೇಣ ರಾಜಕಾರಣದ ಪಾಠ ಕಲಿತುಬಿಟ್ಟ. ಕೆಲ ವರ್ಷಗಳ ನಂತರ ರಾಜಕಾರಣಿಯ ಮನೆಗೆ ಯಾರಾದರೂ ಕೆಲಸ ಹುಡುಕಿಕೊಂಡು ಬಂದರೆ ಆ ಕೆಲಸವನ್ನು ತಾನೇ ಮಾಡಿಕೊಟ್ಟು ಜನಾನುರಾಗವನ್ನೂ ಹಾಗೂ ಹಣವನ್ನೂ ಗಳಿಸಿದನಂತೆ. ಆ ನಂತರ ಪೋಲೀಸ್ ಕೆಲಸದಲ್ಲಿರುವುದಕ್ಕಿಂತ ರಾಜಕಾರಣದಲ್ಲಿರುವುದೇ ಮೇಲು ಎಂದು ತೀರ್ಮಾನಿಸಿ ಪೋಲೀಸ್ ಕೆಲಸಕ್ಕೆ ರಾಜೀನಾಮೆ ನೀಡಿ ರಾಜಕೀಯ ಪಕ್ಷವೊಂದರ ಟಿಕೇಟ್ ಪಡೆದು ಎಂ.ಎಲ್.ಎ.ಕೂಡ ಆಗಿಬಿಟ್ಟನಂತೆ.

ಹೀಗೆ ರಾಜಕಾರಣಿಗಳನ್ನು ತೀರಾ ಹತ್ತಿರದಿಂದ ನೋಡುವ ಹಲವಾರು ಪೋಲೀಸರು ತಾವೂ ರಾಜಕಾರಣಿ ಆಗಬೇಕೆನ್ನುವ ಹಂಬಲಪಡುವುದು ಸಹಜವೇ. ಹಂಬಲಗಳು ಏನೇ ಇರಲಿ ಅಂಗರಕ್ಷಕ ದಳದವರು ತಾವು ಮಾಡಬೇಕಾದ ಕೆಲಸವನ್ನು ಮರೆಯದೇ ಇರಬೇಕಾದರೆ ಅವರುಗಳು ಕಾಲಕಾಲಕ್ಕೆ ಕರ್ತವ್ಯದ ಸಮಯ ಬದಲಾಯಿಸುತ್ತಾ ಇರಬೇಕು. ರಕ್ಷಣಾ ಕಾರ್ಯಕ್ರಮವನ್ನು ಯೋಜಿಸುವಾಗ ಅಧಿಕಾರಿಗಳು ಮೊದಲು ನೋಡಬೇಕಾದ್ದು ಯಾವ ವಿ.ಐ.ಪಿ.ಯ ಭದ್ರತೆಗೆಂದು ಒಬ್ಬ ವ್ಯಕ್ತಿಯನ್ನು ನೇಮಿಸಲಾಗಿದೆಯೋ ಅವನ ಕೆಲಸದ ವೇಳೆ, ವಾರದ ಬಿಡುವು ಹಾಗೂ ರಕ್ಷಿಸಬೇಕಾದ ವಿ.ಐ.ಪಿ.ಗಳನ್ನು ಬದಲಾಯಿಸುವುದು ಅತ್ಯವಶ್ಯ.

ಮಾಜಿ ಪ್ರಧಾನಿ ಇಂದಿರಾ ಗಾಂಧಿಯವರ ರಕ್ಷಣಾ ದಳದವರನ್ನು ಕಾಲಕಾಲಕ್ಕೆ ಬದಲಾಯಿಸಿದ್ದರೆ ರಕ್ಷಣಾ ದಳದವರೇ ಅವರ ಹತ್ಯೆ ಮಾಡುವುದನ್ನು ತಪ್ಪಿಸಬಹುದಿತ್ತು ಎಂಬುದು ಬಹಳ ಜನರ ಅನಿಸಿಕೆ. ಅದೃಷ್ಟವಶಾತ್ ಇಂದಿನ ದಿನಗಳಲ್ಲಿ ಪ್ರಧಾನ ಮಂತ್ರಿಗಳು ಮತ್ತಿತರ ಗಣ್ಯಾತಿಗಣ್ಯರ ರಕ್ಷಣಾ ದಳಕ್ಕೆ ಸಿಬ್ಬಂದಿ ನೇಮಿಸುವಾಗ ಆ ಸಿಬ್ಬಂದಿಯ ಪೂರ್ವಾಪರ ವಿಚಾರಿಸುವುದೇ ಅಲ್ಲದೇ ಅಂಗರಕ್ಷಕ ದಳದವರು ಹೆಚ್ಚು ಕಾಲ ಒಂದೇ ಜಾಗದಲ್ಲಿ ಕರ್ತವ್ಯ ನಿರ್ವಹಿಸಲು ಬಿಡುವುದಿಲ್ಲ. ಬೇಹುಗಾರಿಕಾ ದಳದವರು ಅಂಗರಕ್ಷಕರ ಕೆಲಸವಿಲ್ಲದ ವೇಳೆಯಲ್ಲಿ ಏನು ಮಾಡುತ್ತಿದ್ದಾನೆ, ಯಾರು ಯಾರನ್ನು ಭೇಟಿಯಾಗುತ್ತಾನೆ, ಯಾವ ರೀತಿ ಹಣ ಖರ್ಚು ಮಾಡುತ್ತಾನೆ ಇತ್ಯಾದಿ ವಿಷಯಗಳ ಬಗ್ಗೆ ಮಾಹಿತಿ ಸಂಗ್ರಹಿಸಿ, ಸ್ವಲ್ಪ ಅನುಮಾನ ಬಂದರೂ ಅಂತಹ ಸಿಬ್ಬಂದಿಯನ್ನು ಕೆಲಸದಿಂದ ಕೂಡಲೇ ತೆಗೆದುಹಾಕಿ ಬಿಡುತ್ತಾರೆ.

ಆದರೆ ರಾಜ್ಯಗಳಲ್ಲಿ ಹೀಗಾಗುವುದಿಲ್ಲ. ಹಲವಾರು ಮಂತ್ರಿಗಳಿಗೆ ಹಾಗೂ ಮತ್ತಿತರ ವಿ.ಐ.ಪಿ.ಗಳಿಗೆ ಕೊಟ್ಟಿರುವ ಅಂಗರಕ್ಷಕ ಸಿಬ್ಬಂದಿ ವರ್ಷಾನು ಗಟ್ಟಲೆ ಅದೇ ಜಾಗದಲ್ಲಿಯೇ ಇರುತ್ತಾರೆ. ಎಷ್ಟೋ ಜನರು ವಿ.ಐ.ಪಿ.ಗಳ ಕುಟುಂಬಕ್ಕೆ ತೀರಾ ಹತ್ತಿರವಾಗಿ ಅಂಗರಕ್ಷಕ ಕೆಲಸವನ್ನೇ ಮಾಡದೆ ಇತರೇ ಕೆಲಸಕಾರ್ಯ ಮಾಡುತ್ತಾರೆ. ಅವರನ್ನೇನಾದರೂ ಬದಲಾಯಿಸಿ ಹೊರಟರೆ ಗಣ್ಯ ವ್ಯಕ್ತಿಗಳೇ ಸಂಬಂಧಿಸಿದ ಹಿರಿಯ ಅಧಿಕಾರಿಗೆ ಫೋನಾಯಿಸಿ ನನ್ನ ಗನ್ ಮ್ಯಾನನ್ನೇ ಮುಂದುವರಿಸಿ, ನನಗೆ ಅವನೇ ಒಗ್ಗಿದ್ದಾನೆ ಎಂದು ಶಿಫಾರಸು ಮಾಡುತ್ತಾರೆ. ತಮ್ಮದೇ ರಕ್ಷಣೆಯನ್ನು

ಗಮನದಲ್ಲಿಟ್ಟುಕೊಂಡು ವಿ.ಐ.ಪಿಗಳು ಎರಡು ಮೂರು ತಿಂಗಳಿಗೊಮ್ಮೆ ತಮಗೆ ಕೊಟ್ಟ ಅಂಗರಕ್ಷಕರನ್ನು ಬದಲಾಯಿಸುವುದು ಸೂಕ್ತ. ಬಹಳ ಕಾಲ ಒಬ್ಬನೇ ಅಂಗರಕ್ಷಕನನ್ನು ಇಟ್ಟುಕೊಳ್ಳುವುದು ಅವರ ಭದ್ರತೆಯ ದೃಷ್ಟಿಯಿಂದ ಅಪಾಯಕಾರಿ.

# 47

## ದೃಶ್ಯ ಮಾಧ್ಯಮಗಳಲ್ಲಿ ಪೊಲೀಸರ ಅವಹೇಳನ ಏಕೆ?

ರಾಜ್ಯದ ಡಿ.ಜಿ.ಹುದ್ದೆಯ ಹಸ್ತಾಂತರದ ಸಂದರ್ಭದಲ್ಲಿ ಎ.ವಿ ಭಾಸ್ಕರ್ ಸಿನಿಮಾಗಳಲ್ಲಿ ಪೊಲೀಸರನ್ನು ಕೀಳಾಗಿ ಪ್ರದರ್ಶಿಸುವುದನ್ನು ತಪ್ಪಿಸಬೇಕು ಎನ್ನುವ ಮಾತನ್ನು ಹೇಳಿದರು. ಸ್ಥಳದಲ್ಲೇ ಇದ್ದ ಮಾಧ್ಯಮ ಮಿತ್ರರು ಡಿ.ಜಿ.ಸಾಹೇಬರು ನಿವೃತ್ತಿ ವೇಳೆಗೆ ಈ ವಿಷಯಕ್ಕೆ ಏಕೆ ಇಷ್ಟು ಮಹತ್ವ ನೀಡಿದರು ಎಂದು ನನ್ನನ್ನು ಕೇಳಿದರು. 35ಕ್ಕೂ ಹೆಚ್ಚು ವರ್ಷ ಪೊಲೀಸ್ ಇಲಾಖೆಯಲ್ಲಿ ಕೆಲಸ ಮಾಡಿದ ಅಧಿಕಾರಿಗೆ ಪೊಲೀಸರ ಬಗ್ಗೆ ದೃಶ್ಯ ಮಾಧ್ಯಮದವರು ಪದೇ ಪದೇ ಮಾಡುತ್ತಿರುವ ಅವಹೇಳನ ಬೇಸರವನ್ನು ತಂದಿರಬೇಕಲ್ಲವೇ ಎಂದುತ್ತರಿಸಿದೆ.

ದೃಶ್ಯ ಮಾಧ್ಯಮಗಳಲ್ಲಿ ಪೊಲೀಸರನ್ನು ಯಥಾವತ್ತಾಗಿ ನಿರೂಪಿಸಿರುವ ಸಂದರ್ಭಗಳು ತೀರಾ ಕಡಿಮೆ. ಪೊಲೀಸರನ್ನು ಹಲವು ಸ್ಟೀರಿಯೋ ಟೈಪ್ಡ್ ರೀತಿಗಳಲ್ಲಿ ತೋರಿಸಲಾಗುತ್ತದೆ. ಇದರಲ್ಲಿ ಮೊದಲನೆಯದು ಪೊಲೀಸರು ಪೆದ್ದರು ಹಾಗೂ ಬಫೂನ್‌ಗಳು ಎಂದು. ಸಮವಸ್ತ್ರವನ್ನು ಸರಿಯಾಗಿ ಧರಿಸದೇ ಗುಡಾರದಂತಹ ಹೊಟ್ಟೆಯನ್ನು ಬಿಟ್ಟುಕೊಂಡು ಕಳ್ಳನನ್ನು ಓಡಿಸಿಕೊಂಡು ಹೋಗುವಾಗ ಬಿದ್ದು ಮುಗ್ಗರಿಸಿ ಪೇಚಿಗೆ ಸಿಕ್ಕಿಕೊಳ್ಳುವಂತಹ ವ್ಯಕ್ತಿ ಎಂದೇ ಸಾಮಾನ್ಯವಾಗಿ ರೂಪಿಸಲಾಗುತ್ತದೆ. ಒಬ್ಬ ವ್ಯಕ್ತಿ ಬಾಳೆಹಣ್ಣಿನ ಸಿಪ್ಪೆ ಜಾರಿ ಮುಗ್ಗರಿಸಿದಾಗ ಹೇಗೆ ಜನಕ್ಕೆ ನಗೆ ಬರುತ್ತದೆಯೋ ಅದೇ ರೀತಿ ಗುಡಾಣ ಹೊಟ್ಟೆಯ ದೊಡ್ಡ ಮೀಸೆ ಪೊಲೀಸರನ್ನು ನೋಡಿದಾಗಲೂ ನಗೆ ಬರುತ್ತದೆ.

ಪೊಲೀಸರು ಕ್ರೂರಿಗಳು ಎನ್ನುವುದು ಇನ್ನೊಂದು ರೀತಿಯ ನಿರೂಪಣೆ. ಪೊಲೀಸ್ ಠಾಣೆಗೆ ಒಬ್ಬ ವ್ಯಕ್ತಿಯನ್ನು ಕರೆತಂದು ಅವನಿಗೆ ಹಿಗ್ಗಾಮುಗ್ಗಾ ಥಳಿಸಿ ಥರ್ಡ್ ಡಿಗ್ರಿ ಟ್ರೀಟ್‌ಮೆಂಟ್ ಕೊಡುವವರೇ ನಿಜವಾದ ಪೊಲೀಸರು ಎಂದು ಭಾವಿಸಿ ಈ ರೀತಿಯ ದೃಶ್ಯಗಳನ್ನು ಅಳವಡಿಸಲಾಗುತ್ತದೆ.

ಪೊಲೀಸರು ಅದಕ್ಷರು ಎಂದು ನಿರೂಪಿಸುವುದು ಸರ್ವೇಸಾಮಾನ್ಯ. ಎಂಟು ಹತ್ತು ವಿಲನ್‌ಗಳನ್ನು ಏಕಮಾದ ಹೀರೋ ಸರಿಯಾಗಿ ಥಳಿಸಿ ಅವರನ್ನು ಕಟ್ಟಿಹಾಕಿ ಮೀಸೆ ತಿರುವುತ್ತಿದ್ದಾಗ ಪೀ ಪೀ ಎಂದು ವಿಸಿಲ್ ಊದುತ್ತಾ ಸ್ಥಳಕ್ಕೆ ಬಂದ ಪೊಲೀಸರು ಕಟ್ಟಿ ಹಾಕಿದ್ದ ದುಷ್ಟರನ್ನು 'ಯು ಆರ್ ಅಂಡರ್ ಅರೆಸ್ಟ್' ಎಂದು ಜೀಪಿನಲ್ಲಿ ಕರೆದುಕೊಂಡು ಹೋಗುವುದರ ಜೊತೆಗೆ ಚಿತ್ರದ ಮುಕ್ತಾಯವಾಗುವುದೂ ಸಾಮಾನ್ಯ.

ಇನ್ನೂ ಕೆಲವು ಚಿತ್ರಗಳಲ್ಲಿ ಪೊಲೀಸರು ಹಣಕ್ಕಾಗಿ ಏನನ್ನಾದರೂ ಮಾಡುವವರು ಹಾಗೂ ವಿಲನ್‌ಗಳ ಜತೆಯೇ ಶಾಮೀಲಾಗುವವರು ಎನ್ನುವ ನಿರೂಪಣೆ ಮಾಡಲಾಗುತ್ತದೆ. ಎಷ್ಟೋ ಚಿತ್ರಗಳಲ್ಲಿ ವಿಲನ್ ಮನೆಯಲ್ಲಿ ಕೊಟ್ಟಂತಹ ಔತಣಕೂಟದಲ್ಲಿ ಸಮವಸ್ತ್ರಧರಿಸಿದ ಪೊಲೀಸ್ ಕಮೀಷನರ್ ಕೈಯಲ್ಲಿ ವಿಸ್ಕಿ ಹಿಡಿದುಕೊಂಡು ಕ್ಯಾಬರೆ ಡ್ಯಾನ್ಸ್ ಎಂಜಾಯ್ ಮಾಡುತ್ತಿರುವುದನ್ನು ತೋರಿಸಲಾಗಿದೆ. ಕೆಲವು ಚಿತ್ರಗಳಲ್ಲಿ ಕೆಳಹಂತದ ಪ್ರಾಮಾಣಿಕ ಪೊಲೀಸ್ ಅಧಿಕಾರಿಗಳು ವಿಲನ್‌ನನ್ನು ಹಿಡಿಯಲು ಹೊರಟಾಗ ಅಪ್ರಾಮಾಣಿಕನಾದಂಥ ಅವರ ಮೇಲಧಿಕಾರಿ ವಿಲನ್‌ನನ್ನು ರಕ್ಷಿಸಲು ಹೊರಟ ಸೀನ್‌ಗಳು ಇಲ್ಲದಿಲ್ಲ.

ಕೆಲವೊಂದು ಚಿತ್ರಗಳಲ್ಲಂತೂ ಪೊಲೀಸ್ ಅಧಿಕಾರಿಯೇ ಕಾನೂನನ್ನು ಕೈಗೆತೆಗೆದುಕೊಂಡು ಭ್ರಷ್ಟರಾಜಕಾರಣಿಗೆ ಗುಂಡುಹೊಡೆದು ಸಾಯಿಸುವ ಸಂದರ್ಭಗಳನ್ನು ನಿರೂಪಿಸಲಾಗಿದೆ. ವ್ಯವಸ್ಥೆಯ ಮೇಲೆ ಬಂಡೆದ್ದ ಪೊಲೀಸ್ ಅಧಿಕಾರಿ ತನ್ನ ಆಯುಧದಿಂದ ಎಲ್ಲ ಭ್ರಷ್ಟರನ್ನೂ ಸಾಯಿಸಿಬಿಟ್ಟರೆ ಜನ ಮೆಚ್ಚುತ್ತಾರೆ ಎನ್ನುವ ಭಾವನೆ ನಿರ್ದೇಶಕರ ಮನಸ್ಸಿನಲ್ಲಿದ್ದಿರಬಹುದು.

ಒಟ್ಟಿನಲ್ಲಿ ಚಿತ್ರಗಳಲ್ಲಿ ತೋರಿರುವ ಪೊಲೀಸರಿಗೂ, ನಿಜ ಜೀವನದಲ್ಲಿರುವಂತಹ ಪೊಲೀಸರಿಗೂ ಅಜಗಜಾಂತರ ವ್ಯತ್ಯಾಸ. ಕೇವಲ ಕೆಲವೇ ಚಿತ್ರಗಳಲ್ಲಿ ಪೊಲೀಸರನ್ನು ಸರಿಯಾಗಿ ನಿರೂಪಿಸಲಾಗಿದೆ. ಉದಾಹರಣೆಗೆ, ಅರ್ಧಸತ್ಯ, ಸರ್ಫರೋಶ್, ಶೂಲ್, ಕಂಪನಿ ಇತ್ಯಾದಿ. ಟಿ.ವಿ.ಧಾರವಾಹಿಗಳಲ್ಲಿ ನೋಡಿದರೆ 'ಉಡಾನ್' ಮಾತ್ರ ಪೊಲೀಸರ ನೈಜ ಚಿತ್ರಣ ನಿರೂಪಿಸಿದ್ದು. ಇದಕ್ಕೆ ಕಾರಣ ನಾಯಕಿಯ ಸಹೋದರಿ ನಿಜಜೀವನದಲ್ಲಿ ಐ.ಪಿ.ಎಸ್. ಅಧಿಕಾರಿ. ಪೊಲೀಸರನ್ನು ಕೀಳಾಗಿ, ಅಸಹ್ಯವಾಗಿ, ನಗೆಬುಗ್ಗೆ ಚಿಮ್ಮಿಸುವ ವ್ಯಕ್ತಿಗಳಾಗಿ ತೋರಿಸಿದರೂ ಸೆನ್ಸಾರ್ ಮಂಡಳಿ ಕಣ್ಣುಮುಚ್ಚಿಕೊಂಡು ಕೂತಿರುತ್ತದೆಯೇ ಎಂದು ಹಲವರು ಕೇಳುತ್ತಾರೆ. ಸೆನ್ಸಾರ್ ಮಂಡಳಿಯಲ್ಲಿರುವಂತಹ ವ್ಯಕ್ತಿಗಳು ಸಮಾಜದ ವಿವಿಧ ವರ್ಗಗಳಿಂದ ಬಂದವರೇ ಆಗಿರುವುದರಿಂದ ಅವರಿಗೂ ಪೊಲೀಸರ ಬಗ್ಗೆ ಇರುವಂತಹ ಮಾಹಿತಿ ಅಪೂರ್ಣವಾಗಿರುವುದರಿಂದ ಸೆನ್ಸಾರ್ ಮಂಡಳಿಯನ್ನು ದೂಷಿಸುವುದರಲ್ಲಿ ಅರ್ಥವಿಲ್ಲ.

ಸಾರ್ವಜನಿಕರಿಗೆ ಪೊಲೀಸರೊಡನೆ ಇರುವಂತಹ ಸಂಬಂಧ ತೀರಾ ಕಡಿಮೆ. ಸಾರ್ವಜನಿಕರು ಪೊಲೀಸ್ ಠಾಣೆಗೆ ಹೋಗಲು ಹೆದರುವುದರಿಂದಲೇ ಪೊಲೀಸರ ಬಗ್ಗೆ ಅವರ ಏನು ಅರಿಯುತ್ತಾರೋ ಅವೆಲ್ಲವೂ ಸಾರ್ವಜನಿಕ ಸ್ಥಳಗಳಲ್ಲಿ ಪೊಲೀಸರು ಹೇಗೆ ವರ್ತಿಸುತ್ತಾರೆ ಎನ್ನುವುದು ಪ್ರತ್ಯಕ್ಷವಾಗಿ ಕಂಡೇ ಆಗಬೇಕು ಅಥವಾ ಪೇಪರ್‌ಗಳಲ್ಲಿ ಓದಬೇಕು. ರಸ್ತೆಯಲ್ಲಿರುವ ಟ್ರಾಫಿಕ್ ಕಾನ್‌ಸ್ಟೇಬಲ್ ವಾಹನ ಚಾಲಕರಿಂದ ಲಂಚ ಪಡೆದರೆ ಎಲ್ಲಾ ಪೊಲೀಸರೂ ಲಂಚಕೋರರೆಂದೇ ಜನ ಭಾವಿಸುತ್ತಾರೆ. ದಾರಿಯಲ್ಲಿ ಹೋಗುತ್ತಿದ್ದ ಮಹಿಳೆಯ ಚೀಲವನ್ನು ಒಬ್ಬ ಕಳ್ಳ ಕಸಿದು ಕೊಂಡು ಓಡುತ್ತಿದ್ದರೆ ಸ್ಥಳದಲ್ಲೇ ಇದ್ದ ಪೊಲೀಸ್ ಕಾನ್‌ಸ್ಟೇಬಲ್ ಅವನನ್ನು ಬೆನ್ನಟ್ಟಿ ಹಿಡಿಯಲು ವಿಫಲನಾದರೆ ಪೊಲೀಸರು ದೈಹಿಕವಾಗಿ ಅಶಕ್ತರು ಎಂದು ಜನ ಭಾವಿಸುತ್ತಾರೆ. ಸಣ್ಣ ತಪ್ಪು ಮಾಡಿ ಸಿಕ್ಕಿ ಬಿದ್ದ ನಾಗರಿಕರ ಜತೆ ಪೊಲೀಸರು ಸೊಂಟದ ಕೆಳಗಿನ ಭಾಷೆ ಉಪಯೋಗಿಸಿದರೆ ಪೊಲೀಸರು ಸುಸಂಸ್ಕೃತರಲ್ಲ ಎಂದು ಸಾರ್ವಜನಿಕರು ಸಹಜವಾಗಿಯೇ ಭಾವಿಸುತ್ತಾರೆ. ಪೊಲೀಸರು ಕಾನೂನು ಸುವ್ಯವಸ್ಥೆ ಸಂದರ್ಭದಲ್ಲಿ ಕೈಗೆ ಸಿಕ್ಕಿದ ಅಮಾಯಕರನ್ನು ಹಿಗ್ಗಾಮುಗ್ಗಾ ಹೊಡೆದರೆ ಪೊಲೀಸರು ಕ್ರೂರಿಗಳು ಎನ್ನುವ ಭಾವನೆ ಮೂಡಿಯೇ ತೀರುತ್ತದೆ.

ಈ ರೀತಿ ಕೆಲವು ಸಂದರ್ಭಗಳನ್ನು ಪ್ರತ್ಯಕ್ಷವಾಗಿ ನೋಡಿದ ಸಾರ್ವಜನಿಕರು ಪೊಲೀಸರ ಬಗ್ಗೆ ಒಂದು ದೃಢವಾದ ಭಾವನೆಯನ್ನು ಮಾಡಿಕೊಂಡುಬಿಡುತ್ತಾರೆ- ಪೊಲೀಸರು ಕ್ರೂರಿಗಳು, ಲಂಚಕೋರರು, ಸಾರ್ವಜನಿಕರ ಹಿತವನ್ನು ಕಾಪಾಡದಿರುವವರು, ಕಳ್ಳರನ್ನು ಹಿಡಿಯಲು ಅಸಮರ್ಥರು ಎಂದು. ಸಿನಿಮಾ ಕಥೆ ಬರೆಯುವ ಲೇಖಕರು ಹಾಗೂ ಚಿತ್ರದ ನಟ-ನಟಿಯರು ಹಾಗೂ ನಿರ್ದೇಶಕರು ಸಾಮಾನ್ಯ ಜನರ ಇದೇ ಭಾವನೆಯನ್ನು ತಮ್ಮ ಮನಸ್ಸಿನಲ್ಲಿ ಭದ್ರವಾಗಿ ಮೈಗೂಡಿಸಿ ಕೊಂಡಿರುವುದರಿಂದ ಸಹಜವಾಗಿ ಸಿನಿಮಾಗಳಲ್ಲಿ ಈ ರೀತಿಯ ಪೊಲೀಸ್ ಇಮೇಜ್ ಬಿಂಬಿಸಲ್ಪಡುತ್ತದೆ.

ಆದರೆ ಸಾರ್ವಜನಿಕರಿಗೆ ತಿಳಿಯದೇ ಇರುವ ವಿಷಯವೆಂದರೆ, ಎಲ್ಲಾ ಪೊಲೀಸರೂ ಕೆಟ್ಟವರಲ್ಲ, ಕುಡುಕರಲ್ಲ, ವ್ಯಭಿಚಾರಿಗಳಲ್ಲ, ಲಂಚಕೋರರಲ್ಲ, ಪೊಲೀಸ್ ಇಲಾಖೆಯಲ್ಲಿರುವವರೂ ಸಮಾಜದ ಅವಿಭಾಜ್ಯ ಅಂಗವಾಗಿರುವುದರಿಂದ ಸಮಾಜದ ಎಲ್ಲ ವರ್ಗಗಳಲ್ಲಿರು ವಂತೆ ಪೊಲೀಸರಲ್ಲೂ ಕೆಟ್ಟವರೂ ಇದ್ದಾರೆ. ಒಳ್ಳೆಯವರೂ ಇದ್ದಾರೆ. ಆದರೆ ಒಳ್ಳೆಯವರ ಬಗ್ಗೆ ಚಿತ್ರಗಳಲ್ಲಿ ತೋರಿಸದಿರುವುದೇ ಒಂದು ದುರಂತ.

ಪರಿಸ್ಥಿತಿ ಸರಿಹೋಗಬೇಕಾದರೆ ಮುಖ್ಯವಾಗಿ ಜನರು ಪೊಲೀಸರನ್ನು ಹತ್ತಿರದಿಂದ ಕಾಣಬೇಕು. ಇಂಗ್ಲೆಂಡ್‌ನಲ್ಲಿ ಹೇಗೆ ಪೊಲೀಸರು ಸಾರ್ವಜನಿಕರ ಹಿತರಕ್ಷಕರು ಎನ್ನುವ ಭಾವನೆ ಇದೆಯೋ ಅದೇ ಭಾವನೆ ನಮ್ಮ ದೇಶದಲ್ಲೂ ಮೂಡಬೇಕು. ಪೊಲೀಸರು ಸಾರ್ವಜನಿಕರ ಹತ್ತಿರ ಹೋದರೆ ಅವರನ್ನು ಜನರು ಸರಿಯಾಗಿ ಅರ್ಥಮಾಡಿಕೊಂಡು ಅವರ ಸಮಸ್ಯೆಗಳಿಗೆ ಸ್ಪಂದಿಸುವುದು ಸಹಜ.

ಸಾರ್ವಜನಿಕರೊಡನೆ ನೇರವಾಗಿ ಸ್ಪಂದಿಸುವ ಕಾನ್‌ಸ್ಟೇಬಲ್‌ಗಳು ಎಸ್.ಐ., ಎ.ಎಸ್.ಐ. ಮತ್ತಿತರರು ಸರಿಯಾಗಿ ಕೆಲಸ ಮಾಡುವಂತೆ ನೋಡಿಕೊಳ್ಳಬೇಕಾದದ್ದು ಹಿರಿಯ ಅಧಿಕಾರಿಗಳ

ಕರ್ತವ್ಯ. ಕಾಲಕಾಲಕ್ಕೆ ಅವರು ರೌಂಡ್ಸ್ ಹೋಗಿ ರಸ್ತೆಯ ಮೇಲಿರುವ ಸಿಬ್ಬಂದಿ ಶಿಸ್ತಿನಿಂದ ವರ್ತಿಸುತ್ತಿದ್ದಾರೆಯೇ, ಸಮವಸ್ತ್ರ ಸರಿಯಾಗಿ ಧರಿಸಿದ್ದಾರೆಯೆ, ಸಾರ್ವಜನಿಕರೊಡನೆ ಅವರ ನಡವಳಿಕೆ ಹೇಗೆ ಎಂದು ಗಮನಿಸಬೇಕು. ತಪ್ಪಿತಸ್ಥರಿಗೆ ಸ್ಥಳದಲ್ಲೇ ಶಿಕ್ಷೆಕೊಡಬೇಕು.

ಎಲ್ಲಕ್ಕಿಂತ ಮುಖ್ಯವಾಗಿ ಪೊಲೀಸ್ ಸಾರ್ವಜನಿಕ ಬಾಂಧವ್ಯ ಉತ್ತಮವಾದಂತೆಲ್ಲ ಪೊಲೀಸರ ಬಗ್ಗೆ ದೃಶ್ಯ ಮಾಧ್ಯಮದಲ್ಲಿ ನೈಜ ಚಿತ್ರಣ ಬಂದೇ ಬರುತ್ತದೆ. ಇದಕ್ಕಾಗಿ ಪೊಲೀಸ್ ತಮ್ಮಲ್ಲಿ ಸಾಕಷ್ಟು ಬದಲಾವಣೆಯನ್ನು ಮಾಡಿಕೊಳ್ಳಬೇಕು.

# 48

## ವಿಪತ್ತು ನಿರ್ವಹಣೆ

ಮಾನವನು ಅನುಭವಿಸುವ ವಿಪತ್ತುಗಳಲ್ಲಿ ಎರಡು ಬಗೆಗಳಿವೆ. ಮೊದಲನೆಯದು ನೈಸರ್ಗಿಕ ವಿಪತ್ತು ಅಂದರೆ ಸುನಾಮಿ, ಭೂಕಂಪ, ಪ್ರವಾಹ, ಬಿರುಗಾಳಿ ಇತ್ಯಾದಿ. ಎರಡನೆಯದು ಮಾನವ ನಿರ್ಮಿತ ವಿಪತ್ತು. ಇವುಗಳಲ್ಲಿ ವಿಷಅನಿಲ ಹರಡುವುದು [ಭೂಪಾಲ್‌ನಲ್ಲಿ ಆದಂತಹ ಘಟನೆ]. ಅಣುಶಕ್ತಿ ಸ್ಫೋಟದ ದುರ್ಘಟನೆಗಳು [ಚೆರ್ನೊಬೈಲ್-ರಷ್ಯಾ], ಕಟ್ಟಡಗಳು ಹಾಗೂ ಸೇತುವೆಗಳ ಕುಸಿತ, ನಕಲಿ ಸಾರಾಯಿ ದುರಂತ, ಸರ್ಕಸ್ ಹಾಗೂ ಇತರ ಮನರಂಜನಾ ಸ್ಥಳಗಳಲ್ಲಿ ಆಗುವಂತಹ ದುರಂತ, ದೇವಸ್ಥಾನ, ಛತ್ರಗಳು ಇತ್ಯಾದಿ ಸ್ಥಳಗಳಲ್ಲಿ ಆಗುವ ನೂಕುನುಗ್ಗಲು ಇತ್ಯಾದಿ. ಬೆಂಕಿ ಅನಾಹುತಗಳು ಮಾನವ ನಿರ್ಮಿತವೂ ಆಗಬಹುದು ನೈಸರ್ಗಿಕವೂ ಆಗಬಹುದು.

ಕೆಲವು ವಿದ್ರೋಹಿ ಕೃತ್ಯಗಳನ್ನು ಮಾನವ ನಿರ್ಮಿತ ವಿಪತ್ತುಗಳ ಪಟ್ಟಿಗೆ ಸೇರಿಸಬಹುದು. ಒಂದು ದೇಶ ಮತ್ತೊಂದು ದೇಶದೊಡನೆ ಯುದ್ಧದಲ್ಲಿ ತೊಡಗಿದಾಗ ಮಾನವ ನಿರ್ಮಿತ ವಿಪತ್ತುಗಳು ಆಗಿಯೇ ತೀರುತ್ತವೆ. ಏಕೆಂದರೆ ಸ್ಫೋಟಕಗಳ ಬಳಕೆ ಯುದ್ಧಗಳಲ್ಲಿ ವ್ಯಾಪಕವಾಗಿ ಆಗುವುದರಿಂದ

ಎಲ್ಲ ರೀತಿಯ ವಿಪತ್ತುಗಳಲ್ಲೂ ಹಲವಾರು ಜನರು ಸಾವಿಗೆ ಈಡಾಗುತ್ತಾರೆ ಇಲ್ಲವೇ ಗಾಯಗೊಳ್ಳುತ್ತಾರೆ. ಹೀಗಾಗಿ ವಿಪತ್ತು ನಿರ್ವಹಣೆಯಲ್ಲಿ ಮೊಟ್ಟಮೊದಲ ಆದ್ಯತೆ ಗಾಯಗೊಂಡಿರುವವರನ್ನು ಉಪಚರಿಸುವುದು ಹಾಗೂ, ವಿಪತ್ತಿನಲ್ಲಿ ಮೃತಪಟ್ಟ ವ್ಯಕ್ತಿಗಳ

ದೇಹಗಳನ್ನು ಗುರುತಿಸುವುದೇ ಆಗಿದೆ. ಎಷ್ಟೋ ಬಾರಿ ಸಾರ್ವಜನಿಕರು ಅವಶೇಷಗಳ ಅಡಿಯಲ್ಲಿ ಸಿಕ್ಕಿಹಾಕಿಕೊಂಡಿರುತ್ತಾರೆ. ಅವರನ್ನು ಹೊರಕ್ಕೆ ತೆಗೆದು ಆಸ್ಪತ್ರೆಗಳಿಗೆ ಕಳಿಸುವುದು ಮುಂದಿನ ಕರ್ತವ್ಯ ಆಗುತ್ತದೆ. ಹೀಗೆ ವಿಪತ್ತು ನಿರ್ವಹಣೆಯಲ್ಲಿ ಮೊಟ್ಟಮೊದಲ ಆದ್ಯತೆ ಗಾಯಾಳುಗಳನ್ನು ವಿಪತ್ತು ಉಂಟಾದ ಜಾಗದಿಂದ ಹೊರತೆಗೆದು ಅವರಿಗೆ ಶೀಘ್ರವಾಗಿ ಚಿಕಿತ್ಸೆಯನ್ನು ಕೊಡಿಸುವುದು.

ಸಾಮಾನ್ಯವಾಗಿ ಯಾವುದೇ ರೀತಿಯ ವಿಪತ್ತು ಸಂಭವಿಸಿದಾಗ ಮೊಟ್ಟಮೊದಲಿಗೆ ಸುದ್ದಿ ಬರುವುದು ಪೋಲೀಸ್ ಕಂಟ್ರೋಲ್ ರೂಂಗಳಿಗೆ. ಯಾವುದಾದರೊಂದು ದುರ್ಘಟಣೆ ಸಂಭವಿಸಿದ ಸುದ್ದಿ ಬಂದ ನಂತರ ಕಂಟ್ರೋಲ್ ರೂಂ ಅಧಿಕಾರಿಗಳ ತತ್‌ಕ್ಷಣದ ಕರ್ತವ್ಯ ಈ ಸುದ್ದಿಯನ್ನು ವಿಪತ್ತು ನಿರ್ವಹಣೆಯಲ್ಲಿ ಪಾಲ್ಗೊಳ್ಳುವ ಅಧಿಕಾರಿಗಳಿಗೆ ಅತ್ಯಂತ ಶೀಘ್ರದಲ್ಲಿ ಮುಟ್ಟಿಸುವುದು. ವಿಪತ್ತು ನಡೆದ ಸುದ್ದಿಯನ್ನು ತಿಳಿದ ಪೋಲೀಸ್ ಅಧಿಕಾರಿಗಳು ವಿಪತ್ತು ನಡೆದ ಸ್ಥಳಕ್ಕೆ ವೈದ್ಯರು. ನರ್ಸ್‌ಗಳು ಹಾಗೂ ಅಗ್ನಿ ಶಾಮಕ ದಳದ ತಂಡಗಳ ಜೊತೆ ಧಾವಿಸಬೇಕು. ಬೇರೆ ಬೇರೆ ರೀತಿಯ ಅನಾಹುತಗಳಿಂದ ಬೇರೆ ಬೇರೆ ರೀತಿಯ ಸಮಸ್ಯೆಗಳು ಉಂಟಾಗಿ ಅಂತಹ ಸಮಸ್ಯೆಗಳನ್ನು ಮೊದಲು ನಿರ್ವಹಿಸಬೇಕಾಗುತ್ತದೆ. ಅಂದರೆ ಬೆಂಕಿ ಅನಾಹುತದಲ್ಲಿ ಬೆಂಕಿಯನ್ನು ಹರಡದಂತೆ ನೋಡಿಕೊಳ್ಳುವುದು. ಭೂಕಂಪದಲ್ಲಿ ಎರಡನೇ ಬಾರಿ ಆಗುವಂತಹ ಸಣ್ಣ ಭೂಕಂಪದ ಬಗ್ಗೆ ಹುಷಾರಾಗಿರುವುದು. ಕಟ್ಟಡಗಳು ಕುಸಿದಾಗ ಅಕ್ಕಪಕ್ಕದ ಕಟ್ಟಡಗಳೂ ಕುಸಿಯದಂತೆ ನೋಡಿಕೊಳ್ಳುವುದು. ಸ್ಫೋಟಕಗಳ ಅನಾಹುತದಲ್ಲಿ ಸಿಡಿಯದೇ ಇರುವ ಬಾಂಬ್‌ಗಳ ಬಗ್ಗೆ ಗಮನಹರಿಸುವುದು ಇತ್ಯಾದಿ. ಹೀಗೆ ಸ್ಥಳಕ್ಕೆ ಹೋದ ತಕ್ಷಣ ಯಾವ ರೀತಿಯಲ್ಲಿ ಪರಿಸ್ಥಿತಿಯನ್ನು ನಿಭಾಯಿಸಬೇಕು ಎನ್ನುವುದರ ಬಗ್ಗೆ ಆ ಸ್ಥಳದಲ್ಲಿ ಇರುವ ಹಿರಿಯ ಅಧಿಕಾರಿ ಯೋಜನೆ ಹಾಕಬೇಕು. ಉದಾಹರಣೆಗೆ ರೈಲು ಹಳಿ ತಪ್ಪಿ ದುರಂತಕ್ಕೀಡಾದರೆ ಅಥವಾ ರೈಲಿನ ಡಬ್ಬಿಯೊಂದು ಸೇತುವೆ ಮೇಲಿಂದ ಉರುಳಿ ಬಿದ್ದಿದ್ದರೆ ರೈಲಿನ ಡಬ್ಬಿಯಲ್ಲಿ ಸಿಲುಕಿರುವ ವ್ಯಕ್ತಿಗಳನ್ನು ಯಾವ ರೀತಿ ಹೊರತೆಗೆಯಬೇಕು ಎನ್ನುವ ಯೋಜನೆ ಹಾಕಿಕೊಂಡು ಆ ಯೋಜನೆಯ ಅನ್ವಯವೇ ಕಾರ್ಯನಿರ್ವಹಿಸಬೇಕು. ಕೆಳಗೆ ಬಿದ್ದಿರುವ ರೈಲಿನ ಡಬ್ಬಿಯನ್ನು ಮೇಲಕ್ಕೆ ಎತ್ತಬೇಕಾದರೆ ಕ್ರೇನ್‌ಗಳು ಮತ್ತಿತರ ಬೇರೆ ಮಷಿನರಿಗಳು ಬೇಕಾಗುತ್ತವೆ. ಈ ರೀತಿ ಮಷೀನ್‌ಗಳು ಯಾರ ಬಳಿ ಇರುತ್ತದೆ ಎನ್ನುವುದು ಸ್ಥಳಕ್ಕೆ ಹೋದ ಅಧಿಕಾರಿಗಳಿಗೆ ತಿಳಿದಿರಬೇಕು. ರೈಲಿನ ಡಬ್ಬಿಯೊಳಗೆ ಸಿಲುಕಿರುವವರನ್ನು ಹೊರಗಡೆ ತೆಗೆಯಲು ಡಬ್ಬಿಯನ್ನು ಕೊರೆದು ರಂಧ್ರ ಮಾಡುವ ಕಟ್ಟರ್‌ಗಳು ಬೇಕು ಎಂಬ ಅರಿವಿರಬೇಕು.

ವಿಪತ್ತು ಉಂಟಾಗಿರುವ ಸ್ಥಳಕ್ಕೆ ಅಧಿಕಾರಿಗಳು ಹೋದಾಗ ಪ್ರಕರಣದ ಭೀಕರತೆ ಅವರಿಗೆ ತಿಳಿದಿರುವುದಿಲ್ಲ. ಎಷ್ಟು ಜನ ಸಾವನ್ನಪ್ಪಿದ್ದಾರೆ. ಎಷ್ಟು ಜನರಿಗೆ ಗಾಯಗಳಾಗಿವೆ ಇದು ಯಾವ ವಿಷಯವೂ ಗೊತ್ತಿರುವುದಿಲ್ಲ. ಸ್ಥಳಕೆ ಹೋಗಿ ಪರಿಹಾರ ಕಾರ್ಯವನ್ನು ಆರಂಭಿಸಿದ ಆನಂತರವೇ ವಿಪತ್ತಿನ ಪರಿಣಾಮ ತಿಳಿಯುವುದು. ಹೀಗಾಗಿ ಸ್ಥಳಕ್ಕೆ ಹೋಗಿ

ಉಂಟಾಗಿರುವ ವಿಪತ್ತಿನ ಪರಿಣಾಮವನ್ನು ಗಮನಿಸಿದ ಕೂಡಲೇ ಅಲ್ಲಿರುವ ಅಧಿಕಾರಿಗಳು ಎಷ್ಟು ಆಸ್ಪತ್ರೆಗಳನ್ನು ಸಂಪರ್ಕಿಸಬೇಕು, ಎಷ್ಟು ಆಂಬ್ಯುಲೆನ್ಸ್‌ಗಳು ಬೇಕು ಇತ್ಯಾದಿ ವಿಷಯಗಳನ್ನು ಲೆಕ್ಕಹಾಕಿ ಸಂಬಂಧಪಟ್ಟವರಿಗೆ ವಿಷಯ ತಿಳಿಸಿ ಗಾಯಾಳುಗಳನ್ನು ಸ್ವೀಕರಿಸಲು ತಯಾರಾಗಿರಲು ಸೂಚಿಸಬೇಕು.

ನವೆಂಬರ್ 26, 2008ರಂದು ಮುಂಬೈ ಮೇಲೆ ಆದ ಆತಂಕವಾದಿಗಳ ದಾಳಿಯನ್ನು ನಾವು ಟಿವಿಗಳಲ್ಲಿ ನೋಡಿದ್ದೇವೆ. ವಿಪತ್ತು ನಿರ್ವಹಣೆ ಹೇಗೆ ಆಗುತ್ತದೆ ಎನ್ನುವ ಬಗ್ಗೆ ಈ ದಾಳಿಯ ನಿರ್ವಹಣೆ ಅತ್ಯುತ್ತಮ ಉದಾಹರಣೆ. ಉಗ್ರಗಾಮಿಗಳು ತಾಜ್ ಹೋಟೆಲ್‌ಗೆ ಹೋಗಿ ಅಲ್ಲಿ ಯದ್ವಾತದ್ವಾ ಗುಂಡು ಹಾರಿಸಲು ಪ್ರಾರಂಭಿಸಿದಾಗ ಹೋಟೆಲ್‌ನಲ್ಲಿ ಇದ್ದ ಹಲವಾರು ವ್ಯಕ್ತಿಗಳು ಮೊದಲಿಗೆ ಹೋಟೆಲ್‌ನಿಂದ ಹೊರಹೋಗಲು ಪ್ರಾರಂಭಿಸಿ ಪಾರಾದರು. ಆದರೆ ಇನ್ನು ಕೆಲವರು ಹೋಟೆಲ್‌ನಲ್ಲಿ ಸಿಕ್ಕಿಕೊಂಡರೆ. ಕೆಲವರು 2ನೇ ಮಹಡಿಯಲ್ಲಿ ಇದ್ದರು. ಕೆಲವರು 5ನೇ ಮಹಡಿಯಲ್ಲಿ ಇದ್ದರು. ಉಗ್ರಗಾಮಿಗಳು ಹೋಟೆಲ್‌ನಲ್ಲಿ ಗ್ರೇನೇಡ್ ಧಾಳಿ ನಡೆಸಿದ್ದರಿಂದಲೂ ಹಾಗೂ ಬೆಂಕಿ ಹತ್ತಿಸಿದ್ದರಿಂದಲೂ ಹೋಟೆಲ್‌ಗೆ ಬೆಂಕಿ ಬಿದ್ದಿತು. ಈ ಸಂದರ್ಭದಲ್ಲಿ ಸ್ಥಳಕ್ಕೆ ಹೋದ ಅಧಿಕಾರಿ ಮಾಡಬೇಕಾದ ಮೊದಲ ಕೆಲಸ, ಬೆಂಕಿಯನ್ನು ನಂದಿಸುವುದು. ಬೆಂಕಿ ನಂದಿಸಿದ ನಂತರ, ಎತ್ತರದ ಏಣಿಗಳನ್ನು ಏರಿ ಹೋಟೆಲ್‌ನ ವಿವಿಧ ಮಹಡಿಗಳಿಗೆ ಹೋಗಿ ತೊಂದರೆಗೆ ಸಿಲುಕಿದ ವ್ಯಕ್ತಿಗಳನ್ನು ಹೊರಗೆ ತೆಗೆಯುವುದು. ಹೊರಗೆ ತಂದಿದ್ದ ವ್ಯಕ್ತಿಗಳನ್ನು ಕೂಡಲೇ ಆಂಬ್ಯುಲೆನ್ಸ್‌ಗಳ ಮೂಲಕ ಆಸ್ಪತ್ರೆಗಳಿಗೆ ಸಾಗಿಸುವುದು ಮುಂದಿನ ಕರ್ತವ್ಯ.

ಎಷ್ಟೋ ಬಾರಿ ಅನಾಹುತದಲ್ಲಿ ಎಷ್ಟು ಜನರಿಗೆ ಸಾವುನೋವುಗಳಾಗಿವೆ ಎನ್ನುವ ಅಂದಾಜು ಇರುವುದಿಲ್ಲ. ಸ್ಥಳಕ್ಕೆ ಹೋದ ಅಧಿಕಾರಿಗಳು ಗಾಯಗೊಂಡಿರುವವರನ್ನು ಆಸ್ಪತ್ರೆಗೆ ಕಳುಹಿಸಬೇಕಾಗುತ್ತದೆ. ಎಷ್ಟೋ ಬಾರಿ ಆಸ್ಪತ್ರೆಗಳಲ್ಲಿ ಗಾಯಾಳುಗಳಿಗೆ ಶುಶ್ರೂಷೆ ನೀಡಲು ಸರಿಯಾದ ಸವಲತ್ತುಗಳು ಇರುವುದಿಲ್ಲ. ನಾನು ಗುಲ್ಬರ್ಗಾದಲ್ಲಿ ಕೆಲಸ ಮಾಡುತ್ತಿದ್ದಾಗ, ಬೀದರ್ ಜಿಲ್ಲೆಯ ಬಸವಕಲ್ಯಾಣ ತಾಲ್ಲೂಕಿನಲ್ಲಿ ಒಂದು ಪೆಟ್ರೋಲ್ ಟ್ಯಾಂಕರ್ ಸಿಡಿದು ಸುಮಾರು 75 ಜನ ಬೆಂಕಿ ಗಾಯಗಳಿಗೆ ತುತ್ತಾದರು. ಈ ಗಾಯಾಳುಗಳನ್ನು ಬೀದರ್ ಜಿಲ್ಲಾ ಪೋಲೀಸರು ಏಕಾಏಕಿ ಗುಲ್ಬರ್ಗಾದ ಸಾರ್ವಜನಿಕ ಆಸ್ಪತ್ರೆಗೆ ಕರೆದೊಯ್ದರು. ಇಷ್ಟು ದೊಡ್ಡ ಸಂಖ್ಯೆಯ ಗಾಯಾಳುಗಳನ್ನು ಆಸ್ಪತ್ರೆಗೆ ದಾಖಲಿಸಲು ಆ ಆಸ್ಪತ್ರೆಯಲ್ಲಿ ಸ್ಥಳಾವಕಾಶವಿರಲಿಲ್ಲ. ಎಷ್ಟೋ ಜನ ಗಾಯಾಳುಗಳಿಗೆ ನೆಲದ ಮೇಲೆ ಹಾಸಿಗೆ ಹಾಸಿ ಶುಶ್ರೂಷೆ ನೀಡಬೇಕಾಯಿತು. ಸುಟ್ಟ ಗಾಯಗಳಿಗೆ ಬೇಕಾದಂತಹ ಔಷಧಿಗಳೂ ಸಾಕಷ್ಟು ಪ್ರಮಾಣದಲ್ಲಿ ಆಸ್ಪತ್ರೆಯಲ್ಲಿ ಲಭ್ಯವಿರಲಿಲ್ಲ. ಗಾಯಾಳುಗಳನ್ನು ನೋಡಲು ಅವರ ಸಂಬಂಧಿಕರಲ್ಲದೇ ಹಾದಿಹೋಕರು ಆಸ್ಪತ್ರೆಗೆ ಗುಂಪಾಗಿ ನುಗ್ಗಿದರು. ಹೀಗಾಗಿ ಆಸ್ಪತ್ರೆಯಲ್ಲಿ ಇದ್ದ ವೈದ್ಯರಿಗೆ ಗಾಯಾಳುಗಳಿಗೆ ಸರಿಯಾದ ಚಿಕಿತ್ಸೆ ನೀಡಲು ಸಾಧ್ಯವಾಗಲಿಲ್ಲ. ಆದ್ದರಿಂದ ವಿಪತ್ತು ನಿರ್ವಹಣೆಯಲ್ಲಿ ಕಲಿಯಬೇಕಾದ ಮೊದಲ ಪಾಠವೆಂದರೆ ಗಾಯಾಳುಗಳನ್ನು ಯಾವ ಆಸ್ಪತ್ರೆಗೆ

ಕಳುಹಿಸಬೇಕು ಅಲ್ಲಿ ಅವರಿಗೆ ಶುಶ್ರೂಷೆ ನೀಡಲು ಸ್ಥಳಾವಕಾಶ ಇದೆಯೇ, ಔಷಧಿಗಳು ಇವೆಯೇ ಇತ್ಯಾದಿ ವಿವರಗಳನ್ನು ತಿಳಿದಿರಬೇಕು. ಇಲ್ಲದೇ ಹೋದಲ್ಲಿ ಒಂದು ಆಸ್ಪತ್ರೆಯಿಂದ ಇನ್ನೊಂದು ಆಸ್ಪತ್ರೆಗೆ ಗಾಯಾಳುಗಳನ್ನು ಸಾಗಿಸುವ ಚಟುವಟಿಕೆಗಳಲ್ಲಿ ವಿಳಂಬವಾಗಿ ಗಾಯಾಳುಗಳು ಮೃತರಾಗುವ ಸಂದರ್ಭಗಳು ಉಂಟಾಗುತ್ತವೆ.

ವಿಪತ್ತಿನ ಪ್ರಭಾವದಿಂದ ಸ್ಥಾನಪಲ್ಲಟಗೊಂಡ, ಅಂದರೆ ಮನೆ, ಮಠಗಳನ್ನು ಕಳೆದುಕೊಂಡ ಸಾರ್ವಜನಿಕರು ಹಾಗೂ ಜಾನುವಾರುಗಳನ್ನು ಸುರಕ್ಷಿತ ಸ್ಥಾನಗಳಿಗೆ ಸ್ಥಳಾಂತರಿಸಬೇಕಾದದ್ದು ತುಂಬಾ ಮುಖ್ಯ. ಪ್ರವಾಹ-ಭೂಕಂಪ ಇತ್ಯಾದಿಗಳಿಂದ ಮನೆ ಕಳೆದುಕೊಂಡ ವ್ಯಕ್ತಿಗಳಿಗೆ ಪರ್ಯಾಯ ವ್ಯವಸ್ಥೆಯನ್ನು ಮೊದಲಿಗೆ ಮಾಡಬೇಕು. ಅವರಿಗೆ ಊಟ-ಉಪಚಾರದ ವ್ಯವಸ್ಥೆ ಮಾಡಬೇಕು, ಜಾನುವಾರುಗಳಿಗೆ ಮೇವು ಹಾಗೂ ಕುಡಿಯುವ ನೀರಿನ ವ್ಯವಸ್ಥೆ ಮಾಡಬೇಕು. ಅಂದರೆ ನಿರಾಶ್ರಿತರ ಶಿಬಿರಗಳನ್ನು ತೆರೆಯಬೇಕು ಹಾಗೂ ಈ ಶಿಬಿರಗಳು ಸುಸಜ್ಜಿತವಾಗಿರಬೇಕು. ಊಟ-ನೀರು ಹಾಗೂ ವೈದ್ಯಕೀಯ ವ್ಯವಸ್ಥೆ ಇಲ್ಲಿರಬೇಕು.

ಯಾವುದೇ ಒಂದು ವಿಪತ್ತು ಉಂಟಾದ ಕೂಡಲೇ ಮಾಧ್ಯಮಗಳು ಅತಿಶೀಘ್ರದಲ್ಲಿ ಘಟನೆಯ ವರದಿಗಳನ್ನು ಬಿತ್ತರಿಸುತ್ತವೆ. ಇದರಿಂದಾಗಿ ಸಾವುನೋವುಗಳು ಯಾರಿಗೆ ಉಂಟಾಗಿದೆ, ಅಂತಹವರ ಪರಿಸ್ಥಿತಿ ಏನು ಎಂದು ತಿಳಿದುಕೊಳ್ಳಲು ಅಂತಹ ವ್ಯಕ್ತಿಗಳ ಕುಟುಂಬವರ್ಗದವರು ಹಾತೊರೆಯುತ್ತಾರೆ. ಸರಿಯಾದ ಮಾಹಿತಿ ಇಲ್ಲದೆ ಅವರು ಆತಂಕಕ್ಕೆ ಒಳಗಾಗುತ್ತಾರೆ. ಈ ಕಾರಣಕ್ಕಾಗಿ ಮಾಧ್ಯಮ ನಿರ್ವಹಣೆ ಅತ್ಯಂತ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆಯುತ್ತದೆ. ಮಾಧ್ಯಮಗಳಲ್ಲಿ ಬಿತ್ತರವಾಗುವ ಸುದ್ದಿ ನಿಖರವಾಗಿ ಹಾಗೂ ಕರಾರುವಾಕ್ಕಾಗಿರುವಂತೆ ನೋಡಿಕೊಳ್ಳಬೇಕು. ಗಾಯಾಳುಗಳು ಹಾಗೂ ಸತ್ತ ವ್ಯಕ್ತಿಗಳ ಹೆಸರು, ವಿಳಾಸಗಳನ್ನು ಮಾಧ್ಯಮಗಳಲ್ಲಿ ಹಾಕಿಸಬೇಕು. ಇಂತಹ ಮಾಹಿತಿಯನ್ನು ತಿಳಿಸಲೆಂದೇ ವಿಶೇಷ ಕಂಟ್ರೋಲ್ ರೂಂಗಳನ್ನು ತೆರೆದು, ಇಂತಹ ಕಂಟ್ರೋಲ್ ರೂಂಗಳ ದೂರವಾಣಿ ಸಂಖ್ಯೆಗಳನ್ನು ಸಾರ್ವಜನಿಕರಿಗೆ ನೀಡಬೇಕು. ಇದರಿಂದ ಸತ್ತವರ ಹಾಗೂ ಗಾಯಾಳುಗಳ ಸಂಬಂಧಿಕರು ತಮ್ಮ ಆಪ್ತೇಷ್ಟರು ದುರಂತಕ್ಕೆ ಈಡಾಗಿದ್ದಾರೆ ಎನ್ನುವ ಬಗ್ಗೆ ಸರಿಯಾದ ಮಾಹಿತಿಯನ್ನು ಪಡೆಯಬಹುದು. ಮೃತ ಹಾಗೂ ಗಾಯಗೊಂಡ ವ್ಯಕ್ತಿಗಳ ಸಂಬಂಧಿಕರು ಸ್ಥಳಕ್ಕೆ ಧಾವಿಸಿದಾಗ ಅವರುಗಳು ತಮ್ಮ ಸಂಬಂಧಿಕರನ್ನು ಕಾಣಲು ಹಾಗೂ ಅವರಿಗೆ ನೆರವು ನೀಡಲು ವ್ಯವಸ್ಥೆಯನ್ನು ಕಲ್ಪಿಸಬೇಕು. ಯಾರೂ ಗುರುತು ಹಿಡಿಯದಂತಹ ಶವಗಳ ಬಗ್ಗೆ ಹೆಚ್ಚಿನ ನಿಗಾ ವಹಿಸಿ ಅಂತಹವರ ಬಳಿ ದೊರೆಯುವಂತಹ ಗುರುತಿನ ವಸ್ತುಗಳನ್ನು, ವಾಚ್, ಪರ್ಸ್ ಇತ್ಯಾದಿಗಳನ್ನು ಜೋಪಾನವಾಗಿ ಇಡಬೇಕು. ವಿಪತ್ತಿನ ಸಂದರ್ಭದಲ್ಲಿ ಗಾಳಿ ಸುದ್ದಿಗಳು ಹರಡದಂತೆ ಹೆಚ್ಚಿನ ಎಚ್ಚರ ವಹಿಸಬೇಕು.

ಎಷ್ಟೋ ಬಾರಿ ಇಂತಹ ಘಟನೆಗಳು ಸಂಭವಿಸಿದಾಗ ಸಮಾಜ ಘಾತುಕ ವ್ಯಕ್ತಿಗಳು ಸಂಬಂಧಿಕರೆಂದು ಸ್ಥಳಕ್ಕೆ ಬಂದು ಸತ್ತವರ ಹಾಗೂ ಗಾಯಗೊಂಡವರ ವಸ್ತುಗಳನ್ನು

ದೋಚುತ್ತಾರೆ. ಈ ಹಿಂದೆ ಒಂದು ರೈಲು ದುರಂತ ಸಂಭವಿಸಿದಾಗ ಕೆಲವು ವ್ಯಕ್ತಿಗಳು ದುರಂತಕ್ಕೆ ಈಡಾದವರ ಸಹಾಯ ಮಾಡುವಂತೆ ನಟಿಸಿ ಅವರ ಮೈಮೇಲೆ ಇದ್ದ ಆಭರಣಗಳು. ಅವರ ಹಣ ಇತ್ಯಾದಿಗಳನ್ನು ದೋಚಿದ್ದಾರೆ. ಹೀಗಾಗಿ ಅನಾಹುತ ನಡೆದ ಸ್ಥಳದಲ್ಲಿ ಇರುವ ಅಧಿಕಾರಿಯು ವಿಪತ್ತು ನಿರ್ವಹಣೆಯಲ್ಲಿ ಸಹಾಯ ನೀಡಲು ಅಧಿಕೃತ ವ್ಯಕ್ತಿಗಳ ಮೊರೆಯನ್ನೇ ಹೋಗಬೇಕು. ಅಂದರೆ ಸರ್ಕಾರಿ ನೌಕರರು. ಸೈನ್ಯ ಹಾಗೂ ಅರೆ ಸೈನ್ಯ ದಳದವರು. ಎನ್‌ಸಿಸಿ ಇಂತಹವರ ಸಹಾಯ ತೆಗೆದುಕೊಳ್ಳುವುದು ಸೂಕ್ತ ಹಾಗೂ ಕಳ್ಳತನವಾಗದಂತೆ ಹೆಚ್ಚುವರಿ ಪೊಲೀಸ್ ಪಡೆಗಳನ್ನು ನೇಮಿಸಬೇಕು. ಗಾಯಗೊಂಡ ಹಾಗೂ ಸತ್ತ ವ್ಯಕ್ತಿಗಳಿಗೆ ಸೇರಿದ ವಸ್ತುಗಳಿಗೆ ಲೇಬಲ್ ಮಾಡಿ ಸುರಕ್ಷಿತ ಸ್ಥಳದಲ್ಲಿ ಇಡಬೇಕು.

ಸಾಮಾನ್ಯವಾಗಿ ಯಾವುದಾದರೊಂದು ದುರಂತ ನಡೆದಾಗ ಸರ್ಕಾರವು ಗಾಯಗೊಂಡವರ ಹಾಗೂ ಸತ್ತವರ ಕುಟುಂಬಗಳಿಗೆ ಪರಿಹಾರವನ್ನು ಘೋಷಿಸುತ್ತದೆ. ಈ ಪರಿಹಾರವನ್ನು ವಾರಸುದಾರರಿಗೆ ನೀಡುವಾಗ ಹೆಚ್ಚಿನ ಎಚ್ಚರ ವಹಿಸುವ ಅಗತ್ಯತೆ ಇದೆ. ಅಪ್ರಾಪ್ತರಿಗೆ ಪರಿಹಾರ ಧನ ಹೋಗದಂತೆ ನೋಡಿಕೊಳ್ಳುವುದು ಅಧಿಕಾರಿಗಳ ಕರ್ತವ್ಯ. ಇದೇ ಸಂದರ್ಭದಲ್ಲಿ ಪ್ರಾಪ್ತರಾದ ವ್ಯಕ್ತಿಗಳಿಗೆ ಪರಿಹಾರ ಹಣ ಮುಟ್ಟಿಸುವುದರಲ್ಲಿಯೂ ಸಹ ವಿಳಂಬವಿರಬಾರದು.

ಇತ್ತೀಚೆಗೆ ನಮ್ಮ ದೇಶಕ್ಕೆ ಬಂದೊದಗಿದ ಸುನಾಮಿ ವಿಪತ್ತಿನ ನಿರ್ವಹಣೆಯಲ್ಲಿ ನಾವೆಲ್ಲರೂ ಒಂದು ಪಾಠ ಕಲಿತಿದ್ದೇವೆ. ಮಾಧ್ಯಮಗಳಲ್ಲಿ ವಿಪತ್ತು ಉಂಟಾದ ದೃಶ್ಯಗಳನ್ನು ನೋಡಿದ ಕೂಡಲೇ ಹಲವಾರು ಸ್ವಯಂಸೇವಕರು ಹಾಗೂ ಸೇವಾಸಂಸ್ಥೆಗಳು ವಿಪತ್ತು ಉಂಟಾದ ಜಾಗಕ್ಕೆ ಪರಿಹಾರ ಸಾಮಗ್ರಿಗಳನ್ನು ಕೊಡಲು ಮುಂದಾಗಿದ್ದರು. ಸರ್ವೇ ಸಾಮಾನ್ಯವಾಗಿ ಯಾವುದಾದರೂ ಆಪತ್ತು ಉಂಟಾದಾಗ ಕೂಡಲೇ ಟೆಂಟುಗಳು. ಕಂಬಳಿಗಳು. ಹಾಸಿಗೆಗಳು. ಬಟ್ಟೆಗಳು. ಔಷಧಿಗಳು. ಖಾದ್ಯ ಪದಾರ್ಥಗಳು ಇತ್ಯಾದಿ ಹೆಚ್ಚಿನ ಪ್ರಮಾಣದಲ್ಲಿ ರಾಷ್ಟ್ರದ ಬೇರೆ ಬೇರೆ ಜಾಗಗಳಿಂದ ಹಾಗೂ ವಿದೇಶಗಳಿಂದಲೂ ವಿಕೋಪ ನಡೆದ ಜಾಗಗಳಿಗೆ ಬಂದು ಬಿಡುತ್ತವೆ. ಈ ಪರಿಹಾರ ಸಾಮಗ್ರಿಗಳು ಭಾರಿ ಪ್ರಮಾಣದಲ್ಲಿ ಬಂದಾಗ ಅವುಗಳ ವಿತರಣೆ ಕಷ್ಟವಾಗುತ್ತದೆ. ಎಷ್ಟೋ ಬಾರಿ ಪರಿಹಾರಕ್ಕಾಗಿ ಒದಗಿಸಿದ ವಸ್ತುಗಳ ದುರ್ಬಳಕೆಯೂ ಆಗುತ್ತದೆ. ಇದು ಆಗದಂತೆ ಎಚ್ಚರ ವಹಿಸಬೇಕು. ಉದಾಹರಣೆಗೆ ಅಂಡಮಾನ್ ದ್ವೀಪಕ್ಕೆ ಸುನಾಮಿ ಅಪ್ಪಳಿಸಿದಾಗ ಆ ಜಾಗಕ್ಕೆ ಬೇಕಾದದ್ದು. ಟಾರ್ಚ್‌ಗಳು ಹಾಗೂ ಇತರ ಖಾದ್ಯ ವಸ್ತುಗಳು. ಆದರೆ ಪರಿಹಾರ ಸಾಮಗ್ರಿಗಳಲ್ಲಿ ಇವನ್ನು ಬಿಟ್ಟು ಬೇರೆ ಇತರ ವಸ್ತುಗಳು ಬಂದಿದ್ದವು. ಕೆಲವು ವ್ಯಕ್ತಿಗಳು ಹಾಗೂ ಸಂಸ್ಥೆಗಳು ಸೆಕೆಂಡ್‌ಹ್ಯಾಂಡ್ ಬಟ್ಟೆಗಳು. ಕಂಬಳಿಗಳು ಹಾಗೂ ಬೆಡ್‌ಶೀಟ್‌ಗಳನ್ನು ಕಳುಹಿಸಿದ್ದು ಗಮನಕ್ಕೆ ಬಂದಿತು. ವಿಪತ್ತಿಗೆ ತುತ್ತಾದವರ ನೆರವಿಗೆ ಬರುವವರು ಈ ರೀತಿ ಸೆಕೆಂಡ್‌ಹ್ಯಾಂಡ್ ವಸ್ತುಗಳನ್ನು ಕಳುಹಿಸುವುದು ವಿಪತ್ತಿಗೆ ಎರಗಿರುವವರ ಅವಮಾನ ಮಾಡಿದಂತೆ ಎನ್ನುವುದನ್ನು ನಾವೆಲ್ಲರೂ ತಿಳಿಯಬೇಕಾಗಿದೆ.

ವಿಪತ್ತುಗಳ ಸರಿಯಾದ ನಿರ್ವಹಣೆಗೆ ನಮ್ಮ ರಾಷ್ಟ್ರದಲ್ಲಿ ರಾಷ್ಟ್ರೀಯ ವಿಪತ್ತು ನಿರ್ವಹಣಾ ಪ್ರಾಧಿಕಾರವನ್ನು ರಚಿಸಲಾಗಿದೆ. ಈ ಪ್ರಾಧಿಕಾರಕ್ಕೆ ನಮ್ಮ ದೇಶದ ಪ್ರಧಾನ ಮಂತ್ರಿಗಳೇ ಅಧ್ಯಕ್ಷರಾಗಿದ್ದು. ನಿವೃತ್ತ ಸೈನ್ಯಾಧಿಕಾರಿ ಜನರಲ್.ಎನ್.ಸಿ.ವಿಜ್ ಇವರು ಉಪಾಧ್ಯಕ್ಷರಾಗಿದ್ದಾರೆ. ಈ ಪ್ರಾಧಿಕಾರದ ರಚನೆಯಿಂದಾಗಿ ಸರ್ಕಾರದ ವಿವಿದ ಅಂಗಗಳು ವಿಪತ್ತು ನಿರ್ವಹಣೆಯಲ್ಲಿ ಸಕಾರಾತ್ಮಕ ಭೂಮಿಕೆಯನ್ನು ನಿಭಾಯಿಸಬಹುದಾಗಿದೆ. ಕರ್ನಾಟಕ ರಾಜ್ಯದಲ್ಲಿಯೂ ಒಂಬತ್ತು ಸದಸ್ಯರಿರುವ ರಾಜ್ಯ ವಿಪತ್ತು ನಿರ್ವಹಣಾ ಪ್ರಾಧಿಕಾರ ಈಗಾಗಲೇ ರಚಿತವಾಗಿದೆ. ವಿಪತ್ತು ನಿರ್ವಹಣೆ ರಾಜ್ಯದ ಕಂದಾಯ ಇಲಾಖೆಯ ಅಧೀನದಲ್ಲಿ ಬರುವ ವಿಷಯವಾಗಿದೆ.

ವಿಪತ್ತುಗಳ ನಿರ್ವಹಣೆಯಲ್ಲಿ ಸರ್ಕಾರದ ವಿವಿಧ ಇಲಾಖೆಗಳು ಹಾಗೂ ಸರ್ಕಾರೇತರ ಸಂಘ ಸಂಸ್ಥೆಗಳು ಒಟ್ಟಾರೆಯಾಗಿ ಕೆಲಸ ಮಾಡುತ್ತದೆ. ಈ ಎಲ್ಲಾ ಸಂಘಟನೆಗಳ ಮಧ್ಯೆ ಸಮನ್ವಯ [co-ordination] ಏರ್ಪಡಿಸಿ ಕೆಲಸ ಮಾಡಿಸುವುದೇ ವಿಪತ್ತು ನಿರ್ವಹಣೆಯ ಬಹು ಮುಖ್ಯ ಸವಾಲು.

# 49

## ಖಾಕಿ ನೋಟ
## ತೀವ್ರವಾಗುತ್ತಿರುವ ನಕ್ಸಲ್ ಸಮಸ್ಯೆ

ಕಳೆದ ಕೆಲವೇ ದಿನಗಳಲ್ಲಿ ರಾಷ್ಟ್ರದಲ್ಲಿ ನಕ್ಸಲೀಯರಿಗೆ ಸಂಬಂಧಪಟ್ಟ ಮೂರು ಮುಖ್ಯ ಘಟನೆಗಳು ನಡೆದಿವೆ. ಛತ್ತೀಸ್‌ಗಢ ರಾಜ್ಯದ ರಾಜನಂದಗಾಂವ್ ಜಿಲ್ಲೆಯ ಎಸ್‌ಪಿ ವಿ.ಕೆ.ಚೌಬೆ ಸೇರಿದಂತೆ 35 ಪೋಲೀಸ್ ಸಿಬ್ಬಂದಿಯನ್ನು ನಕ್ಸಲೀಯರು ಆ ಜಿಲ್ಲೆಯ ಅರಣ್ಯದಲ್ಲಿ ಜುಲೈ 12ರಂದು ಅಂಬುಷ್ ಮಾಡಿ ಕೊಂದಿದ್ದಾರೆ. ಜುಲೈ 15. 2009 ರಂದು ಜಾರ್ಖಂಡ್ ರಾಜ್ಯದ ರಾಂಚಿ ಪೋಲೀಸರು ಅಲ್ಲಿಯ ನಕ್ಸಲರಿಗೆಂದು ಸಾಗಿಸಲಾಗುತ್ತಿದ್ದ ಭಾರಿ ಪ್ರಮಾಣದ ವೈರ್‌ಲೆಸ್ ಸೆಟ್‌ಗಳು. ಬುಲೆಟ್‌ಪ್ರೂಫ್ ಜಾಕೆಟ್‌ಗಳು. ಸಾಟಲೈಟ್ ಫೋನ್‌ಗಳು ಮತ್ತಿತರ ಉಪಕರಣಗಳನ್ನು ಜಪ್ತು ಮಾಡಿದ್ದಾರೆ. ಜುಲೈ17ರಂದು ಒರಿಸ್ಸಾದ ರೌರ್‌ಕೆಲಾ ಜಿಲ್ಲೆಯಲ್ಲಿ ನಕ್ಸಲೀಯರು ಒಬ್ಬ ಪೋಲೀಸ್ ಸಬ್‌ಇನ್ಸ್‌ಪೆಕ್ಟರನ್ನು ಅಪಹರಿಸಿ ಕೊಲೆ ಮಾಡಿದ್ದಾರೆ. ಸ್ಫೋಟಕಗಳನ್ನು ಸಾಗಿಸುತ್ತಿದ್ದ ವಾಹನವೊಂದಕ್ಕೆ ಪೋಲೀಸರು ಬೆಂಗಾವಲು ಮಾಡುತ್ತಿದ್ದಾಗ ಈ ಘಟನೆ ನಡೆದಿದೆ. ವಾಹನದಲ್ಲಿ ಇದ್ದ ಅಷ್ಟೂ ಸ್ಫೋಟಕಗಳನ್ನು ನಕ್ಸಲೀಯರು ಲೂಟಿ ಮಾಡಿದ್ದಾರೆ.

ರಾಜನಂದಗಾಂವ್ ಘಟನೆಯ ವಿವರಗಳನ್ನು ನೋಡಿದಾಗ ನಕ್ಸಲೀಯರು ಎಷ್ಟು ನಿಖರವಾಗಿ ತಮ್ಮ ಕಾರ್ಯಾಚರಣೆಯನ್ನು ಯೋಜಿಸಿದ್ದರು ಎಂದು ತಿಳಿಯುತ್ತದೆ. ಮದನವಾಡ ಎಂಬ ಹಳ್ಳಿಯೊಂದರಲ್ಲಿ ನಕ್ಸಲ್ ಚಟುವಟಿಕೆ ಹೆಚ್ಚಾಗಿದೆ ಎಂಬ ಸುದ್ದಿಯ ಮೇರೆಗೆ ಅಲ್ಲಿ ಒಂದು ಪೋಲೀಸ್ ಚೌಕಿಯನ್ನು ತೆಗೆದು ಸಾಕಷ್ಟು ಸಂಖ್ಯೆಯಲ್ಲಿ ಪೋಲೀಸರನ್ನು

ನೇಮಿಸಲಾಗಿತ್ತು. ದಿನಾಂಕ 12.7.2009ರ ಮುಂಜಾನೆ ಇಬ್ಬರು ಪೋಲೀಸರು ತಮ್ಮ ಪ್ರಾತಃರ್ವಿಧಿಗಾಗಿ ಕ್ಯಾಂಪಿನ ಹೊರಗಡೆ ಬಯಲಿಗೆ ಹೋದಾಗ ಅವರನ್ನು ನಕ್ಸಲೀಯರು ಅಪಹರಿಸಿ ಅವರ ಮೇಲೆ ಗುಂಡು ಹಾರಿಸಿ ಕೊಲೆ ಮಾಡಿರುತ್ತಾರೆ. ಈ ವಿಷಯವನ್ನು ಅರಿತ ತಕ್ಷಣ ಜಿಲ್ಲಾ ಎಸ್‌ಪಿ ಚೌಬೆ ಸಿಬ್ಬಂದಿಯೊಂದಿಗೆ ಘಟನೆ ನಡೆದ ಸ್ಥಳಕ್ಕೆ ಧಾವಿಸಿದ್ದಾರೆ. ಪೋಲೀಸ್ ವಾಹನಗಳು ಕಾಡಿನಲ್ಲಿ ಹೊರಬಾಗ ಕಾಡಿನಲ್ಲಿ ಅಡಗಿದ್ದ ನಕ್ಸಲೀಯರು ಪೋಲೀಸ್ ತಂಡದ ಮೇಲೆ ಗುಂಡಿನ ಸುರಿಮಳೆಗರೆದಿದ್ದಾರೆ. ಇದರ ಫಲವಾಗಿ ಎಸ್‌ಪಿರವರ ವಾಹನ ಚಾಲಕ ಗಾಯಗೊಂಡಿದ್ದಾನೆ. ಎಸ್‌ಪಿ ಮತ್ತು ಸಿಬ್ಬಂದಿ ಮತ್ತೆ ಕೇಂದ್ರಸ್ಥಾನಕ್ಕೆ ವಾಪಸ್ಸಾಗಿ ಹೆಚ್ಚಿನ ಸಂಖ್ಯೆಯ ಪೋಲೀಸರನ್ನು ಜೊತೆ ಕರೆದುಕೊಂಡು ನೆಲ ಬಾಂಬ್ ನಿರೋಧಕ ವಾಹನದಲ್ಲಿ ಮತ್ತೊಮ್ಮೆ ಸ್ಥಳಕ್ಕೆ ಹೋಗಿದ್ದಾರೆ. ಕಾಡಿನ ಒಳಗಡೆ ಸುಮಾರು ಎರಡು ಕಿ.ಮೀ. ಬರುವವರೆಗೆ ಸುಮ್ಮನೆ ಇದ್ದ ನಕ್ಸಲೀಯರು ನೆಲ ಬಾಂಬ್‌ಗಳನ್ನು ಸ್ಫೋಟಿಸಿ ಹಾಗೂ ಗುಂಡಿನ ಸುರಿಮಳೆಗೈದು ಎಸ್‌ಪಿ ಹಾಗೂ ಅವರ ಜೊತೆ ಇದ್ದ ಎಲ್ಲಾ ಪೋಲೀಸರನ್ನು ಕೊಂದಿದ್ದಾರೆ.

ಏತನ್ಮಧ್ಯೆ ಬೇರೊಂದು ದಿಕ್ಕಿನಿಂದ ಸ್ಥಳಕ್ಕೆ ಬರಲು ಯೋಚಿಸಿದ್ದ ಇನ್ನೊಂದು ಪೋಲೀಸ್ ತಂಡವನ್ನು ನಕ್ಸಲೀಯರು ಅಪಹರಿಸಿ ಆ ತಂಡದಲ್ಲಿ ಇದ್ದ ಇಬ್ಬರು ಎಸ್‌ಐಗಳು ಹಾಗೂ ಒಬ್ಬ ಕಾನ್ಸ್‌ಟೇಬಲನ್ನು ಗುಂಡು ಹಾರಿಸಿ ಹತ್ಯೆಗೈದ್ದಿದ್ದಾರೆ. ಪೋಲೀಸರನ್ನು ಹತ್ಯೆಗೈಯಲು ನಕ್ಸಲೀಯರು ಅತ್ಯಂತ ಸೂಕ್ತ ಸ್ಥಳವನ್ನು ಆಯ್ಕೆ ಮಾಡಿಕೊಂಡಿರುವುದು ವಿದಿತವಾಗಿದೆ. ಘಟನೆಯಾದ ಸ್ಥಳವು ದೊಡ್ಡ ಕಾಡು ಪ್ರದೇಶವಾಗಿದ್ದು ಅದರ ಅಕ್ಕಪಕ್ಕದಲ್ಲಿ ಹಲವಾರು ಬೆಟ್ಟಗುಡ್ಡಗಳು ಇವೆ. ಎತ್ತರದ ಪ್ರದೇಶದಲ್ಲಿ ಕುಳಿತಿದ್ದ ನಕ್ಸಲೀಯರಿಗೆ ಕಾಡಿನಲ್ಲಿ ಓಡಾಡುವ ಪ್ರತಿಯೊಬ್ಬರೂ ಕಂಡುಬರುತ್ತಿದ್ದರು.

ಇತ್ತೀಚೆಗೆ ಸರ್ಕಾರ ಬಿಡುಗಡೆ ಮಾಡಿದ ಅಂಕಿಅಂಶಗಳ ಮೇರೆಗೆ 2004ರಲ್ಲಿ ನಕ್ಸಲೀಯರ ಘಟನೆಗಳಲ್ಲಿ 566 ಜನರು ಹತರಾಗಿದ್ದಾರೆ. 2005 ಹಾಗೂ 2006 ರಲ್ಲಿ ಈ ಸಂಖ್ಯೆ 677 ಮತ್ತು 678 ಮುಟ್ಟಿತ್ತು. 2007ರಲ್ಲಿ 696 ವ್ಯಕ್ತಿಗಳು ಸತ್ತಿದ್ದರೆ 2008ರಲ್ಲಿ 721 ವ್ಯಕ್ತಿಗಳು ಅಸುನೀಗಿದ್ದಾರೆ. ಈ ವರ್ಷ ಅಂದರೆ 2009ರ ಮೇ ಅಂತ್ಯದವರೆಗೆ 485 ವ್ಯಕ್ತಿಗಳು ನಕ್ಸಲ್ ಘಟನೆಗಳಲ್ಲಿ ಮೃತಪಟ್ಟಿರುತ್ತಾರೆ. ಇವರಲ್ಲಿ 230 ಜನ ಪೋಲೀಸ್ ಹಾಗೂ ರಕ್ಷಣಾ ದಳಗಳಿಗೇ ಸೇರಿದವರಾಗಿದ್ದಾರೆ.

2004ರಿಂದ 2008ರವರೆಗೆ ರಾಷ್ಟ್ರದಲ್ಲಿ ನಕ್ಸಲೀಯರಿಗೆ ಸಂಬಂಧಪಟ್ಟಂತೆ 7806 ಘಟನೆಗಳು ನಡೆದಿದೆ. ಈ ಘಟನೆಗಳು ಛತ್ತೀಸ್‌ಘಡ್. ಬಿಹಾರ. ಆಂಧ್ರಪ್ರದೇಶ. ಜಾರ್‌ಖಂಡ್. ಮಧ್ಯಪ್ರದೇಶ. ಮಹಾರಾಷ್ಟ್ರ. ಒರಿಸ್ಸಾ. ಉತ್ತರಪ್ರದೇಶ. ಪಶ್ಚಿಮಬಂಗಾಳ ಹಾಗೂ ಕರ್ನಾಟಕ ರಾಜ್ಯಗಳಲ್ಲಿ ನಡೆದಿದೆ. ಛತ್ತಿಸ್‌ಘಡ್ ರಾಜ್ಯವೊಂದರಲ್ಲೇ 1250 ಜನ ನಕ್ಸಲ್ ದಾಳಿಯಲ್ಲಿ ಪ್ರಾಣ ತೆತ್ತಿದ್ದಾರೆ.

ರಾಜನಂದಗಾಂವ್‌ನಲ್ಲಿ ನಡೆದ ಘಟನೆಯ ಮುನ್ನ ಇದೇ ವರ್ಷ ನಕ್ಸಲೀಯರು ಮಹಾರಾಷ್ಟ್ರದ ಗಡಚಿರೋಳಿ ಜಿಲ್ಲೆಯಲ್ಲಿ 16 ಜನ ಪೋಲೀಸರನ್ನು ಕೊಂದಿದ್ದು, ಪಶ್ಚಿಮ ಬಂಗಾಳದ ಪಶ್ಚಿಮಮೇದಿನಾಪುರ ಜಿಲ್ಲೆಯಲ್ಲಿಯೂ ತಮ್ಮ ಅಟ್ಟಹಾಸ ಮೆರೆದಿದ್ದರು. ನಮ್ಮ ರಾಜ್ಯದಲ್ಲೂ ಇತ್ತೀಚಿನ ದಿನಗಳಲ್ಲಿ ನಕ್ಸಲ್ ಸಂಘಟನೆ ಕಾಡಿನಿಂದ ನಗರದತ್ತ ಬರುತ್ತಿರುವುದು ಆತಂಕಕಾರಿಯಾಗಿದೆ.

ನಮ್ಮ ರಾಜ್ಯದಲ್ಲಿ ನಕ್ಸಲೀಯರು ಶಿವಮೊಗ್ಗ, ಚಿಕ್ಕಮಗಳೂರು, ಉಡುಪಿ, ದಕ್ಷಿಣ ಕನ್ನಡ, ಹಾಸನ, ರಾಯಚೂರು, ಮೈಸೂರು, ಚಾಮರಾಜನಗರ, ದಾರವಾಡ ಹಾಗೂ ಬೆಳಗಾವಿ ಜಿಲ್ಲೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಬೆಂಗಳೂರು ಹಾಗೂ ಶಿವಮೊಗ್ಗ ನಗರಗಳಲ್ಲಿ ವಿಭಾಗೀಯ ಮಟ್ಟದ ಸಮಿತಿಗಳನ್ನು ರಚಿಸಿಕೊಂಡಿದ್ದಾರೆ. ಶಿವಮೊಗ್ಗ ವಿಭಾಗಿಯ ಸಮಿತಿಯಲ್ಲಿ ಹರ್ಷ, ನಾಗರಾಜು ಹಾಗೂ ಅನಿತ ಎನ್ನುವವರು ಪ್ರಮುಖ ಸ್ಥಾನ ಪಡೆದಿದ್ದಾರೆ. ಬೆಂಗಳೂರಿನಲ್ಲಿ ನಂಜುಂಡ, ಪಲ್ಲವಿ, ಸಿಂದು ಹಾಗೂ ರೇಣುಕ ಕಾರ್ಯನಿರ್ವಹಿಸುತ್ತಿದ್ದಾರೆ. ತಮ್ಮ ವಿರೋಧಿಗಳನ್ನು ಕೊಲೆ ಮಾಡುವ ಉದ್ದೇಶದಿಂದಲೇ ರಾಜ್ಯದ ನಕ್ಸಲೀಯರು ಒಂದು ವಿಶೇಷ ತಂಡವನ್ನು ರಚಿಸಿದ್ದಾರೆ. ಇದೇ ತಂಡವು ಉಡುಪಿಯ ಭೋಜರಾಜಶೆಟ್ಟಿ ಅವರನ್ನು ಕೊಂದಿದೆಯೆಂದು ಹೇಳಲಾಗಿದೆ. ಬೆಂಗಳೂರಿನಿಂದಲೇ ನಕ್ಸಲೀಯರು ಕನ್ನಡದ ಮೂರು ಪತ್ರಿಕೆಗಳನ್ನು ಪ್ರಕಟಿಸುತ್ತಿದ್ದಾರೆ. ಶಿವಮೊಗ್ಗದಿಂದ ಒಂದು ಪತ್ರಿಕೆ ಪ್ರಕಟವಾಗುತ್ತಿದೆ. ಬೆಂಗಳೂರಿನಲ್ಲಿರುವ ನಕ್ಸಲ್ ರಾಜ್ಯಮಟ್ಟದ ಸಂಘಟನೆಗೆ ದೇವೇಂದ್ರಪ್ಪ ಊ ದೇವಣ್ಣ ಎನ್ನುವ ವ್ಯಕ್ತಿಯು ಮುಖ್ಯಸ್ಥರಾಗಿದ್ದಾರೆ. ನಕ್ಸಲ್ ರಾಜ್ಯಮಟ್ಟದ ಸಮಿತಿಯ ಎಲ್ಲಾ ಸದಸ್ಯರೂ [ಬಿ.ಜಿ.ಕೃಷ್ಣಮೂರ್ತಿ ಹೊರತಾಗಿ] ಕಾಡಿನಲ್ಲಿ ಕಾರ್ಯನಿರ್ವಹಿಸದೇ ಪಟ್ಟಣ ಹಾಗೂ ನಗರಗಳಲ್ಲೇ ವಾಸಿಸುತ್ತಾ ಇರುವುದು ಒಂದು ವಿಶೇಷ. ಇನ್ನು ಮುಂದೆ ತಾವುಗಳು ತಮ್ಮ ಸಂಘಟನೆಯನ್ನು ನಗರಪ್ರದೇಶಗಳಲ್ಲಿ ಚುರುಕುಗೊಳಿಸುವುದಾಗಿ ನಕ್ಸಲ್ ಸಂಘಟನೆಯ ಪ್ರಮುಖ ವ್ಯಕ್ತಿಯೊಬ್ಬನು ಪ್ರಜಾವಾಣಿಗೆ ಇತ್ತೀಚೆಗೆ ಸಂದರ್ಶನ ನೀಡಿದ್ದಾನೆ.

ತೀವ್ರವಾಗುತ್ತಿರುವ ನಕ್ಸಲ್ ಸಮಸ್ಯೆಯನ್ನು ಸಾಕಷ್ಟು ಪರಿಣಾಮಕಾರಿಯಾಗಿ ಎದುರಿಸಲು ರಾಜ್ಯ ಹಾಗೂ ಕೇಂದ್ರಸರ್ಕಾರಗಳು ಹಲವಾರು ಕ್ರಮಗಳನ್ನು ತೆಗೆದುಕೊಳ್ಳುತ್ತಿದ್ದರೂ, ಆ ಕ್ರಮಗಳು ಏಕೆ ಪರಿಣಾಮಕಾರಿಯಾಗುತ್ತಿಲ್ಲ ಎನ್ನುವುದು ಹಲವರನ್ನು ಚಿಂತಿಗೀಡುಮಾಡಿದೆ. ಜುಲೈ12 ರ ರಾಜನಂದಗಾಂವ್ ಜಿಲ್ಲೆ ಪ್ರಕರಣವನ್ನೇ ನೋಡೋಣ. ನಕ್ಸಲೀಯರು ಇಬ್ಬರು ಪೋಲೀಸರನ್ನು ಅಪಹರಿಸಿದ್ದು ಪೋಲೀಸರು ಬಹಿರ್ದೆಸೆಗೆ ಬಯಲಿಗೆ ಹೋದಾಗ. ನಕ್ಸಲ್ ನಿಗ್ರಹಕ್ಕೋಸ್ಕರ ಬರುವ ಪೋಲೀಸರಿಗೆಂದು ತಾತ್ಕಾಲಿಕ ಕ್ಯಾಂಪನ್ನು ಮಾಡುವಾಗ, ಕ್ಯಾಂಪಿನಲ್ಲಿ ಶೌಚಾಲಯಗಳನ್ನು ಮಾಡುವುದಿಲ್ಲ. ಹೀಗಾಗಿ ಕ್ಯಾಂಪಿಗೆ ಬರುವ ಪೋಲೀಸರು ಬೆಳಗಿನ ಜಾವ ಬಯಲಿನ ಕಡೆಗೆ ಹೋಗಬೇಕಾಗುತ್ತದೆ. ಇದೇ ಸಂದರ್ಭವನ್ನು ಉಪಯೋಗಿಸಿ ನಕ್ಸಲೀಯರು ಪೋಲೀಸರ ಹತ್ಯೆ ಮಾಡುತ್ತಾರೆ. ಪಶ್ಚಿಮ ಬಂಗಾಳದ ಲಾಲ್‌ಗಡ್ ಪ್ರದೇಶಕ್ಕೆ ಅರೆ ಸೈನ್ಯ ಪಡೆಗಳು ಬಂದಾಗ ಮುಂಜಾನೆ

ಬಹಿರ್ದೆಸೆಗೆ ಹೋಗುವ ಪೊಲೀಸರನ್ನು ಕಾಯಲು ಸಶಸ್ತ್ರಧಾರಿ ಪೊಲೀಸರನ್ನು ನೇಮಕ ಮಾಡಲಾಗಿತ್ತು. ನಕ್ಸಲ್ ನಿಯಂತ್ರಣಕ್ಕೆ ಹೋಗುವ ಪೊಲೀಸರಿಗೆ ಸರಿಯಾದ ಸವಲತ್ತುಗಳನ್ನು ಒದಗಿಸುವಲ್ಲಿ ನಾವು ಹೆಚ್ಚಿನ ಆಸಕ್ತಿ ತೋರುತ್ತಿಲ್ಲ ಎನಿಸುತ್ತದೆ.

ನಕ್ಸಲ್ ನಿಗ್ರಹವನ್ನು ಮೂಲತಃ ಮಾಡಬೇಕಾದ್ದು ರಾಜ್ಯಗಳ ಪೊಲೀಸರು. ಆದರೂ ಹಲವಾರು ರಾಜ್ಯಗಳಲ್ಲಿ ಜನಸಂಖ್ಯೆ ಹಾಗೂ ಪೊಲೀಸರ ಅನುಪಾತ ಸಾಕಷ್ಟು ಕಡಿಮೆಯಾಗಿದೆ. ನಕ್ಸಲ್ ನಿಗ್ರಹಕ್ಕೆ ಸಾಮಾನ್ಯವಾಗಿ ನೇಮಕಗೊಳ್ಳಬೇಕಾದವರು ರಿಸರ್ವ್ ಪೊಲೀಸ್ ಸಿಬ್ಬಂದಿ. ಏಕೆಂದರೆ ಪೊಲೀಸ್ ಠಾಣೆಗಳಲ್ಲಿ ಕೆಲಸ ಮಾಡುವ ಸಿವಿಲ್ ಪೊಲೀಸರ ಸಂಖ್ಯೆ ಕಡಿಮೆಯಾಗುತ್ತಿರುವುದರಿಂದಲೂ ಹಾಗೂ ಸಿವಿಲ್ ಪೊಲೀಸರಿಗೆ ನಕ್ಸಲ್ ವಿರೋಧಿ ಕ್ರಮಗಳ ಬಗ್ಗೆ ಹೆಚ್ಚಿನ ಜ್ಞಾನ ಹಾಗೂ ಪರಿಣಿತಿ ಇಲ್ಲದೇ ಇರುವುದರಿಂದಲೂ ರಾಜ್ಯಗಳು ನಕ್ಸಲ್ ನಿಗ್ರಹಕ್ಕೆ ರಿಸರ್ವ್ ಪೊಲೀಸರ ಮೊರೆ ಹೋಗಬೇಕಾಗುತ್ತದೆ. ರಿಸರ್ವ್ ಪೊಲೀಸರ ಸಂಖ್ಯೆ ಕಡಿಮೆಯಾಗುತ್ತಿದೆ. ಇವರನ್ನು ಹೆಚ್ಚಾಗಿ ಕಾನೂನು-ಸುವ್ಯವಸ್ಥೆ ಕಾರ್ಯಗಳಿಗೆ ಉಪಯೋಗಿಸಬೇಕಾಗಿರುವುದರಿಂದ ಹೆಚ್ಚಿನ ಸಂಖ್ಯೆಯಲ್ಲಿ ಇವರನ್ನು ನಕ್ಸಲ್ ವಿರೋಧಿ ಚಟುವಟಿಕೆಗಳಿಗೆ ಬಳಸಲು ಆಗುವುದಿಲ್ಲ. ಹಣಕಾಸಿನ ಕೊರತೆಯಿಂದಾಗಿ ಹಲವಾರು ರಾಜ್ಯಸರ್ಕಾರಗಳು ಪೊಲೀಸ್ ನೇಮಕಾತಿಯನ್ನೇ ನಿಲ್ಲಿಸಿಬಿಟ್ಟಿದೆ. ಹೀಗಾಗಿ ನಕ್ಸಲ್ ನಿಗ್ರಹಕ್ಕೆ ಸಾಕಷ್ಟು ಸಂಖ್ಯೆಯಲ್ಲಿ ಪೊಲೀಸರು ಸಿಗುತ್ತಿಲ್ಲ. ರಾಜ್ಯ ಸರ್ಕಾರಗಳು ಮೇಲಿಂದ ಮೇಲೆ ಕೇಂದ್ರ ರಕ್ಷಣಾ ಪಡೆಗಳನ್ನೇ ಅವಲಂಬಿಸಬೇಕಾದ ಪರಿಸ್ಥಿತಿ ಬಂದಿದೆ. ರಾಜ್ಯಗಳಿಗೆ ಬರುವ ಕೇಂದ್ರ ಪಡೆಗಳಿಗೆ ತಾವು ಕಾರ್ಯನಿರ್ವಹಿಸುವ ಸ್ಥಳದ ಬಗ್ಗೆ ಅರಿವು ಬರಬೇಕಾದರೆ ಕನಿಷ್ಠ ಒಂದು ತಿಂಗಳು ಕಳೆದುಹೋಗಿರುತ್ತದೆ.

ಒಂದು ವೇಳೆ ಸಾಕಷ್ಟು ಪೊಲೀಸರು ದೊರೆತರೂ ನಕ್ಸಲ್ ನಿಗ್ರಹದಂತಹ ವಿಶೇಷ ಕಾರ್ಯಕ್ಕಾಗಿ ಪೊಲೀಸರಿಗೆ ಹೆಚ್ಚಿನ ತರಬೇತಿ ಅಗತ್ಯವಿದೆ. ಗುಡ್ಡಗಾಡುಗಳು, ದಟ್ಟ ಅರಣ್ಯಗಳಲ್ಲಿ ಗೆರಿಲ್ಲಾ ಯುದ್ಧ ತಂತ್ರಗಳನ್ನು ಕಲಿಸಲು ಭಾರತೀಯ ಸೇನೆಗೆ ಸಾಧ್ಯ. ಪೊಲೀಸರಿಗಾಗಿ ಆಂದ್ರಪ್ರದೇಶದಲ್ಲಿ ಗ್ರೇಹೌಂಡ್ಸ್ ಎಂಬ ಸಂಸ್ಥೆಯಲ್ಲಿ ತರಬೇತಿ ನೀಡಲಾಗುತ್ತಿದೆ. ಅದೇ ರೀತಿ ಮಿಜೋರಾಂ ಹಾಗೂ ಜಾರ್ಖಂಡ್‌ನಲ್ಲಿಯೂ ಅರಣ್ಯ ಯುದ್ಧ ಕಲಿಸುವ ತರಬೇತಿ ಶಾಲೆಗಳನ್ನು ತೆರೆಯಲಾಗಿದೆ. ಈ ರೀತಿಯ ಶಾಲೆಗಳಿಗೆ ತರಬೇತಿಗೆ ಕಳುಹಿಸಿದರೆ ತರಬೇತಿ ಮುಗಿಸಲು ಕನಿಷ್ಟಪಕ್ಷ ಆರರಿಂದ ಒಂಬತ್ತು ತಿಂಗಳು ಬೇಕಾಗುತ್ತವೆ ಹೀಗಾಗಿ ರಾಜ್ಯಗಳು ಹೆಚ್ಚಿನ ಸಂಖ್ಯೆಯಲ್ಲಿ ಪೊಲೀಸರನ್ನು ತರಬೇತಿಗೆ ಕಳಿಸಲು ಸಾಧ್ಯವಿಲ್ಲ. ಸರಿಯಾಗಿ ತರಬೇತಿ ಹೊಂದದ ಪೊಲೀಸರು ರಾಜನಂದಗಾವ್‌ನಲ್ಲಿ ಆದಂತೆ, ಇಲ್ಲ ಗಡಚಿರೋಳಿಯಲ್ಲಿ ಆದಂತೆ ನಕ್ಸಲರ ಬಾಂಬ್‌ಗಳು-ಗುಂಡುಗಳಿಗೆ ಅನಾಯಾಸವಾಗಿ ಬಲಿಯಾಗುತ್ತಾ ಬಂದಿದ್ದಾರೆ.

ರಾಜನಂದಗಾಂವ್‌ನಲ್ಲಿ ಪೊಲೀಸರು ಬಳಸುತ್ತಿರುವ ಬಾಂಬ್ ನಿರೋಧಕ ವಾಹನಗಳೂ ಅಪಾಯದಿಂದ ಪಾರಾಗಿಲ್ಲ ಎನ್ನುವುದು ಸಾಬೀತಾಗಿದೆ. ಹೀಗಾಗಿ ಪೊಲೀಸರಿಗೆ

ಉತ್ತಮ ರೀತಿಯ ಉಪಕರಣಗಳನ್ನು ಒದಗಿಸಬೇಕಾಗಿದೆ. ನಕ್ಸಲೀಯರಿಗೆ ಸರಬರಾಜಾಗುತ್ತಿದ್ದ ರಾಂಚಿಯಲ್ಲಿ ಜಫ್ತು ಮಾಡಿದ ಉಪಕರಣಗಳತ್ತ ಗಮನ ಹರಿಸಿದರೆ, ನಕ್ಸಲೀಯರು ತಮ್ಮ ತಮ್ಮಲ್ಲಿ ಸಂಭಾಷಣೆ ನಡೆಸಲು ಕಡಿಮೆ ಫ್ರೀಕ್ವೆನ್ಸಿ ವಾಕೀಟಾಕೀ, ಸಾಟಲೈಟ್ ಫೋನ್ ಇತ್ಯಾದಿಗಳನ್ನು ಬಳಸುತ್ತಿದ್ದಾರೆ. ಈ ರೀತಿ ಫೋನ್‌ಗಳನ್ನು ಉಪಯೋಗವಾಗದಂತೆ ಜಾಮ್ ಮಾಡಬೇಕಾಗಿದೆ. ಅದಲ್ಲದೆ ಇಂತಹ ಫೋನ್‌ಗಳಿಂದ ನಡೆಯುವ ಸಂಭಾಷಣೆಗಳನ್ನು ಪೋಲೀಸರು ಆಲಿಸಬೇಕಾಗಿದೆ. ಇಂತಹ ಕಾರ್ಯವನ್ನು ಮಾಡಲು ಹೆಚ್ಚಿನ ಗುಣಮಟ್ಟದ ಉಪಕರಣಗಳ ಅಗತ್ಯ ಪೋಲೀಸರಿಗೆ ಇದೆ. ಭಾರತದ ಪ್ರಧಾನ ಮಂತ್ರಿಗಳ ಭದ್ರತೆಗೆಂದು ನಿಯುಕ್ತವಾಗಿರುವ ಎಸ್‌ಪಿಜಿ ಹಾಗೂ ಆತಂಕವಾದಿಗಳನ್ನು ಎದುರಿಸಲು ನೇಮಕಗೊಂಡಿರುವ ಎನ್‌ಎಸ್‌ಜಿ ಘಟಕಗಳಲ್ಲಿ ಅತ್ಯಂತ ನೂತನ ಮಾದರಿಯ ಶಸ್ತ್ರಾಸ್ತ್ರಗಳು ಹಾಗೂ ರಕ್ಷಣಾ ಉಪಕರಣಗಳು ಇವೆ. ಇಂತಹ ಉಪಕರಣಗಳನ್ನು ರಾಜ್ಯ ಪೋಲೀಸರು ಪಡೆಯಲು ಕೇಂದ್ರದಿಂದ ಇನ್ನೂ ಭಾರಿ ಪ್ರಮಾಣದಲ್ಲಿ ಆರ್ಥಿಕ ನೆರವು ಬರಬೇಕಾಗಿದೆ.

ಎಲ್ಲಕ್ಕಿಂತ ಮುಖ್ಯವಾಗಿ ನಕ್ಸಲ್ ಸಮಸ್ಯೆ ಕೇವಲ ಒಂದು ರಾಜ್ಯದ ಸಮಸ್ಯೆಯಾಗಿಲ್ಲ. ಅದು ಇಡೀ ರಾಷ್ಟ್ರದ ಸಮಸ್ಯೆ ಎಂದು ಎಲ್ಲರೂ ಅರಿಯಬೇಕಾಗಿದೆ. ಪ್ರಧಾನ ಮಂತ್ರಿ ಹಾಗೂ ಕೇಂದ್ರ ಗೃಹಸಚಿವರು ನಕ್ಸಲ್ ಸಮಸ್ಯೆ ಆತಂಕವಾದಿಗಳ ಸಮಸ್ಯೆಗಳಿಗಿಂತ ಹೆಚ್ಚು ಗಂಭೀರ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಕೇಂದ್ರ ಸರ್ಕಾರವು ನಕ್ಸಲೀಯರ ನಿಗ್ರಹಕ್ಕೆ 26,000 ಬಲಹೊಂದಿರುವ ವಿಶೇಷ ದಳವನ್ನು ಸ್ಥಾಪಿಸಲು ಉದ್ದೇಶಿಸಿದೆ ಎಂದು ಇದೇ ವಾರ ಕೇಂದ್ರ ಗೃಹ ಇಲಾಖೆ ತಿಳಿಸಿರುವುದು ಸ್ವಾಗತಾರ್ಹ. ಎಲ್ಲಕ್ಕಿಂತ ಹೆಚ್ಚಾಗಿ ನಕ್ಸಲ್ ದಾಳಿಗೆ ತುತ್ತಾಗುತ್ತಿರುವ ಒಂಬತ್ತೂ ರಾಜ್ಯಗಳು ಒಗ್ಗಟ್ಟಾಗಿ ಏಕಕಾಲದಲ್ಲಿ ನಕ್ಸಲ್ ಸಮಸ್ಯೆಯನ್ನು ಎದುರಿಸಬೇಕಾಗಿದೆ. ಹೀಗಾದಾಗ ಮಾತ್ರ ಈ ಸಮಸ್ಯೆಗೆ ಪರಿಹಾರ ಸಿಗುವ ಸಾಧ್ಯತೆ ಇದೆ.



ಡಾ. ಡಿ.ವಿ. ಗುರುಪ್ರಸಾದ್

ಸಾರ್ವಜನಿಕರು ಹಾಗೂ ಪೋಲೀಸರ ನಡುವಿನ ಅಂತರ ಕಡಿಮೆಯಾಗಲಿ ಎನ್ನುವ ಉದ್ದೇಶದಿಂದ ಡಿಜಿಪಿ ದರ್ಜೆಯ ಪೋಲೀಸ್ ಅಧಿಕಾರಿ ಡಾ॥.ಡಿ.ವಿ.ಗುರುಪ್ರಸಾದ್ ತಮ್ಮ ಬರಹಗಳು, ಸಂದರ್ಶನಗಳು ಮತ್ತಿತರ ಮಾಧ್ಯಮಗಳ ಮೂಲಕ ಪೋಲೀಸರ ಬಗ್ಗೆ ಸಾರ್ವಜನಿಕರಿಗೆ ಸಾಕಷ್ಟು ಅರಿವು ಮೂಡಿಸುತ್ತಿದ್ದಾರೆ. ಶ್ರೀಯುತರು ಈಗಾಗಲೇ ಆರುನೂರಕ್ಕೂ ಹೆಚ್ಚು ಲೇಖನಗಳನ್ನು ಬರೆದಿದ್ದಾರೆ. ಪೋಲೀಸ್ ವಿಷಯಗಳ ಬಗ್ಗೆ ಹದಿನೈದಕ್ಕೂ ಹೆಚ್ಚು ಪುಸ್ತಕಗಳನ್ನು ರಚಿಸಿದ್ದಾರೆ. ಆತಂಕವಾದದ ಸವಾಲು ಅವರ ಇತ್ತೀಚಿನ ಕೃತಿ. ಈ ಕೃತಿಯಲ್ಲಿ ಅವರು ನಮ್ಮ ದೇಶದಲ್ಲಿ ಆತಂಕವಾದದ ಬೆಳವಣಿಗೆ ಬಗ್ಗೆ ದಾಖಲಿಸಿರುವುದೇ ಅಲ್ಲದೆ ಪೋಲೀಸ್ ಹಾಗೂ ಭದ್ರತೆಗೆ ಸಂಬಂಧಿಸಿರುವ ಹಲವಾರು ಪ್ರಚಲಿತ ವಿಷಯಗಳ ಬಗ್ಗೆ ಕ್ಷಕಿರಣ ಬೀರಿದ್ದಾರೆ. ಸಂಗ್ರಹ ಯೋಗ್ಯ ರೆಫರೆನ್ಸ್ ಕೃತಿ ಇದು.




ಸಪ್ನ ಬುಕ್ ಹೌಸ್®

3ನೇ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು - 560 009
ದೂರವಾಣಿ : 40114455

Shop online : www.sapnaonline.com

ISBN : 978-81-280-1078-1




ಬೆಲೆ ರೂ.110/-